# "ಚಿತ್ರಾಂಗದೆ"



ಪದ್ಮಾ ಶ್ರೀಧರ್

**ಧೃತಿ ಪ್ರಕಾಶನ**
ಜಿ-3, ಹಯಗ್ರೀವ ಅಪಾರ್ಟ್‌ಮೆಂಟ್
1 ಮತ್ತು 2, ದತ್ತಾತ್ರೇಯ ದೇವಸ್ಥಾನದ ರಸ್ತೆ
ನರಸಿಂಹರಾಜ ಕಾಲೋನಿ, ಬಸವನಗುಡಿ
ಬೆಂಗಳೂರು - 560 004

*"Chitrangade"* - a novel written by ***M.V.Padma Sridhar,***
No.1248, 7th B Cross, Yalahanka Upanagar, Bangalore-64,
Phone : 28565466. Published by ***Dhruthi Prakashana,***
G3, Hayagreeva Apartments, 1 & 2 Dattatreya Temple Rd., N.R. Colony, Basavanagudi, Bangalore- 4.

ಪ್ರಥಮ ಮುದ್ರಣ : 2006

ಹಕ್ಕುಗಳು : ಲೇಖಕರದು

ಪುಟಗಳು : iii + 210 = 213

ಮುಖ ಪುಟ : ಮೋನಪ್ಪ

ರೂ. : **80/-**

ಅಕ್ಷರ ಜೋಡಣೆ :
**ಶ್ರೀ ಲಕ್ಷ್ಮೀ ಎಂಟರ್‌ಪ್ರೈಸಸ್**
ನಂ.1052, ಮೊದಲ ಹಂತ
ಕುಮಾರಸ್ವಾಮಿ ಬಡಾವಣೆ
ಬೆಂ. – 78 ; ಮೊ : 9886255928

ಮುದ್ರಕರು :
**ಅಶ್ವಿನಿ ಪ್ರಿಂಟರ್ಸ್**
ಬೆಂಗಳೂರು -53.

# ಲೇಖಕಿಯ ನುಡಿ

'ಚಿತ್ರಾಂಗದೆ' ಕಾದಂಬರಿಯ ಹೆಸರು. ಹೆಸರು ಪೌರಾಣಿಕವಾಗಿ ಕಂಡು ಬಂದರೂ, ಕೌಟುಂಬಿಕ ಪಾತ್ರಗಳನ್ನೊಳಗೊಂಡ ಸಾಮಾಜಿಕ ಕಾದಂಬರಿ ಇದು. ಹಸ್ತಪ್ರತಿಯನ್ನು ಓದಿರುವ ಸ್ನೇಹಿತರು, 'ಚಿತ್ರಾಂಗದೆ' ಎನ್ನುವ ಹೆಸರು ಚೆನ್ನಾಗಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಕಥಾನಾಯಕಿಯ ಹೆಸರು ಚಿತ್ರಾಂಗದೆ ಅಲ್ಲ, ಅದು ಅವಳನ್ನು ಮೆಚ್ಚಿದ ಸ್ನೇಹಿತನೊಬ್ಬ ಅವಳಿಗೆ ಇಟ್ಟ ಹೆಸರು.

'ಚಿತ್ರಾಂಗದೆ'ಯಷ್ಟೇ ಸುಂದರಿ ಎನ್ನಿಸಿಕೊಳ್ಳುವ ನಾಯಕಿಯ ಪಾತ್ರದೊಂದಿಗೆ ಕಾದಂಬರಿ ಪ್ರಾರೆಂಭವಾಗುತ್ತದೆ. ನಾಯಕನ ದ್ವಂದ್ವಗಳಿಗೆ ಸಲಹೆ, ಪರಿಹಾರವನ್ನು ಹೇಳುತ್ತಾ ಅವನ ಒಲವಿನ ಗೆಳತಿಯಾಗುತ್ತಾಳೆ. ಅವನ ಆಸೆಗೆ ಮಣಿದು ಅವನ ಮಗುವಿಗೆ ತಾಯಿಯಾಗುತ್ತಾಳೆ. ಇದು ಮಾತ್ರವಲ್ಲದೇ, ಇವರಿಬ್ಬರೊಂದಿಗೆ ಬರುವ ಹತ್ತಿರದ ಪಾತ್ರಗಳ ಜೊತೆ ಜೊತೆಯಲ್ಲಿ ಕತೆ ತಿರುವುಗಳನ್ನು ಪಡೆದುಕೊಂಡು ವಿಸ್ತಾರಗೊಳ್ಳುತ್ತದೆ. ಚಿತ್ರಾಂಗದೆಯ ಬಾಳಿನಲ್ಲಿ ಬರುವ ಬಿರುಗಾಳಿ, ಅದನ್ನು ಅವಳು ಎದುರಿಸುವ ರೀತಿ, ನಾಯಕನ ಪರದಾಟ ಹೀಗೆ ಸಮಸ್ಯೆಗಳು, ಹುಟ್ಟಿಕೊಂಡು, ಏರುಪೇರುಗಳು ಕಾಣಿಸಿಕೊಳ್ಳುತ್ತವೆ. ಇದು ಕಾದಂಬರಿಯನ್ನು ಕುರಿತು ಕೊಡುವ ಪರಿಚಯ ಅಷ್ಟೇ.

ಈ ಕಾದಂಬರಿಯ ಹಸ್ತಪ್ರತಿಯನ್ನು ಓದಿ ಮೆಚ್ಚುಗೆಯನ್ನು ಸೂಸಿರುವ ನನ್ನ ಸ್ನೇಹಿತರಿಗೆ ನನ್ನ ಕೃತಜ್ಞತೆಗಳು ಈಗ ಈ 'ಚಿತ್ರಾಂಗದೆ'ಯು ಪುಸ್ತಕದ ರೂಪದಲ್ಲಿ ನಿಮ್ಮ ಮುಂದೆ ಪ್ರಕಟವಾಗಲಿದ್ದಾಳೆ. ಓದಿ, ಮೆಚ್ಚುವಿರೆಂಬ ಹಾರೈಕೆ ನನ್ನದು.

ಪುಸ್ತಕ ಪ್ರಕಟಣೆಯ ಹೊಣೆಯನ್ನು ಹೊತ್ತು, ಮತ್ತೊಮ್ಮೆ ನನ್ನನ್ನು ಓದುಗರಿಗೆ ಪರಿಚಯಿಸುತ್ತಿರುವ ವಸಂತ ಪ್ರಕಾಶನದ ಬಳಗದವರೆಲ್ಲರಿಗೂ ನನ್ನ ಧನ್ಯವಾದಗಳು. ಅಂದವಾಗಿ ಮುಖಪುಟವನ್ನು ಚಿತ್ರಿಸಿಕೊಟ್ಟ ಕಲಾವಿದರಿಗೆ ಹಾಗೂ ಅಕ್ಷರಜೋಡಣೆ ಮಾಡಿದ ಶ್ರೀ ಲಕ್ಷ್ಮಿ ಎಂಟರ್‌ಪ್ರೈಸಸ್‌ನ ಶ್ರೀಮತಿ ವಸಂತಲಕ್ಷ್ಮಿ ಅವರಿಗೂ ನನ್ನ ಧನ್ಯವಾದಗಳು.

"ಎಲ್ಲರಿಗೂ ಹೊಸವರ್ಷದ ಶುಭಾಶಯಗಳು"

ಬೆಂಗಳೂರು

ಇತಿ<br>ತಮ್ಮ ವಿಶ್ವಾಸಿ<br>ಪದ್ಮಾಶ್ರೀಧರ್

# "ಚಿತ್ರಾಂಗದೆ"

"ನಮಸ್ಕಾರ ಆಂಟೀ..." ಎಂದು ಕೈ ಮುಗಿದು, ಮುಗುಳ್ನಗುತ್ತಾ ಮುಂಬಾಗಿಲಲ್ಲಿ ನಿಂತಿದ್ದ ಯುವತಿಯನ್ನೇ ಪ್ರಶ್ನಾರ್ಥಕವಾಗಿ ನೋಡಿದಳು ಜಾನಕಿ.

"ನನ್ನ ಫ್ರೆಂಡ್ ಸುಚಿತ್ರ... ಹೇಳಿದ್ಲು..." ನಿಮ್ಮನ್ನು ಮೀಟ್ ಮಾಡೋಕೆ..." ಯುವತಿ ಅನುಮಾನಿಸುತ್ತಾ ನುಡಿದಳು.

"ಓ... ಹೊ... ಹೋ..." ನೀನೇನಾ... ಸುಚಿತ್ರ ಫೋನು ಮಾಡಿದ್ಲು... ಅಂದ್ಹಾಗೇ ನಿನ್ನ ಹೆಸರು ?

"ನನ್ನ ಹೆಸರು ಸುಮತಿ... ನಾನು ಜೂನಿಯರ್ ಕಾಲೇಜಿನಲ್ಲಿ ಲೆಕ್ಚರರ್ ಆಗಿದೀನಿ..." ತನ್ನ ಪರಿಚಯವನ್ನು ಹೇಳಿಕೊಂಡಳು.

"ಓ ಗೊತ್ತಾಯ್ತು... ಸುಚಿತ್ರ ಎಲ್ಲಾ ಹೇಳಿದಾಳೆ. ಒಳಗೆ ಬಾಮ್ಮಾ... ಜಾನಕಿ ಆದರಣೆಯಿಂದ ಒಳಗೆ ಕರೆದಾಗ, ಸುಮತಿ ದೀರ್ಘವಾದ ಉಸಿರನ್ನು ಬಿಟ್ಟಳು. ಆತಂಕ ಕಡಿಮೆಯಾಗಿತ್ತು ಒಳಗೆ ಬಂದು ನಿಂತಳು.

"ಕೂತ್ಕೋಮ್ಮಾ.. ಮತ್ತೊಮ್ಮೆ ಜಾನಕಿ ಉಪಚರಿಸಿದಳು. ಸುಮತಿ ಸೋಫಾದ ಮೇಲೆ ಕುಳಿತು ಸುತ್ತಲೂ ಕಣ್ಣು ಹರಿಸಿದಳು.

"ನೀನು ಬೇಕಾದ್ರೆ ಹೋಗಿ ರೂಮನ್ನು ನೋಡಿಕೊಂಡು ಬಾ... ಮಹಡಿ ಮೇಲಿದೆ ರೂಮು" ಎಂದು ಮೇಲೆ ಕೈ ತೋರಿದಳು. ಸುಮತಿ ಅನುಮಾನ ಸಂಕೋಚಗಳಿಂದ ಅವಳನ್ನೇ ನೋಡಿದಳು.

"ನಾನು ಮೆಟ್ಟಿಲುಗಳನ್ನು ಹತ್ತಲಾರೆ... ಹಾಳಾದ್ದು ಮಂಡಿನೋವು" ಎನ್ನುತ್ತಾ ಮಂಡಿಗಳನ್ನು ಕೈಗಳಿಂದ ಸವರಿಕೊಂಡಳು.

ಇದೇನು, ಇಷ್ಟು ದೊಡ್ಡ ಮನೆಯಲ್ಲಿ ಈ ಆಂಟಿ ಒಬ್ಬರೇ ಇದ್ದಾರೈ ? ಸುಚಿತ್ರ, ಇವರಿಗೊಬ್ಬ ಮಗನೂ ಇದಾನೆ ಅಂತ ಹೇಳಿದಂತೆ ನೆನಪು" ಎಂದು ಕೊಳ್ಳುತ್ತಾ ಸುಮತಿ ಮೆಟ್ಟಿಲುಗಳನ್ನೇರಿದಳು.

ಮಹಡಿಯ ಮೇಲೆ ಎರಡು ರೂಮುಗಳಿದ್ದವು. ಒಂದು ರೂಮಿನ ಬಾಗಿಲು ತೆಗೆದಿತ್ತು. ಇನ್ನೊಂದು ರೂಮಿನ ಬಾಗಿಲಿಗೆ ಬೀಗ ಹಾಕಿತ್ತು. ತೆರೆದ ಬಾಗಿಲಿನ ರೂಮಿನ ಒಳಗೆ ಬಂದಳು. ರೂಮಿನ ಅಚ್ಚುಕಟ್ಟು, ಶುಭ್ರತೆ ದಂಗು ಬಡಿಯುವಂತಿತ್ತು. ತುಂಬು ನೋಟದಿಂದ ರೂಮನ್ನು ನೋಡಿದಳು ಜೊತೆಗೆ ಏನೋ ದಿಗಿಲು. ಎಷ್ಟು ಬಾಡಿಗೆ ಕೇಳಿಬಿಡುವರೋ... ಅಂತ. ರೂಮಿನ ಒಂದು ಕಡೆ ಒಂದು ಮಂಚ, ಮಂಚದ ಮೇಲೆ ಹಾಸಿಗೆ, ಇಳಿ ಬಿದ್ದಿದ್ದ ಸೊಳ್ಳೆ ಪರದೆ, ಅದರ ಇನ್ನೊಂದು ಪಕ್ಕಕ್ಕೆ ಒಂದು ಟೇಬಲ್, ಟೇಬಲ್ ಮೇಲೆ ಲ್ಯಾಂಪ್, ಕುರ್ಚಿ, ಒಂದು ಕಬೋರ್ಡ್ ಎಲ್ಲವನ್ನು ಗಮನಿಸಿದಳು. ಅದಕ್ಕೆ ಅಂಟಿಕೊಂಡಿಯೇ ಇದ್ದಂತಹ ಟಾಯ್ಲೆಟ್ ಕಡೆ ಇಣುಕಿದಳು. ಫಳಫಳನೆ ಹೊಳೆಯುವ ಟೈಲ್ಸ್, ಅದಕ್ಕೆ ಮ್ಯಾಚ್ ಆಗುವಂತಹ ವಾಷ್‌ಬೇಸನ್, ಗೀಸರ್ ಪ್ರತಿಯೊಂದೂ ಮತ್ತೊಮ್ಮೆ ನೋಡುವಂತಿತ್ತು. ಇದು ಯಾವ ಫೈವ್‌ಸ್ಟಾರ್ ಹೋಟೆಲ್ಲಿನ ರೂಮನ್ನೂ ಹೋಲುತ್ತದೋ ಅಂತಂದುಕೊಂಡಳು. ಅಲ್ಲಿದ್ದ ದೊಡ್ಡ ಕನ್ನಡಿಯಲ್ಲಿ ತನ್ನ ಮುಖ ಕಂಡಿತು ಅವಳಿಗರಿವಿಲ್ಲದಂತೆಯೇ ಮುಗುಳ್ನಗು ಮೂಡಿತು. ಕೆಳಗಿಳಿದು ಬಂದಳು.

"ಏನಮ್ಮಾ ರೂಮು ಹಿಡಿಸ್ತೇ ?" ಮುಗುಳ್ನಕ್ಕು ಕೇಳಿದಳು ಜಾನಕಿ.

"ರೂಮು ತುಂಬಾ ಚೆನ್ನಾಗಿದೆ... ಆದರೆ...?"

"ರೂಮು ಹಿಡಿಸ್ತು ತಾನೇ... ಹಿಂದೆ ಮುಂದೆ ಏನೂ ಯೋಚಿಸ್ಬೇಡಾ... ಬಂದು ಬಿಡು... ನನಗೂ ಕಂಪೆನಿ ಬೇಕಾಗಿದೆ..." ಎನ್ನುತ್ತಾ ಜಾನಕಿ ಅವಳಿಗೆ ಕಾಫಿಯನ್ನು, ಬಿಸ್ಕತ್ತನ್ನು ನೀಡಿದಳು. ಸುಮತಿ ಸಂಕೋಚಗೊಂಡಳು.

"ಇದೆಲ್ಲಾ ಯಾಕೆ ಆಂಟೀ..."

"ಇರಲಿ ತಗೋ..." ಬಲವಂತ ಮಾಡಿದಳು. ಬಲವಂತವಾಗಿ ಸುಮತಿಯನ್ನು ಎಬ್ಬಿಸಿಕೊಂಡು ಮನೆಯನ್ನೆಲ್ಲಾ ತೋರಿಸಿದಳು. ಒಂದು ರೂಮಿನ ಬಾಗಿಲನ್ನು ಹಾಕಿತ್ತು. ಅದನ್ನು

ತೆಗೆಯಲಿಲ್ಲ. ಇಷ್ಟು ದೊಡ್ಡ ಮನೆ, ಇಲ್ಲಿ ಆಂಟಿ ಒಬ್ಬಳೇ, ಇನ್ಯಾರೂ ಇದ್ದಂತಿಲ್ಲ. ಅವಳ ಮುಖದ ಮೇಲೆ ಅನುಮಾನದ ಗೆರೆಗಳು ಮೂಡಿದವು. ಜಾನಕಿ ಗಮನಿಸಿದಳು.

"ನಿನ್ನ ಇಷ್ಟವಮ್ಮಾ, ನಾನು ಬಲವಂತ ಮಾಡುವುದಿಲ್ಲ..." ಎಂದು ನುಡಿದಳು.

"ಹಾಗಲ್ಲ ಆಂಟೀ... ತಿಂಗಳಿಗೆ ಎಷ್ಟು ಬಾಡಿಗೆ ಕೊಡಬೇಕಾಗುತ್ತದೆ ಅಂತ ಯೋಚಿಸ್ತಿದ್ದೆ."

"ನಿನಗೆ ಸುಚಿತ್ರ ನನ್ನ ಬಗ್ಗೆ ಹೇಳಿಲ್ಲ ಅಂತ ಕಾಣುತ್ತೆ. ನಾನು ಬಾಡಿಗೆಯ ಹಣಕ್ಕಾಗಿ, ಪೇಯಿಂಗ್ ಗೆಸ್ಟನ್ನು ಇಟ್ಕೊಳ್ಳುತ್ತಿಲ್ಲ. ನನಗೆ ಒಬ್ಬರ ಕಂಪೆನಿ ಬೇಕು... ಅಷ್ಟೇ, ನಿನಗೆ ಎಷ್ಟು ಕೊಡಬೇಕು ಅಂತ ಅನ್ನಿಸುತ್ತೋ ಅಷ್ಟನ್ನೇ ಕೊಡಮ್ಮ, ನನಗೆ ಖಂಡಿತಾ ಬೇಸರವಿಲ್ಲ."

"ಹಾಗಲ್ಲ, ಎಷ್ಟು ಕೊಡಬೇಕು ಅಂತ ನೀವೇ ಹೇಳಿದ್ದರೆ ಚೆನ್ನಾಗಿತ್ತು.

"ರೂಮಿನ ಬಾಡಿಗೆ, ತಿಂಡಿ, ಕಾಫಿ, ಊಟ, ಹಾಲು, ಹಣ್ಣು ಕೆಲಸದವಳು ಅದೂ ಇದೂ ಅಂತ ಖರ್ಚಿನ ಎಲ್ಲಾ ವಿವರಗಳನ್ನು ನಾನು ಹೇಳ್ತಾ ಹೋಗುಲ್ಲ. ಇದು ನನಗೆ ಸರಿ ಬರುಲ್ಲ. ನೀನು ಈ ಮನೆಯಲ್ಲಿ ಇರುವವರೆಗೆ ಇದು ನಿನ್ನ ಮನೆ. ಇಲ್ಲಿ ನಿನಗೆ ಎಲ್ಲಾ ರೀತಿಯ ಸ್ವತಂತ್ರವಿರುತ್ತೆ. ನಾವಿಬ್ಬರೂ ಒಂದೇ ಮನೆಯವರಂತೆ, ತಾಯಿ ಮಗಳಂತೆ ಇರಬೇಕು. ತಾಯಿ ಮಗಳ ನಡುವೆ ವ್ಯವಹಾರ ಇರಬಾರದು ಅಲ್ವಾ ?"

ಸುಮತಿಗೆ ಏನು ಹೇಳಬೇಕೆಂದು ತೋಚಲಿಲ್ಲ. ಆದರೆ ಜಾನಕಿಯ ತರ್ಕ ಸರಿ ಎನಿಸಿರಲಿಲ್ಲ.

"ನನ್ನ ಮಾತು ನಿನಗೆ ವಿಚಿತ್ರ ಎನಿಸಿದರೆ, ಸುಚಿತ್ರನ್ನ ಕೇಳು. ಅವಳು ಹೇಗೆ ಹೇಳ್ತಾಳೋ ಹಾಗೇ ಮಾಡು. ನನ್ನದೇನೂ ಅಭ್ಯಂತರವಿಲ್ಲ."

ಈ ಮಾತು ಸರಿ ಎನಿಸಿತ್ತು ಸುಮತಿಗೆ. ತಲೆಯಾಡಿಸಿ "ಆಗಲಿ ಆಂಟಿ" ಎಂದು ಹೇಳಿ ಅಲ್ಲಿಂದ ಹೊರಟುಬಿಟ್ಟಳು. ಗೆಳತಿ ಸುಚಿತ್ರಗಳಿಗೆ ವರದಿ ಎಲ್ಲಾ ಒಪ್ಪಿಸಿದಳು.

"ನೋಡು ಸುಮತಿ, ನಿನಗೆ ಇದಕ್ಕಿಂತ ಒಳ್ಳೆಯ ಪೇಯಿಂಗ್ ಗೆಸ್ಟ್ ರೂಮು ಇನ್ನೆಲ್ಲೂ ಸಿಗುಲ್ಲ. ಪೆದ್ದು ಪೆದ್ದಾಗಿ ಏನೇನೋ ಯೋಚಿಸಿ ತಲೆ ಕೆಡಿಸ್ಕೊ ಬೇಡ. ಸಧ್ಯಕ್ಕೆ ಅಲ್ಲಿ ಹೋಗಿ ಬಿಡು. ನನ್ನ ಮದುವೆಯ ಗಲಾಟೆ ಎಲ್ಲಾ ಕಳೆದ ಮೇಲೆ ಮತ್ತೆ ನಮ್ಮ ಮನೆಗೇ ಬಂದಿರುವಂತೆ ರೈಟ್ ?"

"ಆಗ ನೀನೇ ಇಲ್ಲಿ ಇರುಲ್ಲವಲ್ಲ"

"ನಾನು ಇಲ್ಲದಿದ್ದರೇನಂತೆ ? ಸುಧೀ ಇರ್ತಾನೆ. ಅವನು ನಿನಗೆ ಬೆಸ್ಟ್ ಕಂಪೆನಿ ಕೊಡ್ತಾನೆ"

"ಹಾಗಲ್ಲ ಸುಚಿತ್ರಾ... ಖರ್ಚು.. ಸ್ವಲ್ಪ ಹೆಚ್ಚೇನೋ ಅಂತ..."

"ಒಂದ್ನಾಲ್ಕು ತಿಂಗಳು ಹೇಗಾದ್ರೂ ಅಡ್ಜಸ್ಟ್ ಮಾಡ್ಕೋಮ್ಮಾ... ನಮ್ಮ ಮನೆಗೆ ಬರೋರು ಹೋಗೋರು ಇಲ್ಲದೇ ಇದ್ದಿದ್ರೆ... ನಾನು ಈ ಸಜೆಷನ್ ಕೊಡ್ತಾನೇ ಇರಲಿಲ್ಲ..."

"ಹೌದು ಕಣೇ... ಓ.ಕೆ. ನಿನಗೆ ಸರಿ ಎನಿಸಿದ್ದು ನನಗೂ ಸರೀನೇ. ಆಕೆ ಬೇಗ ಬಂದು ಬಿಡು ಅಂತ ಹೇಳಿದಾರೆ. ನಾನು ಈಗಲೇ ಹೊರಟು ಬಿಡ್ತೀನಿ. ನೀನೂ ಬರ್ತೀಯಾ ತಾನೇ ನನ್ನ ಜೊತೆಗೆ ?"

"ಷೂರ್... ನಡೀ..." ಎನ್ನುತ್ತಾ ಸ್ನೇಹಿತೆಗೆ ಪ್ಯಾಕಿಂಗ್‌ಗೆ ಸಹಾಯ ಮಾಡಿದಳು. ಗೆಳತಿಯರಿಬ್ಬರೂ ಹೊರಟು ನಿಂತಾಗ, ಸುಚಿತ್ರಳ ತಾಯಿ ನುಡಿದರು.

"ನಮ್ಮ ಮನೆಯ ಗದ್ದಲ ಗಡಿಬಿಡಿಯಲ್ಲಿ, ನಿನಗೆ ಸಂಕೋಚವಾಗಬಾರದು ಅಂತ, ನಾವೂ ಕಳಿಸ್ತಿದೀವಿ. ಮದುವೆ ಸಂಭ್ರಮ ಕಳೆಯುತ್ತಿದ್ದಂತೆಯೇ ನೀನು ವಾಪಸ್ಸು ಬಂದು ಬಿಡಬೇಕು."

"ಹೂಂ ನಮ್ಮ. ಬರದೇ ಎಲ್ಲಿಗೆ ಹೋಗ್ತಾಳೆ ? ಈಗ ನಾವು ಹೊರಡೋಣ್ವಾ ?"

"ಇವತ್ತು ರಾತ್ರಿಯ ಊಟಕ್ಕೆ ಇಲ್ಲಿಗೇ ಬಂದುಬಿಡು... ಸುಚಿತ್ರಾ ಜಾನಕಿಗೆ ಎಲ್ಲಾ ಸರಿಯಾಗಿ ಹೇಳಿಬಿಡು. ಹಾಗೇ ನಾನು ಕೇಳಿದೆ ಅಂತ ಹೇಳು" ಹೂಂ, ಹೂಂ ಎಂದು ತಲೆಯಾಡಿಸಿದಳು. ಇಬ್ಬರೂ ಆಟೋ ಹತ್ತಿದರು. ಜಾನಕಿಯ ಮನೆಯನ್ನು ತಲುಪಿದರು.

"ಏನಮ್ಮಾ ಸುಚಿತ್ರ ಬಹಳ ಅಪರೂಪವಾಗಿ ಬಿಟ್ಟೆ.. ಇನ್ನು ಮದುವೆಯಾದ ಮೇಲಂತೂ ಸರಿಯೇ ಸರಿ..." ಜಾನಕಿ ಹಗುರಾಗಿ ಆಕ್ಷೇಪಿಸಿದಳು.

"ಹಾಗೇನಿಲ್ಲ ಆಂಟೀ... ಸುಮತಿ ಇಲ್ಲಿ ಇರ್ತಾಳಲ್ಲ, ನಾನು ಆಗಾಗ್ಗೆ ಬರ್ತಿರ್ತೀನಿ"

"ಏನು ಬರ್ತೀಯೋ ...? ಮದುವೆ ಆದ ಮೇಲೆ, ನಾವುಗಳೆಲ್ಲ ಎಲ್ಲಿ ನೆನಪಿನಲ್ಲಿ ರ್ತೀವಿ? ಅಲ್ವಾ ಸುಮತೀ ?" ಸುಮತಿ ನಕ್ಕಂತೆ ಮಾಡಿದಳು.

"ಹಾಗೇನಿಲ್ಲ ಆಂಟಿ... ನೋಡ್ತಿರಿ ನಿಮಗೆಲ್ಲ ಬೋರ್ ಎನಿಸುವಷ್ಟು ಬರ್ತೀನಿ... ಓ.ಕೆ. ಇನ್ನು ಬರ್ತೀವಿ. ಹೊರಡೋಣ್ವಾ ಸುಮತೀ...?"

"ಯಾಕೆ ? ಈಗೆಲ್ಲಿಗೆ ?"

"ಸ್ವಲ್ಪ ಷಾಪಿಂಗ್ ಇದೆ. ಹಾಗೇ ಮನೆಗೆ ಹೋಗಿ ಊಟ ಮುಗಿಸ್ಕೊಂಡು ಬರ್ತಾಳೆ. ನಾನೋ, ಸುಧೀನೋ ಯಾರಾದ್ರೂ ಇವಳ ಜೊತೆಗೆ ಬರ್ತೀವಿ"

"ಸರಿ ಹಾಗೇ ಮಾಡಿ... ಈ ಲಗೇಜ್‌ಗಳನ್ನು ಇಲ್ಲಿ ಮೆಟ್ಟಿಲ ಕೆಳಗೆ ಇಟ್ಟಿರಿ ಆಮೇಲೆ ತೆಗೆದಿಟ್ರಾಯ್ತು" ಜಾನಕಿ ಹೇಳಿದಂತೆ, ಸೂಟ್‌ಕೇಸ್ ಹಾಗೂ ಕಿಟ್‌ಬ್ಯಾಗನ್ನು ಅಲ್ಲಿಗೆ ಎತ್ತಿಟ್ಟು ಇಬ್ಬರೂ ಮತ್ತೆ ಹೊರಬಂದರು.

ಷಾಪಿಂಗ್ ನಂತರ, ಮನೆಗೆ ಬಂದು ಊಟ ಮುಗಿಸಿದರು. ಸುಚಿತ್ರ ತಮ್ಮನನ್ನು ಸುಮತಿಯ ಜೊತೆ ಹೊರಡಿಸಿದಳು ''ಹೋಗೋ ಸುಧೀ, ಸುಮತೀನ ಬಿಟ್ಟು ಬಾ ಮಹಡಿಯ ಮೇಲೆ ಇದೆಯಂತೆ ರೂಮು, ಬ್ಯಾಗ್, ಸೂಟ್‌ಕೇಸ್‌ಗಳನ್ನು ಮೇಲೆ ಇಟ್ಟುಕೊಟ್ಟು ಬಾ.''

ಸುಮತಿ ಎಲ್ಲರಿಗೂ ಕೈಯಾಡಿಸಿ 'ಬರ್ತೀನಿ' ಎಂದು ಹೇಳಿ, ಸುಧೀರನ ಜೊತೆಯಲ್ಲಿ ಹೊರಟಳು. ಜಾನಕಿ ಇವರುಗಳಿಗಾಗಿಯೇ ಕಾಯುತ್ತಿದ್ದಂತೆ ಅನ್ನಿಸಿತು.

''ಬಂದ್ಯಾ ಬಾ... ಸಡಗರದಿಂದ ಬರಮಾಡಿಕೊಂಡಳು.'' ಏನಪ್ಪಾ ಸುಧೀರ, ಎಷ್ಟು ದೊಡ್ಡೋನಾಗಿ ಬಿಟ್ಟಿದೀಯ.' ಮೆಚ್ಚುಗೆಯನ್ನು ಸೂಸಿದಳು.

''ಸುಮತೀ ನಿಮ್ಮ ಲಗೇಜು ?'' ಸುಧೀರ ಅತ್ತಿತ್ತ ದೃಷ್ಟಿಯನ್ನು ಹೊರಳಿಸಿದ.

''ಇಲ್ಲೇ ಇಟ್ಟಿದ್ದೆ... ಮೆಟ್ಟಿಲುಗಳ ಕೆಳಗೆ...'' ಅನುಮಾನದಿಂದ ಕಣ್ಣು ಹೊರಳಿಸಿದಳು.

''ಮೇಲೆ ನಿಮ್ಮ ರೂಮಿನಲ್ಲಿಟ್ಟಿರಬಹುದು. ಅಲ್ಲೇ ಹೋಗಿ ನೋಡೋಣ''

''ಇಲ್ಲ ಸುಧೀರ್... ಎತ್ತಿಡೋರು ಯಾರೂ ಇಲ್ಲ, ಇಲ್ಲೇ ಇಡು ಅಂತ ಆಂಟಿ ಹೇಳಿದ್ರು, ಅವರಿಗೆ ಮೆಟ್ಟಿಲು ಹತ್ತಕ್ಕೇ ಆಗುಲ್ಲ...''

''ಹಾಗಾದ್ರೆ ಆಂಟೀನೇ ಕೇಳೋಣ'' ಎನ್ನುತ್ತಾ ಅನುಮಾನದಿಂದ ಜಾನಕಿಯ ಕಡೆ ನೋಡಿದ.

''ಏನಾಯ್ತು ! ಏನು ಅನುಮಾನಿಸ್ತಾ ಇದೀರಲ್ಲ ಇಬ್ಬರೂ...''

''ನಾನು ಲಗೇಜ್‌ಗಳನ್ನು ಇಲ್ಲೇ ಇಟ್ಟಿದ್ದೆ... ಎಲ್ಲೋ ಕಾಣ್ತಾ ಇಲ್ಲ'' ಸುಮತಿ ಸಂಕೋಚದಿಂದ ನುಡಿದಳು.

''ಹೌದು ! ಇಲ್ಲೇ ಇಟ್ಟಿದ್ಯಲ್ಲ, ಹಾಗಾದ್ರೆ ಎಲ್ಲಿ ಹೋಯ್ತು ?'' ತನಗೆ ತಾನೇ ಗೊಣಗಿಕೊಂಡು, ಜಾನಕಿ ಅಲ್ಲಿಂದ ಸರಿದು, ಊಟದ ಮನೆಯ ಪಕ್ಕಕ್ಕೆ ಇದ್ದ ರೂಮಿಗೆ ನಡೆದಳು.

ಇದ್ದಕ್ಕಿದ್ದಂತೆ ಪಕ್ಕದ ರೂಮಿನಿಂದ 'ಹೋ...' ಎಂದು ಕೆಟ್ಟದಾಗಿ ಅಳುತ್ತಿರುವ ಧ್ವನಿ ಕೇಳಿದಾಗ ಇಬ್ಬರೂ ಬೆಚ್ಚಿದರು ಸುಧೀರ ಏನು ಎನ್ನುವಂತೆ ಸುಮತಿಯನ್ನು ಕಣ್ಣಿನಲ್ಲೇ ಪ್ರಶ್ನಿಸಿದ. ನಂಗೊತ್ತಿಲ್ಲ ಎನ್ನುವಂತೆ ತಲೆಯಾಡಿಸಿದಳು. ಲಗೇಜು ಕಾಣ್ತಿಲ್ಲ ಅಂತ ಕೇಳಿದ್ದಷ್ಟಕ್ಕೇ ಆಂಟಿ ಹೀಗೆ ಅಳುವುದೇ, ಅಂತಂದುಕೊಂಡು ರೂಮಿನ ಬಳಿಗೆ ಬಂದಳು. ತೆರೆದ ಬಾಗಿಲಿನಿಂದ ಒಳಗೆ ಇಣುಕಿದಳು ಜಾನಕಿ ಕೈ ಎತ್ತಿ ಯಾರನ್ನೋ ದಬದಬನೆ ಗುದ್ದುತ್ತಿದ್ದಾಳೆ. ಆ ವ್ಯಕ್ತಿ ಕೆಟ್ಟಧ್ವನಿಯಲ್ಲಿ ಅಳುತ್ತಿದ್ದಾನೆ. ಸುಮತಿಯ ನೋಟ ಅತ್ತ ಹರಿದ ಕೂಡಲೇ ಅಸ್ತವ್ಯಸ್ತವಾಗಿ ಬಿದ್ದಿದ್ದ ತನ್ನ ಲಗೇಜನ್ನು ಕಂಡಳು. ಕೋಪದಿಂದ ಮೈ ಬಿಸಿಯಾಯಿತು. ಅಷ್ಟರಲ್ಲಿ ಸುಧೀರನೂ ಅವಳ ಬಗಲಿಗೆ ಬಂದು ನಿಂತಿದ್ದ.

"ಏನ್ರೀ ಅದು ಯಾರದು ? ಆಂಟಿ ಯಾಕೆ ಅವನನ್ನು ಹೊಡೆಯುತ್ತೀದಾರೆ ?" ಸುಮತಿಯ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತ್ತು.

"ನಂಗೊತ್ತಿಲ್ಲ.. ನನ್ನ ಲಗೇಜು..." ಉಗುಳು ನುಂಗಿದಳು.

"ತಡೀರಿ ನಾನು ನೋಡ್ತೀನಿ" ಎನ್ನುತ್ತಾ ಅವನು ಒಳಬಂದು, ಜಾನಕಿಯನ್ನು ತಡೆದ. ಜಾನಕಿ ಅತ್ತ ತಿರುಗಿದಳು ಅವಳ ಮುಖ ಪೆಚ್ಚಾಗಿತ್ತು.

"ಇವನು ಹೀಗೆ ಮಾಡ್ತಾನೆ ಅಂತ ನಾನು ಅಂದುಕೊಂಡಿರಲಿಲ್ಲ... ಪಾಪಿ ಎಲ್ಲಾ ಕಿತ್ತು ಬಿಸ್ಹಾಕಿದಾನೆ. ಅವನ ಪರವಾಗಿ ನಾನು ಕ್ಷಮೆ ಕೇಳ್ತೀನಿ" ಜಾನಕಿ, ಸುಮತಿಯ ಕಡೆ ತಿರುಗಿ ಕೈ ಮುಗಿದಾಗ, ಅವಳಿಗೆ ಮುಜುಗರವಾಯಿತು. ಜಾನಕಿಯ ಪಕ್ಕದಲ್ಲಿ ನಿಂತಿದ್ದ ಯುವಕನನ್ನೇ ನೋಡಿದಳು. ಕ್ಷಣದಲ್ಲಿ ಪರಿಸ್ಥಿತಿಯ ಅರ್ಥವಾಗಿತ್ತು.

ಜಾನಕಿಗಿಂತ ಎತ್ತರನಾಗಿದ್ದು, ನೋಡಲು ಬಲಿಷ್ಠ ಯುವಕನಂತೆ ಕಂಡು ಬಂದರೂ, ಅವನ ಕಣ್ಣುಗಳಲ್ಲಿ ಕಂಡು ಬರುತ್ತಿದ್ದ ಅಸಹಾಯಕತೆ, ನೇರವಲ್ಲದ ನೋಟ, ಓರೆ ಕೋರೆಯಾಗಿ ನಿಂತಿದ್ದ ಭಂಗಿ, ಕ್ಷಣಾರ್ಧದಲ್ಲಿ ಅವನ ಸ್ಥಿತಿಯನ್ನು ಅರ್ಥಮಾಡಿಕೊಂಡಳು. ಕುರುಚಲು ಗಡ್ಡ ಮೀಸೆ, ದೊಗಲೆ ಟೀಷರ್ಟು, ದೊಗಲೆ ಚಡ್ಡಿ ಅವನು ಎಲ್ಲರಂತೆ ನಾರ್ಮಲ್ ಯುವಕನಲ್ಲ ಅನ್ನುವುದನ್ನು ಒತ್ತಿ ತಿಳಿಸಿದ್ದವು. ಸುಮತಿಯ ಮನವೆಲ್ಲಾ ಕಲಕಿದಂತಾಯಿತು. ಅಧೀರತೆ ಮೂಡಿತು. ನಾಲ್ಕು ಹೆಜ್ಜೆ ಹಿಂದಕ್ಕೆ ಸರಿದಳು. ತಕ್ಷಣವೇ ಜಾನಕಿ ಅವಳ ಬಳಿಗೆ ಬಂದಿದ್ದಳು.

"ಹೆದರಿ ಬಿಟ್ಯಾ ಸುಮತಿ... ಇವನು ಬೇರೆ ಯಾರೂ ಅಲ್ಲ ನನ್ನ ಮಗನೇ ಸ್ವಲ್ಪ ತಿಳುವಳಿಕೆ ಸಾಲದು... ಆದರೆ ಅವನು ನಿನ್ನ ತಂಟೆಗೆ ಬರದಂತೆ ನಾನು ಅವನನ್ನು ನೋಡಿಕೊಳ್ಳೀನಿ."

ಸುಮತಿ ಮುಜುಗರದಿಂದ ಸುಧೀರನ ಬದಿಗೆ ಸರಿದು ನಿಂತಳು.

"ಹಾಗಾದ್ರೆ ವಾಪಸ್ಸು ಹೊರಟು ಹೋಗ್ತೀಯಾ ಸುಮತೀ..." ಜಾನಕಿ ಅವಳ ಕಣ್ಣಲ್ಲಿ ಕಣ್ಣಿಟ್ಟು ಕೇಳಿದಾಗ, ಸುಮತಿ ಇಕ್ಕಟ್ಟಿಗೆ ಸಿಕ್ಕಿಬಿದ್ದಳು. ಅವಳು ಸುಧೀರನ ಕಡೆ ನೋಡಿದಳು. ಅವನುಬೇಡ ಎನ್ನುವಂತೆ ತಲೆಯಾಡಿಸಿದ ಆದರೆ ಸುಮತಿ ತನ್ನಲ್ಲೇ ಒಂದು ಗಳಿಗೆ ಯೋಚಿಸಿ, ಜಾನಕಿಯ ಕೈಗಳನ್ನು ಹಿಡಿದಳು.

"ಇಲ್ಲ ಆಂಟಿ, ನಾನು ಹೋಗುವುದಿಲ್ಲ, ಆದರೆ ಒಂದು ರಿಕ್ವೆಸ್ಟ್... ನೀವು ನಿಮ್ಮ ಮಗನನ್ನು ಹೊಡೆಯಬಾರದು."

"ಏನು ಮಾಡಲಮ್ಮಾ ? ನನ್ನ ಹೊಟ್ಟೆಯನ್ನು ಉರಿಸ್ತಾನೆ... ನೋಡು ಎಂಥಾ ಕೆಲಸ ಮಾಡಿದಾನೆ ? ನನಗೆ ಗೊತ್ತಾಗ್ಲೇ ಇಲ್ಲ" ಮತ್ತೆ ಒಳಗೆ ಹೋಗಿ ಅವನ ಕಿವಿ ಹಿಂಡಿ, ಕೆನ್ನೆಗೆ ಹೊಡೆದಳು ಅವನು ಮತ್ತೆ ಕಿರುಚಿದ.

'ಪ್ಲೀಸ್ ಆಂಟಿ ಹೊಡಿ ಬೇಡಿ" ಜಾನಕಿಯ ಕೈ ತಡೆದಳು. ಜಾನಕಿ ಅವಳ ಕೈ ಹಿಡಿದು ಅತ್ತಳು.

"ಅವನು ಹೀಗೆ ಎಲ್ಲಾ ಕಿತ್ತು ಹಾಕ್ತಾನೆ ಅಂತ ಮೊದಲೇ ಗೊತ್ತಾಗಲಿಲ್ಲ. ಇಲ್ಲದೇ ಇದ್ದಿದ್ರೆ ನಾನೇ ಲಗೇಜನ್ನು ಮೇಲೆ ಇಟ್ಟು ಬಿಡುತ್ತಿದ್ದೆ."

"ಹೋಗಲಿ ಬಿಡಿ" ಎಂದು ಹೇಳಿ ಚೆಲ್ಲಾಪಿಲ್ಲಿಯಾಗಿದ್ದ ವಸ್ತುಗಳನ್ನು ಕಿಟ್‌ಬ್ಯಾಗ್‌ಗೆ ತುಂಬಿದಳು. ಸೂಟ್‌ಕೇಸನ್ನು ಅವನಿಂದ ತೆರೆಯಲಾಗಿರಲಿಲ್ಲ. ಸುಧೀರ ಲಗೇಜುಗಳನ್ನು ಎತ್ತಿಕೊಂಡು ಹೊರಬಂದ.

"ಸುಮತೀ... ಈಗಲೇ ನೀವು ನನ್ನ ಜೊತೆ ನಮ್ಮ ಮನೆಗೇ ಬಂದ್ಬಿಡಿ"

"ಬೇಡ ಸುಧೀರ್, ಇಷ್ಟಕ್ಕೆಲ್ಲ ಹೆದರಿದರೆ ಹೇಗೆ ? ಇನ್ನು ಮುಂದೆ ನಾನೇ ಕೇರ್‌ಫುಲ್ ಆಗಿದ್ರೆ ಸರಿ. ಹೇಗೂ ನನ್ನ ರೂಮು ಮೇಲಿದೆಯಲ್ಲ."

"ಆದರೂ ನನಗೆ ಯಾಕೋ ಸಮಾಧಾನವಿಲ್ಲ. ಸುಚೀ ಏನಂತಾಳೋ..."

"ಅವಳು ಏನಾದ್ರೂ ಅನ್ನಲಿ. ನಿಮ್ಮ ಮನೆಯ ಫಂಕ್ಷನ್ ಆಗೋವರೆಗಾದ್ರೂ ನಾನು ಇಲ್ಲಿಯೇ ಇರ್ತೀನಿ. ಆಮೇಲೆ ನೋಡೋಣ." ಎನ್ನುತ್ತಾ ಅವಳು ಮುಂದಾಗಿ ಮಹಡಿ ಹತ್ತಿದಳು. ಸುಧೀರ ಲಗೇಜನ್ನು ಹೊತ್ತು ಅವಳ ಹಿಂದೆ ಹಿಂದೆ ಮೆಟ್ಟಿಲನ್ನು ಹತ್ತಿದ.

ಸುಧೀರ ಹೊರಟು ಹೋಗಿದ್ದ. ರೂಮಿನಲ್ಲಿ ಯಾವ ಕೆಲಸವೂ ಇರಲಿಲ್ಲ. ಧೂಳು ಹೊಡೆಯಬೇಕಾಗಿರಲಿಲ್ಲ. ಹಾಸಿಗೆ ಹೊದಿಕೆ ಬದಲಾಯಿಸಬೇಕಾಗಿರಲಿಲ್ಲ. ಸೊಳ್ಳೆ ಪರದೆಯನ್ನು ಸರಿಸಿ, ಮಂಚದ ಮೇಲೆ ಉರುಳಿಕೊಂಡಳು. ಶೆಕೆ ಎನಿಸಿದ್ದರಿಂದ, ಅಲ್ಲಿಂದಲೇ ಸೀಲಿಂಗ್ ಫ್ಯಾನಿನ ಸ್ವಿಚ್ ಬಟನ್ನನು ಒತ್ತಿದಳು. ಫ್ಯಾನು ತಿರುಗಲಾರಂಭಿಸಿತು.

ಈ ವಿಷಯವನ್ನು ಆಂಟಿ ಈ ಮೊದಲೇ ತನಗೇಕೆ ಹೇಳಲಿಲ್ಲ ? ಸುಚಿತ್ರಂಗೂ ಈ ವಿಷಯ ಗೊತ್ತಿಲ್ಲವೆ ? ಆಂಟಿಯ ಮಗ ಅಮೆರಿಕದಲ್ಲಿದ್ದಾನೆ ಅಂತ ಹೇಳಿದ್ದಳಲ್ಲ. ಈ ಮಗನ ಬಗ್ಗೆ ಆಂಟಿ ಯಾರಿಗೂ ತಿಳಿಸಿಯೇ ಇಲ್ಲವೇನೋ ಅಂತಂದುಕೊಂಡಳು. ಮತ್ತೆ ಮತ್ತೆ ಆ ಹುಡುಗನ ಮುಖ ಕಣ್ಣೆದುರಿಗೆ ಬರುತ್ತಿತ್ತು. ದಾಂಡಿಗನಂತೆ ಬೆಳೆದು ನಿಂತಿದ್ದರೂ, ತಾಯಿಯ ಕೈಯ ಹೊಡೆತವನ್ನು ತಿಂದು ಚಿಕ್ಕಮಗುವಿನಂತೆ ರೋಧಿಸುತ್ತಿದ್ದ. ಮಗುವಿನಂತಹ ಬುದ್ಧಿಯವನು, ಅವನಿಂದ ತನಗೆ ಏನೂ ತೊಂದರೆ ಬರಲಾರದು ಎಂದು ತನಗೆ ತಾನೇ ಹೇಳಿಕೊಂಡಳು.

"ಸುಮತೀ... ಸುಮತೀ..." ಕೇಳಿಬಂತು ಜಾನಕಿಯ ಕೂಗು. ರೂಮಿನಿಂದ ಹೊರ ಬಂದು ಮೆಟ್ಟಿಲ ಬಳಿ ನಿಂತಳು. ಕೆಳಗ ಜಾನಕಿ ನಿಂತಿದ್ದಳು.

"ಏನಾದ್ರೂ ಬೇಕಾಗಿದ್ರೆ, ಸಂಕೋಚವಿಲ್ಲದೇ ಕೇಳಮ್ಮಾ... ಭಯ ಅನ್ನಿಸಿದ್ರೆ ಬಾಗಿಲು ಹಾಕ್ಕೊಂಡು ಮಲಕ್ಕೋ. ಬೆಳಿಗ್ಗೆ ಎಷ್ಟು ಹೊತ್ತಿಗೆ ಏಳ್ತೀಯಾ ?"

''ಆರೂವರೆಗೆ...''

''ಸರಿ ಮಲಕ್ಕೋ... ಅಂದ್ಹಾಗೇ ಥಿಂಗ್ಸ್ ಎಲ್ಲಾ ಸರಿಯಾಗಿದೆ ತಾನೇ... ?''

''ಹೂಂ ಆಂಟಿ, ಎಲ್ಲಾ ಸರಿಯಾಗಿದೆ...''

''ಮಲಕ್ಕೋ ಹೋಗು... ಬೆಳಿಗ್ಗೆ ಕೆಲಸದವಳು ಬಂದಾಗ ಎಬ್ಬಿಸ್ತೀನಿ ಗುಡ್‌ನೈಟ್.''

''ಗುಡ್‌ನೈಟ್ ಆಂಟೀ...'' ಎಂದು ಹೇಳಿ ಒಳಬಂದು ಮಲಗಿದರೂ ಎಷ್ಟೋ ಹೊತ್ತಿನವರೆಗೂ ನಿದ್ದೆ ಹತ್ತಿರ ಸುಳಿದಿರಲಿಲ್ಲ. ಹೊಸ ಜಾಗ, ಹೊಸ ಅನುಭವ, ಮನದಲ್ಲಿ ಏನೋ ತಳಮಳ ಏನೋ ಕಳವಳ, ಇಷ್ಟಾದರೂ, ಎಷ್ಟು ಬಾಡಿಗೆ ಕೊಡಬೇಕೂಂತ ಗೊತ್ತಿಲ್ಲ. ಎಷ್ಟು ತಿಂಗಳು ಇರುವುದೋ ತಿಳಿಯದು... ಇಲ್ಲಿ ಒಂದು ಯಾವುದಾದರೂ ವರ್ತುಲಕ್ಕೆ ಸಿಕ್ಕಿ ಬೀಳುತ್ತಿದ್ದೇನೆಯೇ ಅಂತನ್ನಿಸಿದಾಗ, ಆತಂಕ ಹೆಚ್ಚಾಗಿತ್ತು, ಒಂದು... ಎರಡು...ಮೂರು ಅಂತ ಕುರಿಗಳನ್ನು ಎಣಿಸಲು ಪ್ರಾರಂಭಿಸಿದಳು. ಯಾವಾಗಲೋ ನಿದ್ದೆ ಹತ್ತಿತ್ತು.

ಬೆಳಿಗ್ಗೆ ಕೆಲಸದ ಹೆಂಗಸು ರಾಜಮ್ಮ ಒಂದು ಬೆಲ್ ಮಾಡಿದಾಗ, ಸುಮತಿಗೂ ಎಚ್ಚರವಾಗಿತ್ತು. ಹಲ್ಲುಜ್ಜಿ ಮುಖ ತೊಳೆದು ಕೆಳಗಿಳಿದು ಬರುವುದರಲ್ಲಿದ್ದಳು. ಅಷ್ಟರೊಳಗೆ ರಾಜಮ್ಮ ಬಂದು ನಗುನಗುತ್ತಾ ಮಾತನಾಡಿಸಿದಳು.

''ಅಮ್ಮಾರು ಕರೀತಿದಾರೆ. ಕಾಪಿ ಕುಡಿಯೋಕೆ ಬರಬೇಕಂತೆ''

''ಹುಂ. ನಡೀ ಬರ್ತೀನಿ.''

''ನೀವು ಹೋಗಿ... ನಾನು ರೂಮಿನ ಕಸ ಗುಡಿಸ್ಕೊಂಡು ಬರ್ತೀನಿ.'' ಸುಮತಿ ಕೆಳಗಿಳಿದು ಬಂದಳು. ಅವಳು ಆಕಡೆ ಈ ಕಡೆ ಕಣ್ಣು ಹಾಯಿಸುತ್ತಿರುವಾಗ ಜಾನಕಿ ನುಡಿದಳು.

''ಅವನಿನ್ನು ಎದ್ದಿಲ್ಲ. ಹೆದರಬೇಡ ಬಾ.'' ಸುಮತಿ ಬಂದು ಕುಳಿತಳು. ಬಿಸಿ ಬಿಸಿ ಹೊಗೆಯಾಡುವ ಕಾಫಿಯ ಕಪ್ಪನ್ನು ಸುಮತಿಗೆ ಕೊಟ್ಟಳು. ತಿಂಡಿ ಏನು ಮಾಡಲಿ ? ನಿನಗೆ ಏನು ಇಷ್ಟ?

''ಯಾವುದಾದರೂ ಪರವಾಗಿಲ್ಲ. ಎಲ್ಲಾ ನೀವೇ ಮಾಡ್ತೀರಾ ಆಂಟಿ ?''

''ನಾನಲ್ಲದೇ ಇನ್ಯಾರು ಮಾಡ್ತಾರೆ ? ನಮ್ಮಿಬ್ಬರಿಗೆ ಯಾಕೆ ಅಂತ, ನಾನು ಅಡಿಗೆಯವರನ್ನು ಇಟ್ಟುಕೊಂಡಿಲ್ಲ. ನನಗೂ ಚೆನ್ನಾಗಿ, ರುಚಿ ರುಚಿಯಾಗಿ ಅಡಿಗೆ ತಿಂಡಿ ಮಾಡುಕ್ಕೆ ಬರುತ್ತೆ...'' ಮುಗುಳ್ನಕ್ಕು ನುಡಿದಳು.

''ಹಾಗಲ್ಲ ಆಂಟಿ. ಎಲ್ಲಾ ಕೆಲಸವನ್ನು ನೀವೇ ಮಾಡ್ತೀರಾ ಅಂತ...'' ಉಗುಳು ನುಂಗಿದಳು.

''ಮನೆ ದೊಡ್ಡದು ಅಂತ ಮನೆ ಕೆಲಸಕ್ಕೆ ಕೆಲಸದವಳಿದಾಳೆ. ನಮ್ಮಿಬ್ಬರ ಕೆಲಸ ಇನ್ನೆಷ್ಟು

ಇರುತ್ತೆ ?'' ಸುಮತಿ ನಿಧಾನವಾಗಿ ಕಾಫಿಯನ್ನು ಹೀರಿದಳು. ಅವನು ಯಾವಾಗ ಎದುರಿಗೆ ಬಂದು ಬಿಡುವನೋ ಎಂಬ ಆತಂಕ ಅವಳಲ್ಲಿ ಇದ್ದೇ ಇತ್ತು. ಅಷ್ಟರಲ್ಲಿ ರಾಜಮ್ಮ ಕೆಳಗಿಳಿದು ಬಂದಿದ್ದಳು.

''ನಿಮ್ಮ ಬಟ್ಟೆ ಒಗೆಯೋದು ಇದ್ರೆ ಬೇಗ ಕೊಟ್ಟು ಬಿಡಿ... ಇನ್ನು ನಾನು ನಾಳೇನೇ ಬರೋದು.''

''ಪರವಾಗಿಲ್ಲ ನನ್ನ ಬಟ್ಟೇನ ನಾನೇ ಒಗೆದುಕೊಟ್ಟೇನಿ.''

''ಯಾವಾಗ ಒಗೆದುಕೊಳ್ತೀಯ ? ಬಿಡುವೆಲ್ಲಿರುತ್ತೆ ? ದಿನಗಟ್ಟಳೆ ಉಡುವ ಬಟ್ಟೇನ ಒಗೆಯೋಕೆ ಹಾಕು. ಚೆನ್ನಾಗಿ ಒಗೀತಾಳೆ. ನೀನೇನೂ ಎಕ್ಸ್‌ಟ್ರಾ ದುಡ್ಡು ಕೊಡಬೇಡ. ನಾನು ಈಗ ಕೊಡೋದೇ ಜಾಸ್ತಿ...'' ಗರ್ವದಿಂದ ಹೇಳಿದಳು.

''ನಾನು ಸ್ನಾನ ಮಾಡಿಕೊಂಡು ಬರ್ತೀನಿ'' ಸುಮತಿ ನಡೆದಳು.

''ಅಮ್ಮಾರೇ, ಸಂಕಪ್ನೋರು ಯಾವಾಗ ಬತ್ತಾರೆ ?'' ರಾಜಮ್ಮನ ಪ್ರಶ್ನೆ.

''ಬರ್ತಾನೆ ತನಗೆ ಬೇಕಾದಾಗ...''

''ಈ ಸಾರಿ ಅವ್ರು ಬಂದಾಗ ಲಗ್ನ ಮಾಡಿಬಿಡಿ...''

''ನನ್ನ ಮಾತ್ನಲ್ಲಿ ಕೇಳ್ತಾನೆ ಅವನು ?

''ಅಂಗನ್ನ ಬೇಡಿ ಈ ಕಾಲ್ದ ಹುಡುಗ್ರು... ಸಿನಿಮಾದಾಗೆ ನೋಡುಲ್ವ ಅಂಗೇ ಲವ್ವು ಗಿವ್ವು ಅಂತ ಮಡಕ್ಕಂಡಿದ್ರೆ...''

''ಥೂ... ಹಾಗೆಲ್ಲ ಮಾಡೋನಲ್ಲ ನನ್ನ ಮಗ...''

''ಬಿಡ್ರವ್ವಾ, ಮಗ, ಮಗ್ಳು ಎಲ್ಲಾ ಕೈಕೊಡೋರೆ... ಈ ಸಾರಿ ಆವಪ್ಪ ಬಂದಾಗ, ಏನೂ ಕೇಳ್ಲೇ ಬ್ಯಾಡಿ. ಮೂಗ್ದಾರ್ದೆ ಆಕೇ ಬಿಡಿ... ಅಂಗೇ ನಂಗೊಂದು ಬಾರಿ ಸೀರೆ...''

''ಸರಿ ಹೋಯ್ತು, ನಿನಗೆ ಸೀರೆ ಆಸೆ. ಅದಕ್ಕೆ ಇಲ್ಲದ್ದನ್ನೆಲ್ಲಾ ಮಾತನಾಡ್ತೀಯ. ಹೋಗಿ ನಿನ್ನ ಕೆಲಸ ನೋಡ್ಕೋ... ಹಾಗೇ ಜಗ್ಗೂನ ಎಬ್ಬಿಸು.''

''ಮಲಕ್ಕಂಡಿರ್ಲಿ ಬಿಡ್ರವ್ವಾ. ಎದ್ದು ಏನು ಮಾಡಬೇಕಾಗೈತೆ ?''

''ಅವನ್ಗೆ ಸ್ನಾನ ಮಾಡಿಸ್ಬೇಕು. ಬಚ್ಚಲು ಮನೇಲಿ ಬಿಸಿನೀರನ್ನು ತೋಡಿ ಇಡು. ನಾನೇ ಎಬ್ಬಿಸ್ತೀನಿ.''

''ತಿಂಡಿ ಮಾಡಿ ಬಿಡ್ರವ್ವಾ. ಆಮೇಲೆ ಲೇಟಾಯ್ತೈತೆ.''

''ಹೌದಲ್ವೇನೆ ? ತಿಂಡಿ ಬೇರೆ ಮಾಡಬೇಕು ಎನ್ನುತ್ತಾ ಜಾನಕಿ ಅಡಿಗೆ ಮನೆಗೆ ಬಂದಳು. ಅವಲಕ್ಕಿಯನ್ನು ನೆನೆಸಿ, ಹತ್ತು ನಿಮಿಷದಲ್ಲಿ ಒಗ್ಗರಣೆ ಅವಲಕ್ಕಿಯನ್ನು ರೆಡಿ ಮಾಡಿದಳು.

ಅಷ್ಟರಲ್ಲಿ ಸುಮತಿ ಕೆಳಗಿಳಿದು ಬಂದಳು. ರಾಜಮ್ಮನಿಗೆ ಒಗೆಯುವ ಬಟ್ಟೆಯನ್ನು ಕೊಟ್ಟಳು.

"ಆಂಟೀ ನಾನೇನಾದ್ರೂ ಹೆಲ್ಪ್ ಮಾಡ್ಲಾ? " ಕೇಳಿದಳು.

"ಏನೂ ಬೇಡಮ್ಮ. ತಿಂಡಿ ರೆಡಿಯಾಗಿದೆ. ನಿನಗೆ ಹಾಕಿ ಕೊಡ್ತೀನಿ... ತಿನ್ನು ಕಾಫಿ ಫ್ಲಾಸ್ಕಲ್ಲಿದೆ. ಬಗ್ಗಿಸಿಕೊಂಡು ಕುಡಿ." ಆಂಟಿ ತನ್ನ ರೂಮಿಗೆ ನಡೆದಳು.

"ಜಗ್ಗೂ... ಜಗ್ಗೂ... ಏಳೋ... ಕೋಣ ಏಳೋ..." ಮಗನನ್ನು ತಿವಿದು ಎಬ್ಬಿಸಿದಳು ಸುಮತಿ ಅತ್ತ ನೋಡದೇ ತಲೆ ತಗ್ಗಿಸಿ, ತಿಂಡಿ ಕಾಫಿಯನ್ನು ಮುಗಿಸಿ ಮತ್ತೆ ಮಹಡಿ ಹತ್ತಿ ಬಿಟ್ಟಳು ಮತ್ತೆ ಅಲಂಕಾರವನ್ನು ಮುಗಿಸಿಕೊಂಡೇ ಕೆಳಗಿಳಿದು ಬಂದದ್ದು." ನಾನು ಕಾಲೇಜಿಗೆ ಹೋಗಿ ಬರ್ತೀನಿ ಆಂಟೀ..." ಎಂದು ನುಡಿದಳು. ಅಲ್ಲೇ ಕುಳಿತಿದ್ದ ಜಗ್ಗು ಕಡೆ ನೋಡಲು ಮುಜುಗರವೆನಿಸಿತ್ತು.

"ಲಂಚ್ ಬಾಕ್ಸ್‌ಗೆ ತಿಂಡಿ ಹಾಕಿಟ್ಟಿದೀನಿ. ತಗೊಂಡುಹೋಗು"

ಬೇಡ ಎನ್ನುವ ಮನಸ್ಸಾಗದೇ ಡಬ್ಬಿಯನ್ನು ಎತ್ತಿಕೊಂಡು ನಡೆದಳು. ಸಾಯಂಕಾಲ ಅವಳು ಕಾಲೇಜಿನಿಂದ ವಾಪಸ್ಸು ಬರುವ ಹೊತ್ತಿಗೆ, ಆಂಟಿ ಒಬ್ಬಳೇ ಟೆಲಿವಿಷನ್ ಮುಂದೆ ಕುಳಿತಿದ್ದಳು. ಅವನು ಎಲ್ಲಿಯೂ ಕಾಣಲಿಲ್ಲ.

"ಆಯ್ತಾ ಕಾಲೇಜು ?" ನಗುಮುಖದಿಂದ ಪ್ರಶ್ನಿಸಿದಳು.

"ಹೂಂ ಆಂಟೀ... ಎನ್ನುತ್ತಾ ಅಲ್ಲೇ ನಿಂತಳು.

"ಬಿಸಿ ಕಾಫಿ ಬೆರೆಸ್ತೀನಿ ತಡಿ. ನಾನು, ನೀನು ಬರಲಿ ಅಂತ ಕಾಯ್ತಾ ಇದ್ದೆ" ಎನ್ನುತ್ತಾ ಎದ್ದಳು.

"ಪರವಾಗಿಲ್ಲ, ನೀವು ಕೂತ್ಕೊಳ್ಳಿ. ನಾನೇ ಬೆರೆಸ್ತೀನಿ" ಎನ್ನುತ್ತಾ ಅಡಿಗೆ ಮನೆ ಕಡೆಗೆ ನಡೆದಳು. ಜಾನಕಿ ಮೆಚ್ಚುಗೆಯಿಂದ ಅವಳನ್ನೇ ನೋಡಿದಳು. ತೆಳುವಾದ, ಬಳಕುವ, ಅತೀ ಉದ್ದವೂ ಅಲ್ಲದ, ಕುಳ್ಳೂ ಎನಿಸದ ನಿಲುವು, ತೂಗಾಡುವ ಉದ್ದನೆಯ ಜಡೆ, ಮುಖದ ಆಕರ್ಷಣೆ, ಗೋಧಿಮಿಶ್ರಿತ ಬಿಳಿಯ ಮೈಬಣ್ಣ ಅವಳನ್ನು ಸುಂದರಿಯ ಸಾಲಿನಲ್ಲಿ ನಿಲ್ಲಿಸಬಹುದಾಗಿತ್ತು ಹೆಸರಿಗೆ ತಕ್ಕ ಹಾಗೇ ಘನ ಗಾಂಭೀರ್ಯ, ಹೆಣ್ಣು ಹುಡುಗಿಯರಿಗೆ ಇನ್ನೇನು ಬೇಕು ? ಮುಖದಲ್ಲಿ ಕಿರುನಗೆ ಮೂಡಿತು.

ಸುಮತಿ, ಕಾಫಿಯನ್ನು ಮೂರು ಕಪ್‌ಗಳಿಗೆ ಹಾಕಿ, ಟ್ರೇಯಲ್ಲಿಟ್ಟುಕೊಂಡು ತಂದಳು." ಇನ್ನೊಂದು ಯಾರಿಗೆ ?"

"ನಿಮ್ಮ ಮಗನಿಗೆ ... ಅವರೆಲ್ಲಿ ?"

"ಅವನಾ ? ಮಲಗಿದಾನೆ..." ನಿರುತ್ಸಾಹದಿಂದ ನುಡಿದಳು.

ಕಾಫಿ ಕುಡಿದು, ಕಪ್‌ಗಳನ್ನು ತೊಳೆದು, ಇಟ್ಟು ತನ್ನ ರೂಮಿಗೆ ನಡೆದಳು. ಕೆಲವೇ ಕ್ಷಣಗಳ ನಂತರ ಸುಚಿತ್ರ ಒಳ ಬಂದಿದ್ದಳು.

''ಏನೇ ಯಾವಾಗ ಬಂದೆ ?'' ಸ್ನೇಹಿತೆಯ ಭುಜವನ್ನು ಮುಟ್ಟಿದಳು.

''ಈಗ್ತಾನೇ ಬರ್ತಾ ಇದೀನಿ... ಅದೇನೇ ? ನೆನ್ನೆಯ ವಿಷಯ ? ಅದೇನು ? ಸುಧೀ ಏನೋ ಹೇಳ್ದ'' ಗಾಬರಿ ಕಾತುರಗಳಿಂದ ಕೇಳಿದಳು.

''ನಿಂಗೊತ್ತಿತ್ತಾ ಸುಚಿತ್ರಾ ? ಆಂಟಿ ಮಗ... ಸ್ವಲ್ಪ... ತಡವರಿಸಿದಳು''

''ಇಲ್ಲಮ್ಮ ನಂಗೆ ಗೊತ್ತಿರಲಿಲ್ಲ. ಒಬ್ಬ ಮಗ ಅಮೆರಿಕಾದಲ್ಲಿದ್ದಾನೆ ಅಂತ ಮಾತ್ರ ಹೇಳಿದ್ದರು. ಹೀಗೆ ಅಂತ ಗೊತ್ತಿದ್ದಿದ್ರೆ ನಾನು ಖಂಡಿತಾ, ನಿನಗೆ ಈ ಅಡ್ರೆಸ್ ಹೇಳ್ತಿರಲಿಲ್ಲ... ಸಾರಿ ಕಣೇ...''

''ಹೋಗಲಿ ಬಿಡು. ಸಾರಿ, ಯಾಕೆ ? ನೆನ್ನೆ ಮುಜುಗರವಾದದ್ದೇನೋ ನಿಜ. ಆದರೆ, ಕ್ರಮೇಣ ಅಡ್ಜಸ್ಟ್ ಆಗುತ್ತೆ ಬಿಡು.''

''ನೋ... ನೀನು ಇಲ್ಲಿರಬೇಡ. ಬೇರೆ ಎಲ್ಲಿಗಾದ್ರೂ ಷಿಫ್ಟ್ ಮಾಡು''

''ನೋಡೋಣ... ಮೊದಲು ನಿನ್ನ ಮದುವೆ ವಿಷಯ ಹೇಳು... ನಿನ್ನ ವುಡ್‌ಬೀ ಏನಂತಾರೆ ?''

''ಏನಂತಾರೆ ? ತಮಗೆ ಬೇಕಾದಾಗ ಫೋನು ಮಾಡ್ತಾರೆ. ಮಾತಾಡ್ತಾರೆ.''

''ಅಷ್ಟೇನಾ ?''

''ಇನ್ನೇನಿರುತ್ತೆ ? ಮಹಾ ಗೊತ್ತಿರೋಳ ಹಾಗೆ ಏನೇನೋ ಕೇಳ್ತೀಯಲ್ಲ''

''ಕೇಳಿದ್ರೆ ನೀನು ಹೇಳಿ ಬಿಡ್ತೀಯಾ ?''

'ಅಫ್‌ಕೋರ್ಸ್... ಅದನ್ನೆಲ್ಲಾ ಯಾರಾದ್ರೂ ಹೇಳ್ತಾರಾ ?'' ತುಂಟನಗೆ ನಕ್ಕಳು. ಅರ್ಧಗಂಟೆ ತನಕ ಅದೂ ಇದೂ ಮಾತನಾಡಿದರು. ಕೆಳಗಿಳಿದುಬಂದಾಗ ಜಾನಕಿ ಕಾಣಲಿಲ್ಲ. ಸ್ನೇಹಿತೆಯರು ಕಣ್ಣುಸನ್ನೆಯಲ್ಲಿಯೇ ಮಾತನಾಡಿಕೊಂಡರು. ಇಬ್ಬರೂ ರೂಮಿನ ಬಾಗಿಲ ಬಳಿಗೆ ಬಂದರು.

''ಆಂಟೀ, ನಾನು ಹೋಗ್ಬರ್ತೀನಿ'' ಸುಚಿತ್ರ ನುಡಿದಾಗ, ಜಾನಕಿ ಹೊರಬಂದಳು. ಅವಳ ಹಿಂದೆಯೇ ಜಗ್ಗು ನಿಧಾನವಾಗಿ ಓರೆಕೋರೆಯಾಗಿ ನಡೆಯುತ್ತಾ ಬಂದ. ಸುಚಿತ್ರಳ ಉಸಿರು ಕಟ್ಟಿದಂತಾಗಿತ್ತು. ಸುಮತಿಯ ಕೈ ಹಿಡಿದಳು.

''ಆಂಟೀ, ನಾನು ಬರ್ತೀನಿ'' ತೊದಲಿದಳು.

''ಒಳ್ಳೇದಮ್ಮ. ಆಗಾಗ್ಗೆ ಬರ್ತಾ ಇರು... ನಿನ್ನ ಸ್ನೇಹಿತೆಗೋಸ್ಕರ''

''ಓ...ಕೆ... ಆಂಟೀ, ಬರ್ಲೇನೇ ಸುಮತೀ...'' ಎನ್ನುತ್ತಾ ಕಳ್ಳನೋಟದಲ್ಲಿ ಜಗ್ಗೂನ ನೋಡುತ್ತಾ ಹೊರನಡೆದಳು. ಸುಮತೀ ಗೇಟಿನ ತನಕ ಅವಳನ್ನು ಹಿಂಬಾಲಿಸಿದಳು.

''ನಾನು ನೋಡೇ ಇರಲಿಲ್ಲ ಕಣೇ ಇವನನ್ನ... ಇಷ್ಟೊ ದೊಡ್ಡೋನು ಅಂತ ನಂಬುಕ್ಕೇ ಸಾಧ್ಯವಾಗ್ತಿಲ್ಲ.'' ಸ್ನೇಹಿತೆಯ ಕೈ ಹಿಡಿದಳು.

''ಹೋಗಲಿ ಬಿಡು. ನೀನ್ಯಾಕೆ ಇಷ್ಟು ಅಪ್ಸೆಟ್ ಆಗ್ತೀಯಾ ?''

''ನಂಗ್ಯಾಕೋ ಏನೋ ಮುಜುಗರವಾಗ್ತಿದೆ. ನೀನು ಮಾತ್ರ ಆದಷ್ಟು ಬೇಗ ಇಲ್ಲಿಂದ ಷಿಫ್ಟ್ ಮಾಡಿಬಿಡು ಪ್ಲೀಸ್.''

''ಓ... ಕೆ. ನೋಡೋಣ. ನೀನೀಗ ಸೇಫ್ ಆಗಿ ಮನೆಗೆ ಹೋಗು. ಮನೆ ತಲುಪಿದ ತಕ್ಷಣ ಫೋನು ಮಾಡು...'' ಸ್ನೇಹಿತೆಯನ್ನು ಬೀಳ್ಕೊಟ್ಟಳು. ಒಳಗೆ ಬಂದಾಗ, ಆಂಟಿ ಕಾಣದೇ ಇದ್ದುದರಿಂದ, ಮುಂಬಾಗಿಲನ್ನು ಹಾಕಿ, ತನ್ನ ರೂಮಿಗೆ ಬಂದಳು.

ಎಂಟೂವರೆಯ ಹೊತ್ತಿಗೆ, ಮತ್ತೆ ಆಂಟಿ, ಕೆಳಗಿನಿಂದ ಕರೆದಳು. ಜಾನಕಿ ಊಟಕ್ಕೆ ತಟ್ಟೆಗಳನ್ನು ಇಟ್ಟಿದ್ದಳು. ಇಬ್ಬರೂ ಒಟ್ಟಿಗೇ ಕೂತು ಊಟ ಮಾಡಿದರು. ಜಗ್ಗು ಬಗ್ಗೆ ಅವಳೂ ಹೇಳಲಿಲ್ಲ ; ಇವಳೂ ಕೇಳಲಿಲ್ಲ. ಊಟದ ನಂತರ, ಇಬ್ಬರಿಗೂ ಯಾವ ಮಾತೂ ಇರಲಿಲ್ಲ. ಜಾನಕಿ ಟೆಲಿವಿಷನ್ ಮುಂದೆ ಕುಳಿತಳು. ಸುಮತಿ ತನ್ನ ರೂಮು ಸೇರಿದಳು. ಹೀಗೆ ಪ್ರಾರಂಭವಾಗಿತ್ತು ಸುಮತಿಯ ದಿನಚರಿ, ಪೇಯಿಂಗ್ ಗೆಸ್ಟ್ ಆಗಿ !

ಸುಮತಿ, ಜುವಾಲಜಿಯಲ್ಲಿ ಎಂ.ಎಸ್ಸಿ., ಮಾಡಿ, ಮಹಿಳಾ ಕಾಲೇಜೊಂದರಲ್ಲಿ ಲೆಕ್ಚರರ್ ಆಗಿದ್ದಳು. ವಿದ್ಯಾಭ್ಯಾಸ ಮುಗಿಸಿ, ಕೆಲಸಕ್ಕೆ ಸೇರಿಕೊಂಡಿದ್ದೇ ಒಂದು ಯಾಗದಷ್ಟು ಪ್ರಯಾಸಕರ

''ನಾನು ಏನೇ ಆದರೂ, ಈ ಊರಿನಲ್ಲಿ ಮಾತ್ರ ಓದುವುದಿಲ್ಲ, ಬೇರೆ ಯಾವುದಾದರೂ ಊರಿನಲ್ಲಿ ಹಾಸ್ಟೆಲಿನಲ್ಲಿದ್ದುಕೊಂಡು ಓದ್ತೀನಿ'' ಎಂದು ಸುಮತಿ ತನ್ನ ಇಚ್ಛೆಯನ್ನು ಪ್ರಕಟಗೊಳಿಸಿದಾಗ ಮನೆಯಲ್ಲಿ ಕೋಲಾಹಲ. ಒಬ್ಬೊಬ್ಬರೂ ಒಂದೊಂದು ರೀತಿಯಲ್ಲಿ ತಿಳುವಳಿಕೆ ಹೇಳಿದ್ದರು. ಅಂತೂ, ಅಲ್ಲಿಯ ಕಾಲೇಜಿಗೇ ಸೇರಿಕೊಂಡು ಬಿ.ಎಸ್ಸಿಯನ್ನು ಫಸ್ಟ್‌ಕ್ಲಾಸಿನಲ್ಲಿ ಪಾಸಾದಳು. ಫಲಿತಾಂಶ ಬರುತ್ತಿದ್ದಂತೆಯೇ ಯಾರಿಗೂ ತಿಳಿಯದಂತೆ, ಎಂ.ಎಸ್ಸಿ., ಗೆ ಅರ್ಜಿಯನ್ನು ಹಾಕಿದ್ದಳು.

ಮಾನಸ ಗಂಗೋತ್ರಿಯಲ್ಲಿ ಜುವಾಲಜಿ ಕೋರ್ಸಿಗೆ ಪ್ರವೇಶ ದೊರಕಿದಾಗ, ಮನೆಯಲ್ಲಿ ಮತ್ತೊಮ್ಮೆ ಕೋಲಾಹಲ. ಹಠದಿಂದ ಮೈಸೂರಿಗೆ ಹೊರಟು ನಿಂತಿದ್ದಳು. ಅಣ್ಣಂದಿರು ಕೋಪಿಸಿಕೊಂಡಿದ್ದರು.

''ಗಂಡು ಮಕ್ಕಳಾಗಿ, ನಾವೇ ಹೆಚ್ಚಿಗೆ ಓದಲಿಲ್ಲ, ಇನ್ನು ನಿನಗ್ಯಾಕೆ ಓದು ? ಸುಮ್ಮನೆ ದಂಡ'' ಮೂದಲಿಸಿ ನುಡಿದಿದ್ದರು.

"ನಿಮಗ್ಯಾಕೆ ಅದೆಲ್ಲಾ ? ನಿಮಗೆ ವಿದ್ಯೆ ಹತ್ತಲಿಲ್ಲ, ಫೇಲಾದೆ ಅನ್ನೋ ನೆವಾನೇ ಮುಂದಿಟ್ಟುಕೊಂಡು ಕಾಲೇಜಿಗೆ ಹೋಗಲಿಲ್ಲ. ನಿಮಗಿಂತ ಹೆಚ್ಚಿಗೆ ಓದುತ್ತಿದೀನಿ ಅಂತ ನಿಮಗೆಲ್ಲಾ ಅಸೂಯೆ", ಕಿಡಿಕಾರಿದಳು.

"ನಿನ್ನ ಹತ್ತಿರ ಯಾರೂ ವಾದಿಸ್ತಾರೆ ಹೋಗೇ ? ನೀನು ಮೊದಲ್ನಿಂದಲೂ ಜಗಳ ಗಂಟಿ, ಮೊದಲೇ ಜಂಭ. ಇನ್ನು ಮುಂದೆ ನಿನ್ನ ತಲೆಯೇ ನಿಲ್ಲುಲ್ಲ ಎತ್ಲಾಗಾದ್ರೂ ಹೋಗು, ಏನಾದ್ರೂ ಮಾಡ್ಕೋ..." ಅಣ್ಣ ಸೂರಿಯ ಮಾತುಗಳನ್ನು ಕೇಳಿ ಅವಳಿಗೆ ಅಳು ಬರುವಂತಾಗಿತ್ತು. ತಂದೆ ಮನೆಗೆ ಬಂದೊಡನೆ ಅವರಿಗೆ ವರದಿ ಒಪ್ಪಿಸಿದಳು ತಂದೆ ಶಾಮಣ್ಣ ಮಗಳಿಗೆ ಸಮಾಧಾನ ಹೇಳಿದರು.

"ನಿನ್ನ ಅಂಗೈಯಲ್ಲಿ ವಿದ್ಯಾರೇಖೆ ಇದೆ. ಅದನ್ನು ಅಳಿಸಲು ಯಾರಿಂದಲೂ ಸಾಧ್ಯವಿಲ್ಲ. ವಿದ್ಯೆ ಯಾರೊಬ್ಬರ ಸ್ವತ್ತಲ್ಲ. ನಿನ್ನ ಪರಿಶ್ರಮದಿಂದ ನಿನಗೆ ಸೀಟು ಸಿಕ್ಕಿದೆ ನೀನು ಅವರುಗಳ ಮಾತಿಗೆ ಬೆಲೆ ಕೊಡಬೇಡ. ನೀನು ಧೈರ್ಯವಾಗಿ ಯೂನಿವರ್ಸಿಟಿಗೆ ಹೋಗು" ಆತ ಮಗಳಲ್ಲಿ ಧೈರ್ಯ ತುಂಬಿದ್ದರು. ಆಗ ತಾಯಿ ಅಡ್ಡ ಬಂದಿದ್ದಳು.

"ಗಂಡು ಹುಡುಗರು, ಹೆಚ್ಚು ಓದಿ, ಒಳ್ಳೆ ಕೆಲಸಕ್ಕೆ ಸೇರಿ, ಚೆನ್ನಾಗಿ ಸಂಪಾದಿಸುವಂತಾಗಲಿ ಅಂತ ಬಯಸಿದೆ. ಇಬ್ಬರೂ ಕಾಲೇಜು ಮೆಟ್ಟಿಲನ್ನು ಸಹ ತುಳಿಯಲಿಲ್ಲ. ಹೇಮ ಎಸ್.ಎಸ್.ಎಲ್.ಸಿ. ಪಾಸು ಮಾಡಿದಾಗ, ಇನ್ನು ಓದಿದ್ದು ಸಾಕು ಅಂತ ಮನೆಯಲ್ಲೇ ಕೂರಿಸಿದಿರಿ. ಈಗ ಇವಳೇಕೆ ಮುಂದೆ ಓದಬೇಕು ? ಓದಿ ಕೆಲಸಕ್ಕೆ ಸೇರಿ, ಸಂಪಾದಿಸಿ ನಮಗೆ ಕೊಡ್ತಾಳೈ ? ಏನೂ ಬೇಡ. ಅವಳಿನ್ನು ಓದಿದ್ದು ಸಾಕು, ಮನೆಯಲ್ಲಿದ್ದು ಮನೆಯ ಕೆಲಸಕಾರ್ಯಗಳನ್ನು ಕಲಿಯಲಿ. ಎಷ್ಟೇ ಓದಿದರೂ, ಹೆಣ್ಣು ಮಕ್ಕಳಿಗೆ ಕಸಮುಸುರೆ ಕೆಲಸ ತಪ್ಪಿದ್ದಲ್ಲ, ಹೇಮಂಗೆ ಮದುವೆ ಆಗ್ತಾ ಇದ್ದಹಾಗೇ, ಇವಳಿಗೂ ವರನನ್ನು ನೋಡಿ, ಮದುವೆ ಮಾಡಿ ಕೈ ತೊಳಕೊಳ್ಳೋಣ... ಆಮೇಲೆ ನಾಲ್ಕು ವರ್ಷ ತಡೆದು ಕವಿತಂಗೆ ಮದುವೆ ಮಾಡಬಹುದು. ಓದುಕ್ಕೆ ಖರ್ಚು ಯಾಕೆ ಮಾಡಬೇಕು ? ಅದೇ ಹಣವಿದ್ದರೆ, ಮದುವೆ ಖರ್ಚಿಗೆ ಆಗುತ್ತೆ" ಸುಮತಿ ತಾಯಿಯನ್ನೇ ದುರು ದುರು ನೋಡಿದ್ದಳು. ಅಲ್ಲೇ ಕುಳಿತು ಬಟ್ಟೆಗಳನ್ನು ಹೊಲೆಯುತ್ತಿದ್ದ ಹೇಮ ನುಡಿದಳು.

"ಬಿಡಮ್ಮ, ನೀನ್ಯಾಕೆ ಹೀಗಾಡ್ತೀಯ ? ಗಂಡು ಮಕ್ಕಳು ಹೆಚ್ಚಿಗೆ ಓದಲಿಲ್ಲ ಅಂತ, ಈಗ ಇವಳ ಓದಿಗೆ ಅಡ್ಡಿ ಮಾಡಬೇಡ. ಎಂ.ಎಸ್ಸಿ. ಮಾಡಿದರೆ ಕಾಲೇಜ್ ಲೆಕ್ಚರರ್ ಕೆಲಸ ಸಿಗುತ್ತೆ. ಎಲ್ಲರಿಗಿಂತ ಹೆಚ್ಚು ಸಂಪಾದಿಸ್ತಾಳೆ ನಿನಗೆ ಬೇಕು ಬೇಕಾದ, ಸೀರೆ, ಒಡವೆಗಳನ್ನು ತಂದುಕೊಡ್ತಾಳೆ ಅಲ್ವೇನೆ ಚುಮ್ಮಿ!" ಹೇಮ ಮುಗುಳ್ನಗುತ್ತಾ ನುಡಿದಾಗ, ಸುಮತಿಗೆ ನಗಬೇಕೆನಿಸಲಿಲ್ಲ.

"ಅವಳು ಸಂಪಾದಿಸುವುದೂ ಬೇಡ, ನನಗೆ ಸೀರೆ ಒಡವೆಗಳನ್ನು ತಂದುಕೊಡುವುದೂ ಬೇಡ... ನಿಮ್ಮಗಳ ಹುಂಗಿನ ಮಾತುಗಳೂ ಬೇಡ" ತಾಯಿ ಕೈ ಮುಗಿದು ನುಡಿದಾಗ, ಸುಮತಿಯ ಹಠ ಇನ್ನೂ ಹೆಚ್ಚಿತ್ತು. ತಂದೆ ತನ್ನ ಕಡೆಗೆ ಇದಾರೆ ಎಂಬ ಧೈರ್ಯದಿಂದ ಹೊರಡುವ

ಸಿದ್ಧತೆಗಳನ್ನು ನಡೆಸಿದಳು. ಶಾಮಣ್ಣ ಮಗಳನ್ನು ಮೈಸೂರಿಗೆ ಕರೆತಂದು ಬಿಟ್ಟು ಹಾಸ್ಟೆಲ್ಲಿನ ವ್ಯವಸ್ಥೆಯನ್ನು ಮಾಡಿ ವಾಪಸ್ಸು ಭದ್ರಾವತಿಗೆ ಹೊರಟು ಹೋಗಿದ್ದರು. ಎರಡು ವರ್ಷಗಳು ಕಳೆದದ್ದು ಗೊತ್ತಾಗಲೇ ಇಲ್ಲ. ಎಂ.ಎಸ್ಸಿಯನ್ನು ಪ್ರಥಮ ಶ್ರೇಣಿಯಲ್ಲಿ ಪಾಸು ಮಾಡಿದದ್ದಳು.

ತಂದೆ ಶಾಮಣ್ಣ ಹೆಮ್ಮೆಯಿಂದ ಮಗಳ ಬೆನ್ನು ತಟ್ಟಿದ್ದರು. ''ನೀನೇ ಈ ಮನೆಗೆ ಮೊದಲ ಗ್ರಾಜುಯೇಟ್. ಡಬ್ಬಲ್ ಗ್ರಾಜುಯೇಟ್ ಹೇಮಾ ತಂಗಿಯ ಕೈ ಕುಲಕಿ, ಶುಭಾಶಯಗಳನ್ನು ಕೋರಿದ್ದಳು. ತಾಯಿ ಮಾತ್ರ

''ಬೇಡಾಂತ ಅಂದ್ರೂ ಹಠ ಸಾಧಿಸಿ, ಎಂ.ಎಸ್ಸಿ. ಮಾಡಿ ಬಿಟ್ಟೆ ನಿಮ್ಮಪ್ಪನೂ ನಿನ್ನ ತಾಳಕ್ಕೆ ಕುಣಿದ್ರು. ಈಗ ಮುಂದೆ ಏನ್ಮಾಡ್ಬೇಕೂಂತ ಇದೀಯ ?''

''ಕೆಲಸಕ್ಕೆ ಸೇರಿಕೊಳ್ತಾಳೆ ; ಇನ್ನೇನು ?'' ಶಾಮಣ್ಣ ನುಡಿದರು.

''ಓದಿಸಿದ್ದಾಯ್ತು. ಕೆಲಸವಂತೆ ಕೆಲಸ... ಏನು ಕೆಲಸ ಸಿಗುತ್ತೆ ?''

''ಕಾಲೇಜಿನಲ್ಲಿ ಲೆಕ್ಚರರ್ ಆಗ್ತೀನಮ್ಮ... ಪಾಠ ಹೇಳಿಕೊಡ್ತೀನಿ''

''ಗಂಡಸು ಪಾಠ ಹೇಳಿಕೊಡೋದನ್ನ ಕೇಳಿದೀನಿ... ಹೆಂಗಸಿಗೆ ಕಾಲೇಜಿನಲ್ಲಿ ಪಾಠ ಹೇಳೋ ಕೆಲಸ ? ನಿನ್ನ ಕೈಲಿ ಆಗುತ್ತೇನೆ ?'' ಅಣ್ಣ ಸೂರಿ ರೇಗಿಸಿದ...

''ನೀನೊಬ್ಬ ಹಳ್ಳೀ ಮೇಷ್ಟ್ರು... ಸಿಟೀಲಿ ನೋಡು... ಹೆಂಗಸರು ಎಷ್ಟೋ ಜನ ಕಾಲೇಜು ಲೆಕ್ಚರರ್ಸ್ ಇದಾರೆ ಅಂತ...''

''ಹೌದಮ್ಮ ನಾನು ಹಳ್ಳೀಮೇಷ್ಟ್ರು, ನೀನು ಸಿಟಿ ಕಾಲೇಜಿನಲ್ಲಿ ಲೆಕ್ಚರರ್... ನಿನಗೆ ದುರಹಂಕಾರ...''

''ದುರಹಂಕಾರ ಅವಳಿಗಲ್ಲ, ನಿನಗೆ ಕಣೋ ಸೂರಿ, ಅವಳೂ ನಿನ್ನ ತಂಗಿ ಕಣೋ, ಅವಳು ಫಸ್ಟ್‌ಕ್ಲಾಸ್‌ನಲ್ಲಿ ಪಾಸಾಗಿದ್ದಾಳೆ ಅಂತ ಹೆಮ್ಮೆಪಡೋದನ್ನ ಬಿಟ್ಟು ತಲೆಹರಟೆ ಮಾತುಗಳನ್ನಾಡ್ತೀಯಲ್ಲ'' ಹೇಮ ಹೇಳಿದ್ದಳು.

''ಹೌದಮ್ಮ, ನಾನು ತಲೆಹರಟೆ, ನಿನ್ನಷ್ಟು ದೊಡ್ಡಬುದ್ಧಿ ನನಗಿಲ್ಲ. ನಾವೆಲ್ಲಾ ಇಲ್ಲೇ ಹಳ್ಳೀಲೇ ಬಿದ್ದಿರ್ತೀವಿ. ಇನ್ನು ಕೆಲವೇ ದಿನಗಳು ಅಷ್ಟೇ... ಆಮೇಲೆ, ನಾವುಗಳು ಯಾರೂಂತ ಸಹ ನೆನಪಿರುಲ್ಲ ನಿನ್ನ ತಂಗಿಗೆ...'' ಸೂರಿ ಅಲ್ಲಿಂದ ಹೊರಟು ಹೋಗಿದ್ದ. ಹೇಮ ತಂಗಿಯ ಭುಜದ ಮೇಲೆ ಕೈಯನ್ನಿಟ್ಟಳು.

''ಅವನು ಏನೇನೋ ಆಡಿದ ಅಂತ, ನೀನು ತಲೆ ಕೆಡಿಸ್ಕೋ ಬೇಡ ಚುಮ್ಮೀ... ಹಳ್ಳಿಯ ಮಕ್ಕಳಿಗೆ ಪಾಠ ಹೇಳಿಕೊಟ್ಟು ಅವನಿಗೂ ಸಾಕಾಗಿ ಹೋಗಿದೆ. ಆ ದುಗುಡವನ್ನೆಲ್ಲಾ ಮನೇಲಿ ತೋರಿಸಿಕೊಳ್ತಾನೆ.''

''ಸಾಕು ಸುಮ್ಮನಿರೇ... ಸೂರೀನ ಅನ್ನೋಕೆ ನಿನಗೇನು ಹಕ್ಕಿದೆ ? ಈ ಮನೆಗೆ ರಿಯಮಗ ಅವನು. ನಮ್ಮ ಮನೆಯ ಕಷ್ಟಸುಖಕ್ಕೆ ಅವನೇ ದಿಕ್ಕು. ನಿಮಗೆಲ್ಲಾ ಏನು ೊತ್ತಾಗುತ್ತೆ ? ಮನೇಲಿ ಕೂತು ಆರಾಮವಾಗಿ ಕಾಲ ಕಳೀತೀರಿ. ಅವನ ಹಾಗೇ, ಎರಡೆರಡು ಂಟೆ ಬಸ್ನಲ್ಲಿ ಹೋಗಿ, ಮಕ್ಕಳ ಮುಂದೆ ಒರಲಿಕೊಂಡು ಪಾಠ ಹೇಳಿಕೊಟ್ಟಿದ್ದರೆ, ಕಷ್ಟ ಏನೂಂತ ಮಗೂ ಅರ್ಥವಾಗುತ್ತಿತ್ತು.

''ಹೀಗೆ ಮಾತ್ನಾಡಿ ಹೆಣ್ಣುಮಕ್ಕಳ ಮನಸನ್ನ ಯಾಕೇ ನೋಯಿಸ್ತೀಯ ?'' ಹೇಮ ಬಟ್ಟೆ ೊಲಿದು ಅಷ್ಟೋ ಇಷ್ಟೋ ಸಂಪಾದಿಸ್ತಾಳಲ್ಲ, ನಿನಗೆ ಏನು ಕಡಿಮೆ ಆಗಿದೆ ಅಂತ ?'' ಶಾಮಣ್ಣ ೆಂಡತಿ ಸೀತಳನ್ನು ಗದರಿದರು.

''ನಿಮಗೆ ಯಾವತ್ತೂ ಅಷ್ಟೇ ಹೆಣ್ಣು ಮಕ್ಕಳ ಪರವಹಿಸಿ, ಗಂಡುಮಕ್ಕಳನ್ನು ಕಡೆಗಣಿಸಿ ಟ್ರೆ, ಇದೇ ಆಸಕ್ತಿಯನ್ನು ಸೂರಿ, ವಿಶ್ವನ ಮೇಲೆ ತೋರಿಸಿದ್ರೆ, ಅವರುಗಳೂ ಕಾಲೇಜು ೇಷ್ಟ್ರುಗಳಾಗಿರುತ್ತಿದ್ದರು...''

''ಹೌದು, ಹೌದು... ಓದುಕ್ಕೇ ಇಷ್ಟವಿಲ್ಲದಿದ್ದೋರು, ಓದಿಸುವ ಮೇಷ್ಟ್ರಾಗುತ್ತಿದ್ರಾ ?... ಮಾಷೆಯಾಗಿದೆ ನಿನ್ನ ಮಾತು.''

''ಹೌದು. ನಾನೇ ಒಂದು ತಮಾಷೆ ನಿಮಗೆ'' ಎಂದು ಕೋಪವನ್ನು ನಟಿಸುತ್ತಾ ಒಳ ಡೆದಿದ್ದಳು.

ಸುಮತಿಗೆ ಅವಳ ಆಸೆಯಂತೆ, ಬೆಂಗಳೂರಿನ ಮಹಿಳಾ ಕಾಲೇಜಿನಲ್ಲಿ ಲೆಕ್ಚರರ್ ಕೆಲಸಕ್ಕೆ ರ್ಡರ್ ಬಂದಿತ್ತು. ಸೀತ ತನ್ನ ಅಸಂತೋಷವನ್ನು ವ್ಯಕ್ತಪಡಿಸಿದ್ದಳು.

''ಇದೇ ಊರಿನಲ್ಲಿ ಯಾವುದಾದ್ರೂ ಕಾಲೇಜಿಗೆ, ಕೆಲಸಕ್ಕೆ ಸೇರಿಕೊಡಿದ್ರೆ ಆಗ್ತಿರಲಿಲ್ವಾ ! ಂಗಳೂರು ಅಂತಂದ್ರೆ ಸುಮ್ಮನೇ ಆಗುತ್ತಾ ? ಇರೋದು ಎಲ್ಲಿ ? ಬಾಡಿಗೆ, ಊಟ, ತಿಂಡಿ, ರ್ಚೇ ಬೇಕಾದಷ್ಟಿರುತ್ತೆ. ಉಳಿತಾಯ ಏನು ಮಾಡ್ತೀಯ !

''ಎಲ್ಲಾದಕ್ಕೂ ಬಾಯಿ ಹಾಕ್ತೀಯಲ್ಲ ಸೀತು, ನೀನೇ ಹೋಗಿ ಅವಳ ಜೊತೆಯಿರು. ಡಿಗೆ ಊಟ ತಿಂಡಿಯ ಖರ್ಚು ಉಳಿಸಬಹುದು.''

''ಬೇಡಪ್ಪಾ ಬೇಡ. ನನ್ನಂಥೋಳಿಗೆ ಈ ಊರೇ ಸರಿ. ನಾನು ಇಲ್ಲಿಂದ ಹೋದ್ರೇ, ಇಲ್ಲಿ ಮನೇಲಿ ಹೇಗೆ ನಿಭಾಯಿಸ್ತೀರಿ ? ನಾನಿಲ್ಲದೇ ಒಂದು ಕೆಲಸ ನಡೆಯೋಲ್ಲ ಈ ಮನೇಲಿ... ದು ಎಲ್ಲರಿಗೂ ಗೊತ್ತು...''

''ಅದು ನಿನ್ನ ಭ್ರಮೆ ಸೀತು, ನೀನು ಹೋಗು, ಹೇಮ ಇದಾಳೆ... ಅಡಿಗೆ ಕೆಲಸ ಅವಳು ಾಡ್ತಾಳೆ.''

''ಚೆನ್ನಾಯ್ತು. ನಾನು ಅಲ್ಲಿ ಹೋಗಿ ಕುಳಿತರೇ... ಹೇಮಳಿಗೆ ವರಗಳನ್ನು ನೋಡಬೇಡವೆ ?''

''ಬಿಡಿ ಅಪ್ಪ, ಅಮ್ಮಂಗೆ, ನನ್ನ ಮೇಲೆ ನಂಬಿಕೆ ಇಲ್ಲ, ಚುಮ್ಮಿ ಜೊತೆ ಇರುಕ್ಕೆ ಇಷ್ಟವಿಲ್ಲ, ಏನೋ ಒಂದು ನೆವ ಹೇಳ್ತಾಳೆ. ಬೆಂಗಳೂರಿಗೆ ಹೋದರೆ, ಮಡಿ ಹುಡಿ ನಡೆಯೋಲ್ಲ ಅನ್ನೋ ಭಯ... ಅಲ್ವೇನಮ್ಮಾ... ?

''ಹೌದು... ಪೂಜೆ ಪುನಸ್ಕಾರ, ಮಡಿ ಗಿಡಿ ಎಲ್ಲಾ ಬಿಟ್ಟು, ಅಲ್ಲಿ ಒಬ್ಬಳೇ ಏನು ಮಾಡಲಿ? ನನಗೆ ಇದೇ ಸರಿ... ನಾನು ಬೇಡಾಂತ ಅಂದ್ರಾ ಓದಿದಳು, ಕೆಲಸಕ್ಕೆ ಸೇರಿಕೊಂಡಳು. ಈಗಲೂ ನಾನೇನು ಬೇಡ ಅವಳಿಗೆ... ಏನೋ ಮಾಡಿಕೊಳ್ತಾಳೆ.'' ಉದಾಸೀನತೆಯಿಂದ ನುಡಿದಳು.

ತಾಯಿ ಹಾಗೆ ನೇರವಾಗಿ ನುಡಿದಾಗ ಸುಮತಿ ಪೆಚ್ಚಾಗಿದ್ದಳು. ಈ ಅಮ್ಮಂಗೆ ಮಕ್ಕಳು ಹೆಚ್ಚು, ಮನೆಯ ಖರ್ಚುಹೆಚ್ಚು, ಅದಕ್ಕೇ ಹೀಗಾಡ್ತಾಳೆ. ಮೊದಲ ತಿಂಗಳ ಸಂಬಳ ಕೈಗೆ ಬಂದಕೂಡಲೇ, ಮೊದಲು ಅಮ್ಮನಿಗೆ ಅಂತ ಸ್ವಲ್ಪ ಹಣಕಳಿಸ್ತೀನಿ. ಅವಳಿಗೆ ಖಂಡಿತಾ ಖುಷಿಯಾಗುತ್ತದೆ. ಎಲ್ಲಾ ದುಗುಡವೂ ಕಡಿಮೆಯಾಗಿ ಹೋಗುತ್ತೆದ'' ಎಂದುಕೊಂಡು ಹೊರಡುವ ತಯಾರಿ ನಡೆಸಿದಳು.

ಕಾಲೇಜಿನ ಸಹಪಾಠಿ, ಸುಚಿತ್ರಾಳಿಗೆ ಕಾಗದ ಬರೆದು, ತನಗೆ ವಾಸಿಸಲು, ಸರಿಯಾದ ಒಂದು ವ್ಯವಸ್ಥೆ ಮಾಡಿಕೊಡಬೇಕೆಂದು ಕೇಳಿಕೊಂಡಿದ್ದಳು. ಸುಚಿತ್ರ ಬರೆದಿದ್ದಳು, ''ಮೊದಲು ಬಾ.. ಆಮೇಲೆ ಮುಂದಿನ ವಿಚಾರವನ್ನು ಇಲ್ಲಿ ಕೂತು ಮಾತನಾಡೋಣ'' ಅಂತ.

ಹೀಗೆ ಬೆಂಗಳೂರಿಗೆ ಬಂದು ಸೇರಿಕೊಂಡಿದ್ದಳು. ಸುಚಿತ್ರಳ ಮನೆ ಸಾಕಷ್ಟು ದೊಡ್ಡದಾಗಿತ್ತು. ಮೂರು ಬೆಡ್‌ರೂಮಿನ ಮನೆ ಗೆಳತಿಯರಿಬ್ಬರೂ ಒಂದು ರೂಮಿನಲ್ಲಿ ಮಲಗುತ್ತಿದ್ದರು. ಇಂಜನಿಯರಿಂಗ್ ಕೋರ್ಸಿಗೆ ಸೇರಿಕೊಂಡಿದ್ದ ಸುಧೀರನಿಗೆ ಮತ್ತೊಂದು ರೂಮು. ಅವರ ತಂದೆ ತಾಯಿಗೆ ಇನ್ನೊಂದು ರೂಮು, ಎಲ್ಲಾ ಅನುಕೂಲವಾಗಿತ್ತು. ಊಟ ತಿಂಡಿಯೂ ಅವರ ಮನೆಯಲ್ಲಿಯೇ ನಡೆಯುತ್ತಿತ್ತು. ಹೀಗೆ ಆರೇಳು ತಿಂಗಳುಗಳು ಕಳೆದವು ಸುಚಿತ್ರಳ ಮದುವೆ ಗೊತ್ತಾಗಿತ್ತು. ಮದುವೆಯ ತಯಾರಿ, ಮನೆಗೆ ಬರುವವರು ಹೋಗುವವರು, ಸುಮತಿಗೆಸಂಕೋಚವೆನಿಸಿತ್ತು. ಅವಳ ಮನಃಸ್ಥಿತಿಯನ್ನು ಸುಚಿತ್ರ ಅರಿತಳು. ಈ ಹಿಂದೆ, ಜಾನಕಿ ಆಡಿದ್ದ ಮಾತುಗಳು ನೆನಪಾಗಿದ್ದವು.

''ನನ್ನ ಮಗ ಅಮೆರಿಕಾಕ್ಕೆ ಹೊರಟು ನಿಂತಿದಾನೆ... ಅವನೂ ಹೊರಟು ಹೋದರೆ, ನಾನು ಒಬ್ಬಳೇ ಆಗಿ ಬಿಡ್ತೀನಿ... ಒಬ್ಬಳೇ ಇರುಕ್ಕೆ ಭಯ ಏನಿಲ್ಲ, ಆದರೆ, ಇನ್ನೊಬ್ಬರು ಇದಾರೆ ಅಂತ ಇದ್ದರೆ, ನನಗೂ ಒಂದು ಜೀವನ ಅಂತ ಇರುತ್ತೆ. ಇಲ್ಲದೇ ಇದ್ದರೆ, ಹಗಲೂ ರಾತ್ರಿ ಎಲ್ಲಾ ಒಂದೇ ಆಗಿರುತ್ತೆ... ಅಷ್ಟು ನಿರುತ್ಸಾಹಿಯಾಗಿ ಬಿಡ್ತೀನಿ'' ಅಂತ. ಅದೇ ಮಾತುಗಳನ್ನು

ನೆನಪಿನಲ್ಲಿಟ್ಟುಕೊಂಡು, ಜಾನಕಿಯೊಡನೆ ಮಾತನಾಡಿದ್ದಳು. ಸುಮತಿಯನ್ನು ಪೇಯಿಂಗ್‌ಗೆಸ್ಟ್ ಆಗಿ ಇಟ್ಟುಕೊಳ್ಳುವಂತೆ, ಜಾನಕಿಯನ್ನು ಒಪ್ಪಿಸಿದ್ದಳು.

☆ ☆ ☆

ಕಡೆಯ ಪಿರಿಯಡ್, ಕ್ಲಾಸ್ ಇರಲಿಲ್ಲವಾದುದರಿಂದ, ಮನೆಗೆ ಸ್ವಲ್ಪ ಮುಂಚಿತವಾಗಿ ಬಂದಳು. ಮುಂಬಾಗಿಲು ತೆಗೆದೇ ಇತ್ತು. ಸೀದಾ ಒಳಗೆ ಬಂದಳು. ಸೋಫಾದ ಮೇಲೆ ಕುಳಿತಿದ್ದ ಜಾನಕಿ ಗಡಿಬಿಡಿಯಿಂದ, ತನ್ನ ತೊಡೆಯ ಮೇಲೆ ತಲೆ ಇಟ್ಟು ಮಲಗಿದ್ದ ಮಗನನ್ನು ಹೊಡೆದು ಎಬ್ಬಿಸಿದಳು.

''ಏಳೋ... ಜಗ್ಗು ಏಳೋ...'' ಅವನು ಬಾಯಿಗೆ ಬೆರಳನ್ನಿಟ್ಟು ಚೀಪುತ್ತಾ ಮಲಗಿದ್ದವನು, ಕೊಸರಿಕೊಂಡು, ಅಲ್ಲೇ ಮುದುರಿಕೊಂಡು ಮಲಗಿದ.

ಜಾನಕಿಯ ಕಡೆ ನೋಡಿ ಮುಗುಳ್ನಕ್ಕು ಮೆಟ್ಟಿಲುಗಳನ್ನೇರಿದಳು. ರೂಮಿನ ಬಾಗಿಲ ಬಳಿ ಬರುತ್ತಿದ್ದಂತೆಯೇ, ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ವಸ್ತುಗಳು ಅವಳನ್ನು ಸ್ವಾಗತಿಸಿದವು. ಬಾಗಿಲ ಬಳಿಯೇ ನಿಂತಳು ಒಂದುಗಳಿಗೆ ತಲೆ ತಿರುಗಿದಂತಾಯ್ತು. ಸಾವರಿಸಿಕೊಂಡಳು ''ತನ್ನದೇ ತಪ್ಪು ತಾನು ರೂಮಿನ ಬಾಗಿಲಿಗೆ ಬೀಗ ಹಾಕಿ ಹೋಗಬಹುದಾಗಿತ್ತು... ಈಗ ಆಂಟಿಗೆ ಗೊತ್ತಾದ್ರೇ, ಆಂಟಿ ಅವನನ್ನು ಹೊಡೆಯುತ್ತಾರೆ. ಅಷ್ಟೇ... ಎಂದುಕೊಂಡು, ಸೂಟ್‌ಕೇಸ್‌ನಿಂದ, ಕಿತ್ತಾಡಿ ಹೊರಗೆ ಬಿಸಾಡಿದ್ದ ಬಟ್ಟೆಗಳನ್ನು, ವಸ್ತುಗಳನ್ನು ತುಂಬಿಟ್ಟಳು.

''ನನ್ನ ಲಗೇಜುಗಳಲ್ಲಿ ಈ ಹುಡುಗ ಏನನ್ನು ಹುಡುಕ್ತಾನೆ ?'' ಆಶ್ಚರ್ಯದೊಂದಿಗೆ ನಗುವೂ ಬಂದಿತ್ತು. ಅಷ್ಟರಲ್ಲಿ ಜಾನಕಿ, ಸುಮತಿಗೆಂದು ಅಲ್ಲಿಗೇ ಕಾಫಿ ತಂದಳು ಇವಳಿಗೆ ಸಂಕೋಚವಾಗಿತ್ತು.

''ನೀವ್ಯಾಕೆ ತಂದ್ರಿ ಆಂಟಿ ? ನಾನೇ ಕೆಳಕ್ಕೆ ಬರುತ್ತಿದ್ದೆ...''

''ಇರಲಿ ಬಿಡಮ್ಮ... ಅಲ್ಲಿ ಜಗ್ಗು ಮಲಗಿದ್ನಲ್ಲ, ನೀನು ಬರುವುದಿಲ್ಲವೇನೋ ಅಂತ ಅಂದ್ಕೊಂಡೆ ರಾತ್ರಿಗೆ ಏನು ಅಡಿಗೆ ಮಾಡಲಿ ?''

''ನಿಮಗೆ ಏನಾಗುತ್ತೋ, ಅದೇ ನನಗೂ ಆಗುತ್ತೆ''

''ಹಾಗಲ್ಲ, ನಿನಗೆ ಏನು ತರಕಾರಿ ಸೇರುತ್ತೋ... ಅಂತ.''

''ನನಗೆ ಎಲ್ಲಾ ತರಹದ ತರಕಾರಿಯೂ ಸೇರುತ್ತೆ ಆಂಟೀ''

''ಈ ಅಭ್ಯಾಸ ತುಂಬಾ ಒಳ್ಳೆಯದು. ಅದೇ ನಮ್ಮ ಮನೇಲಿ ನೋಡು, ನಮ್ಮ ಸಂಕೂಗೆ ಎಷ್ಟೋ ತರಕಾರಿಗಳು ಸೇರುವುದಿಲ್ಲ, ಬೆಂಡೇಕಾಯಿ, ತೊಂಡೆಕಾಯಿ, ಚಪ್ಪರದವರೆಕಾಯಿ, ಬದನೇಕಾಯಿ, ಸೀಮೆಬದನೇಕಾಯಿ... ಇತ್ಯಾದಿ, ಇತ್ಯಾದಿ'' ಸುಮತಿ ಮುಗುಳ್ನಕ್ಕಳು.

''ಸಂಕೂದು ಈ ಕತೆ ಆದರೆ, ನಮ್ಮ ಜಗ್ಗೂಗ್ಗೋ, ಎಷ್ಟೋ ತರಕಾರಿಗಳು ಮೈಗಾಗುವುದಿಲ್ಲ. ಇರೋರು ಇಬ್ಬರಿಗೆ ಎರಡೆರಡು ತರಹದ ತರಕಾರಿ... ಅದಕ್ಕೇ ಕೇಳಿದೆ.''

''ಆಂಟಿ, ನನಗೂ ಏನಾದ್ರೂ ಕೆಲಸ ಹೇಳಿ. ನಾನು ಹೆಲ್ಪ್ ಮಾಡ್ತೀನಿ''

''ಪರವಾಗಿಲ್ಲ ಬಿಡಮ್ಮಾ... ನಿನಗ್ಯಾಕೆ ತೊಂದರೆ ?''

''ತೊಂದರೆ ಏನಿಲ್ಲ. ಎಲ್ಲಾ ನೀವೇ ಮಾಡಿಬಿಟ್ಟರೆ, ನಾನು ಸೋಮಾರಿಯಾಗಿ ಬಿಡ್ತೀನಿ ಅಷ್ಟೇ'' ಸುಮತಿ ನಕ್ಕಳು.

''ನೀನು ಹೀಗೆ ನಗುನಗ್ತಾ ಇದ್ದರೆ, ಮನೆ ತುಂಬಿದ ಹಾಗಿರುತ್ತೆ. ನನಗೆ ಅಷ್ಟೇ ಸಾಕು... ನನಗೆ ಸಹಾಯ ಬೇಕಾದಾಗ ನಾನೇ ಕೇಳ್ತೀನಿ. ಆಗ ಆಗುಲ್ಲ ಅನ್ನಬಾರದು'' ಜಾನಕಿಯೂ ನಕ್ಕಳು.

ಇಲ್ಲ ಆಂಟಿ... ಖಂಡಿತಾ ಸಹಾಯ ಮಾಡ್ತೀನಿ ಸುಮತಿ, ಕಾಫಿಯ ಬಟ್ಟಲನ್ನು ತೊಳೆದಿಡಲೆಂದು ಕೆಳಗಿಳಿದು ಬಂದಳು.

ಡೈನಿಂಗ್ ಟೇಬಲ್‌ನ ಬಳಿ ಕುರ್ಚಿಯಲ್ಲಿ ಕುಳಿತು, ಕೈಗೆ ಸಿಕ್ಕಿದ ಯಾವುದೋ ಒಂದು ಮ್ಯಾಗ್ಜೈನ್‌ನ್ನು ಕೈಯಲ್ಲಿ ಹಿಡಿದು ಪುಟಗಳನ್ನು ತಿರುವುತ್ತಿದ್ದಳು. ತನ್ನ ಹಿಂದೆ ಯಾರೋ ನಡೆಯು ಬರುತ್ತಿರುವಂತೆ ಸಪ್ಪಳವಾಯಿತು. ಮೆಲ್ಲನೆ ಪಕ್ಕಕ್ಕೆ ತಿರುಗಿ ನೋಡಿದಳು. ತನಗೆ ಅತಿ ಸಮೀಪದಲ್ಲಿ ಜಗ್ಗು ನಡೆದು ಬರುತ್ತಿದ್ದಾನೆ. ಇವಳ ಎದೆ ಬಡಿತ ನಿಂತಂತಾಯಿತು ಉಸಿರನ್ನು ಆಡುವುದು ಕಷ್ಟವೆನಿಸಿತು ಕುರ್ಚಿಯ ಕೈಗಳನ್ನು ಬಲವಾಗಿ ಹಿಡಿದುಕೊಂಡಳು.

ಮಲಗಿ ನಿದ್ರಿಸುತ್ತಿದ್ದನಲ್ಲ, ಯಾವಾಗ ಎದ್ದ ? ಹತ್ತಿರಕ್ಕೆ ಬಂದು ಏನು ಮಾಡಿ ಬಿಡುವನೋ ಎಂದು ಹೆದರಿ, ಬೆದರು ಕಣ್ಣುಗಳಿಂದ ಅವನನ್ನೇ ನೋಡುತ್ತಿದ್ದಳು ಅವನು ಇವಳನ್ನು ಗಮನಿಸದವನಂತೆ, ಇವಳನ್ನು ದಾಟಿ, ಅಡಿಗೆ ಮನೆಯ ಕಡೆ ನಡೆದ. ಉಸಿರಾಟ ಸರಾಗವಾಯಿತು.

''ಏನು ಬೇಕೋ ಜಗ್ಗು? ಹೊಟ್ಟೆ ಹಸೀತಿದೆಯಾ ? ತಡಿ ಊಟ ಕಲಿಸ್ತಿದೀನಿ. ತಿನ್ನಿಸ್ತೀನಿ'' ಮಗನನ್ನು ಅಕ್ಕರೆಯಿಂದ ಮಾತನಾಡಿಸುತ್ತಿದ್ದ ತಾಯಿಯನ್ನು ಕಂಡು, ಅವಳ ಮನ ಕಲಕಿತು.

ಕಲೆಸಿದ್ದ ಅನ್ನವನ್ನು ತುತ್ತು ಮಾಡಿ ಮಗನ ಬಾಯಿಗೆ ಇಡುತ್ತಿದ್ದುದನ್ನು ಕಂಡು ವ್ಯಥೆಯಾಗಿತ್ತು. ಚಿಕ್ಕಮಗುವಿನಂತೆ ಕುಳಿತು, ತಾಯಿಯ ಕೈಯಿಂದ ಉಣ್ಣಿಸಿಕೊಳ್ಳುತ್ತಿದಾನಲ್ಲ... ಮೊದಲಿನಿಂದಲೂ ಹೀಗೇ ಇದ್ದಾನ್ಯೇ... ಬೆಳವಣಿಗೆ ನೋಡಿದರೆ, ದೊಡ್ಡ ಯುವಕನಂತೆ, ಆದರೆ ಬುದ್ಧಿ ಮಾತ್ರ ಬೆಳೆದಿಲ್ಲ, ಚಿಕ್ಕ ಮಗುವಿನಂತೆ, ಏನೂ ಅರಿಯದವನು... ಪಾಪ... ಅಯ್ಯೋ ಅಂತೆನ್ನಿಸಿತ್ತು.

ಎಷ್ಟೇ ಬೇಸರವಾದರೂ, ಜಗ್ಗುವಿನ ಎಲ್ಲಾ ಕೆಲಸಗಳನ್ನು, ಜಾನಕಿಯೇ ಮಾಡುತ್ತಿದ್ದಳು ಇಪ್ಪತ್ತನಾಲ್ಕು ವರ್ಷದವನಾಗಿದ್ದರೂ, ಏಳೆಂಟು ವರ್ಷದ ಹುಡುಗನಂತೆ ವರ್ತಿಸುತ್ತಿದ್ದ

ಜೊತೆಗೆ ಸರಿಯಾಗಿ ಸ್ಪಷ್ಟವಾಗಿ ಮಾತಾಡಲಾರ. ಸರಿಯಾಗಿ ನೇರವಾಗಿ ಓಡಾಡಲಾರ. ಈ ವಿಕಲತೆಗಳಿದ್ದರೂ, ತಾಯಿ ಹೇಳಿದುದೆಲ್ಲಾ ಅರ್ಥವಾಗುತ್ತಿತ್ತು. ಕೆಲವೊಮ್ಮೆ ವಿಧೇಯನಂತೆ ವರ್ತಿಸಿದರೆ, ಕೆಲವೊಮ್ಮೆ ಕೆರಳಿ ಬಿಡುತ್ತಿದ್ದ. ವಿಪರೀತ ಹಠಮಾರಿಯಾಗಿ ಬಿಡುತ್ತಿದ್ದ. ಅಂಥ ಸಮಯದಲ್ಲಿ ಜಾನಕಿ ಹಿಂದು ಮುಂದು ನೋಡದೇ ಸದೆ ಬಡಿಯುತ್ತಿದ್ದಳು. ಸ್ವಲ್ಪಹೊತ್ತಿನ ನಂತರ, ತನ್ನನ್ನು ತಾನೇ ಹಳಿದುಕೊಳ್ಳುತ್ತಿದ್ದಳು. ಅಂತಹ ಸಮಯಗಳಲ್ಲಿ ಜಗ್ಗು ತೆವಳಿಕೊಂಡು ಕಷ್ಟಪಟ್ಟು ಮಹಡಿಯ ಮೆಟ್ಟಿಲುಗಳನ್ನು ಹತ್ತಿ ಹೋಗಿ, ಒಂದು ಮೂಲೆಯಲ್ಲಿ ಕೂತು ಬಿಡುತ್ತಿದ್ದ.

ಕೆಲವೇ ದಿನಗಳಲ್ಲಿ ಈ ವಿಷಯಗಳನ್ನು ಗಮನಿಸಿದ್ದಳು. ಆಂಟಿಯ ಬಗ್ಗೆ ಮರುಕ ಹುಟ್ಟುತ್ತಿತ್ತು. ಒಮ್ಮೆ ಪ್ರಶ್ನಿಸಿದಳು.

"ನಿಮಗೆ ಎಲ್ಲಾ ಗೊತ್ತಿದ್ದು ಜಗ್ಗೂನ ಯಾಕೆ ಹೊಡಿತೀರಿ ? ಆಂಟಿ ಅದು ತಪ್ಪಲ್ವಾ ?"

"ನನಗೂ ಗೊತ್ತು. ನಾನು ಮಾಡುವುದು ತಪ್ಪು ಅಂತ, ಹೊಡೆದೂ, ಹೊಡೆದೂ ನನ್ನ ಕೈ ನೋಯುತ್ತೆ. ಆದರೆ ಅವನು ಮಾತ್ರ ಒಂದಿಂಚೂ ಸುಧಾರಿಸಿಲ್ಲ, ನನಗೂ ಸಾಕಾಗಿ ಹೋಗಿದೆ. ನಮ್ಮ ಸಂಕೂ ಹೇಳ್ತಿದ್ದ ಮಾತುಗಳೇ ಸರಿ ಎನ್ನಿಸ್ತಿದೆ. ಇವನು ಎಲ್ಲಿದ್ನೋ ಅಲ್ಲೇ ಬಿಟ್ಟು ಬಿಟ್ಟು, ನಾನೂ ಅವನ ಜತೇಲಿ ಆಮೆರಿಕಾಕ್ಕೆ ಹೊರಟು ಹೋಗಿದ್ದಿದ್ರೆ ಚೆನ್ನಾಗಿತ್ತು." ಸುಮತಿ ಸುಮ್ಮನಾಗಿದ್ದಳು. ಜಾನಕಿಯ ಕಣ್ಣುಗಳು ಹನಿಗೂಡಿದ್ದವು.

☆ ☆ ☆

ಕೆಲವೇ ವಾರಗಳಲ್ಲಿ ಸುಮತಿ ಆ ಮನೆಯಲ್ಲಿ ಒಬ್ಬಳಾಗಿ ಬಿಟ್ಟಳು. ಈಗ ಅವಳಿಗೆ ಜಗ್ಗುವಿನ ಬಗ್ಗೆ ಮುಜುಗರವಾಗುತ್ತಿರಲಿಲ್ಲ. ಅವನ ನಡಿಗೆ, ವಿಚಿತ್ರವೆನಿಸುತ್ತಿರಲಿಲ್ಲ. ಅವನ ನಗು ಮರುಳು ನಗೆ ಅನಿಸುತ್ತಿರಲಿಲ್ಲ. ಅಷ್ಟು ಅಭ್ಯಾಸವಾಗಿಬಿಟ್ಟಿತು. ಅವನನ್ನು ಗಮನಿಸುತ್ತಾ ಗಮನಿಸುತ್ತಾ, ಅವನ ಸ್ನೇಹಿತೆಯಾಗಿ ಬಿಟ್ಟಿದ್ದಳು.

"ಏನೋ ಜಗ್ಗು ?" ಎಂದು ಅವಳು ಆತ್ಮೀಯವಾಗಿ ಮಾತನಾಡಿಸಿದರೆ ಅವನು ಹಲ್ಲು ಕಿರಿಯುತ್ತಿದ್ದ. ಅವಳಿಗೆ ಏನನ್ನೋ ಹೇಳಲು ಪ್ರಯತ್ನಿಸುತ್ತಿದ್ದ.

"ನೀನು ಬಂದು ಇಲ್ಲಿ ಇರತೊಡಗಿದ ಮೇಲೆ, ನಮ್ಮ ಜಗ್ಗು ತುಂಬಾ ಸುಧಾರಿಸಿ ಬಿಟ್ಟಿದಾನೆ..." ಅವನ ಮಂಕುತನ ಎಷ್ಟೋ ಕಡಿಮೆ ಆಗಿದೆ." ಎಂದು ಜಾನಕಿ ಹೆಮ್ಮೆಯಿಂದ ಹೇಳಿಕೊಂಡಾಗ, ಸುಮತಿ ತನ್ನಲ್ಲೇ ಏನನ್ನೋ ಯೋಚಿಸಿದಳು.

ಇರಬಹುದು, ಮನೆಯಲ್ಲಿ ತಾಯಿ ಮಗ ಇಬ್ಬರೇ, ಇವರುಗಳೂ ಎಲ್ಲಿಗೂ ಹೋಗುವಂತಿಲ್ಲ. ಇವರ ಮನೆಗೂ ಯಾರೂ ಬರುತ್ತಿದ್ದಂತೆ ಅನ್ನಿಸುವುದಿಲ್ಲ. ಮನೇಲೇ ಸದಾ ಕಾಲ ಕಳೆಯುವುದು, ಅದೂ ಬರೀ ಊಟ ನಿದ್ದೆ, ಅಷ್ಟೇ ಆಯಿತು. ಮನೇಲಿ ಫೋನು ಇದೆ,

ಆದರೆ ರಿಂಗಾಗುವುದೇ ಕಡಿಮೆ, ಟೆಲಿವಿಷನ್ ಇದೆ, ಆನ್ ಆಗಿರುವುದೇ ಅಪರೂಪ, ನಾಲ್ಕಾರು ಮ್ಯಾಗ್ಸೈನ್ಸ್‌ಗಳು ಬರುತ್ತವೆ, ಓದೋರು ಯಾರೂ ಇಲ್ಲ... ನಾನು ಬಂದ ಮೇಲೇ, ಇವುಗಳ ಉಪಯೋಗ ಅಷ್ಟಿಷ್ಟು ಇದರಿಂದ ಮನೆಯ ವಾತಾವರಣವೂ ಅಷ್ಟಿಷ್ಟು ಬದಲಾಗಿದೆ. ಇವೆಲ್ಲಾ ಜಗ್ಗು ಮೇಲೆ ಅಲ್ಪಸ್ವಲ್ಪ ಪರಿಣಾಮವನ್ನು ಬೀರಿರಬಹುದು. ಆ ಅನಿಸಿಕೆ ಅವಳಿಗೆ ಮುದವನ್ನು ನೀಡಿತ್ತು.

ತಾನು ಇಲ್ಲಿ ಇರುವಷ್ಟು ದಿನವೂ, ತಾನು ಜಗ್ಗುವಿನ ಸುಧಾರಣೆ ಬಗ್ಗೆ ಶ್ರಮವಹಿಸಬೇಕು. ಅವನ ಚಟುವಟಿಕೆಗಳಲ್ಲಿ ಬದಲಾವಣೆ ಬರುವಂತೆ ಪ್ರಯತ್ನಿಸಬೇಕು. ಆಂಟಿ, ತನ್ನನ್ನು ಮಗಳಂತೆ ಆದರಿಸುತ್ತಾಳೆ. ಎಲ್ಲಾ ಸೌಕರ್ಯಗಳಿರುವ ರೂಮನ್ನು ಕಡಿಮೆ ಬಾಡಿಗೆಗೆ ಕೊಟ್ಟಿದ್ದಾಳೆ. ಊಟ ತಿಂಡಿಯಂತೂ, ತನ್ನ ಸ್ವಂತ ಮನೆಗಿಂತ ಹೆಚ್ಚು ಅಂತ ಹೇಳಬಹುದು.

ಅದೇ ಮಾತನ್ನು ಜಾನಕಿಯೊಡನೆ ಹೇಳಿದಾಗ, ಅವಳು ನಸುಕೋಪದಿಂದ ಗದರಿದ್ದಳು.

''ಸಾಕು ಸುಮ್ಮನಿರು ಸುಮತಿ. ನಾನು ಅಂಥಾದ್ದೇನು ಹೆಚ್ಚುಗಾರಿಕೆ ತೋರಿಸಿದ್ದೀನಿ ?''

''ಹಾಗಲ್ಲ ಆಂಟೀ...''

''ನೀನಿನ್ನು ನನ್ನನ್ನ ಅರ್ಥಮಾಡಿಕೊಂಡಿಲ್ಲ ಅಂತಾಯ್ತು. ನನಗೆ, ನಿನ್ನಂತಹ ಮಗಳ ಅಗತ್ಯವಿತ್ತು. ನನಗೆ ಅದೇ ಬೇಕಾದಷ್ಟು, ನಮ್ಮಿಬ್ಬರ ಬಾಂಧವ್ಯವನ್ನು, ಆತ್ಮೀಯತೆಯನ್ನೂ, ಹಣದಲ್ಲಿ ಅಳೆಯಬೇಡ. ಆಗ ಅದರ ನಿಜವಾದ ಅರ್ಥವೇ ಮರೆಯಾಗಿ ಹೋಗುತ್ತೆ... ನನಗೆ ಹಣದ ಕೊರತೆ ಏನೂ ಇಲ್ಲ, ನನ್ನ ಪತಿ ಸಂಪಾದಿಸಿ, ನಮಗೋಸ್ಕರ ಇಟ್ಟಿರುವುದೇ ಬೇಕಾದಷ್ಟಿದೆ. ಬೇಡಾಂತಂದ್ರೂ ನಮ್ಮ ಸಂಕು, ಆಗ ಈಗ ಸಾಕಷ್ಟು ಡಾಲರ್ಸ್ ಕಳಿಸ್ತಾನೆ. ಇದು ನಮ್ಮ ಸ್ವಂತ ಮನೆ. ಬಾಡಿಗೆಯ ಆಸೆಗಾಗಿ, ನಾನು ಪೇಯಿಂಗ್ ಗೆಸ್ಟ್‌ನ್ನು ಇಟ್ಟುಕೊಂಡಿಲ್ಲ, ನನಗೂ ಒಬ್ಬರು ನನ್ನ ಜೊತೆಗೆ ಬೇಕು. ಮನೆಯಲ್ಲಿ ನಾನಲ್ಲದೇ, ಇನ್ನು ಒಬ್ಬರು ಮನೆಯಲ್ಲಿ ಓಡಾಡಿದರೆ, ನನ್ನ ಮಗನಿಗೆ ಅದೇ ಮನೋರಂಜನೆ. ಇಲ್ಲದಿದ್ದರೆ ಅವನ ಜೀವನದಲ್ಲಿ ಇನ್ನೇನಿದೆ ? ನೀನೇ ನೋಡ್ತಾ ಇದೀಯಲ್ಲ.''

''ಮುಂಚೆ ಆದರೆ ನಮ್ಮ ಹತ್ತಿರ ಕಾರು ಇತ್ತು. ಡ್ರೈವರ್ರು ಇದ್ದ. ಈಗ ನಾನು ಒಂಟಿ ಹೆಂಗಸು. ಜಗ್ಗು ಆಟಕ್ಕುಂಟು ಲೆಖ್ಖಕ್ಕಿಲ್ಲ ಅನ್ನೋ ತರಹ. ಇಪ್ಪತ್ನಾಲ್ಕು ವರ್ಷ ತುಂಬಿದೆ. ಆದರೆ ನನಗೆ ಯಾವ ರೀತಿಯಿಂದಲೂ ಉಪಯೋಗವಿಲ್ಲ, ನನ್ನ ಜೀವನದಲ್ಲಿ, ಜೀವಮಾನವೆಲ್ಲಾ ನಾನು ಇವನನ್ನು ನೋಡಿಕೊಳ್ಳಬೇಕೇ ಹೊರತು, ನನ್ನನ್ನು ನೋಡಿಕೊಳ್ಳುವ ಮಟ್ಟಕ್ಕೆ ಇವನಂತೂ ಬರುವುದಿಲ್ಲ.''

''ಇನ್ನೂ ನನ್ನ ದೊಡ್ಡ ಮಗ, ಸಂಕೂ, ಅವನು ಅಮೆರಿಕಾದಲ್ಲೇ ಸೆಟ್ಲ್ ಆದರೂ ನನಗೆ ಆಶ್ಚರ್ಯವಿಲ್ಲ, ಅಲ್ಲದೇ ಅದು ಅವನ ಸ್ವಂತ ಜೀವನ. ಅವನಿಗೆ ಹೇಗೆ ಬೇಕೋ ಹಾಗೆ ಜೀವಿಸುವ ಹಕ್ಕು ಅವನಿಗಿದೆ. ಅವನೂ ತಾನಾಗಿಯೇ ಏನನ್ನು ಹೇಳುವುದಿಲ್ಲ, ನಾನೂ ಕೇಳುವುದಿಲ್ಲ.''

ಸುಮತಿಗೆ ಕೆಡುಕೆನಿಸಿತು. ತಾನು ಇದುವರೆಗೂ ನೋಡೇ ಇರದ ಸಂಕೂ ಬಗ್ಗೆ ತಿರಸ್ಕಾರ ಮೂಡಿತು. ಇವನೆಂತಹ ಮಗ ? ತಾಯಿಗೆ ತನ್ನ ಅವಶ್ಯಕತೆ ಇದೆ ಎಂದು ತಿಳಿದಿದ್ದೂ ತನ್ನ ಸುಖವೇ ಹೆಚ್ಚು ಎನ್ನುವಂತೆ ಪರದೇಶಕ್ಕೆ ಹಾರಿ ಹೋಗಿ ಬಿಟ್ಟಿದ್ದಾನಲ್ಲ... ಈ ಮನೆಗೆ ಹಿರಿಯ ಮಗನಾಗಿದ್ದೂ ಅವನ ಕರ್ತವ್ಯ ಅವನಿಗೆ ತಿಳಿಯದೇ ? ತಿಳುವಳಿಕೆ ಸಾಲದ ತಮ್ಮನ ಬಗ್ಗೆ ಅವನಿಗೆ ಏನೂ ಅನ್ನಿಸದಿದ್ದರೆ, ಅವನೆಂತಹ ಅಣ್ಣ ?

ಜಾನಕಿಯ ಅಳಲು ಸುಮತಿಗೆ ಅರ್ಥವಾಗಿತ್ತು. ಮಗಳಂತೆ ಎಂಬ ಆತ್ಮೀಯತೆಯಿಂದ ತನ್ನೊಡನೆ ಮನೆಯ ವಿಷಯಗಳನ್ನೆಲ್ಲ ಹೇಳಿಕೊಳ್ಳುತ್ತಾಳೆ. ಈ ಸಂಕೂ ಬರೀ ಸ್ವಾರ್ಥದ ಮೊಟ್ಟೆ...ಸಂಕು... ಸಂಕು... ಇದೆಂತಹ ಹೆಸರು ? ಸಂಕುಚಿತ ಬುದ್ಧಿಗೆ ತಕ್ಕ ಹೆಸರು...!

ಅವಳ ಮನಸ್ಸನ್ನು ಓದಿದವಳಂತೆ ಜಾನಕಿ ನುಡಿದಿದ್ದಳು.

''ದೊಡ್ಡೋನಾದ ಮೇಲೆ, ಸಂಕು ಅಂತ ಕರೆದ್ರೆ ರೇಗಿ ಬೀಳೋನು. ನಾನೇನು ಮಾಡಲಿ ಹೇಳು ? ಅದೇ ಅಭ್ಯಾಸವಾಗಿ ಹೋಗಿದೆ. ಅವನ ಹೆಸರು ಸಂಕೇಶ್ವರ ಅಂತ. ಅದು ನಮ್ಮ ಮನೆ ದೇವರ ಹೆಸರು. ಸ್ಕೂಲಿಗೆ ಸೇರಿಸುವಾಗ, ಹೆಸರು ನವೀನವಾಗಿರಲಿ ಅಂತ, ಸಂಕೇತ್ ಅಂತ ಹೆಸರನ್ನು ಬರೆಸಿದೆವು. ಮನೇಲಿ ಮುದ್ದಿಗೆ ಸಂಕು ಅಂತ ಕರೆದೆವು.''

''ಈ ದಡ್ಡನಿಗೆ ಜಗನ್ನಾಥ ಅಂತ ಹೆಸರಿಟ್ಟೆವು. ಅದು ನಮ್ಮ ಮಾವನವರ ಹೆಸರು. ಇವನಿಗೂ ತಿಳುವಳಿಕೆ ಇದ್ದಿದ್ರೆ, ಇವನೂ ತನ್ನ ಹೆಸರನ್ನು ಜಗತ್ ಅಂತ ಬದಲಾಯಿಸಿ ಕೊಳ್ತಾ ಇದ್ದನೋ ಏನೋ... ಆದರೂ ಜಗ್ಗೂ ಆಗಿಯೇ ಉಳಿದುಬಿಟ್ಟ'' ಜಾನಕಿ ವಿಷಾದದಿಂದ ನಕ್ಕಾಗ, ಸುಮತಿಗೆ ನಗಬೇಕೆನಿಸಿರಲಿಲ್ಲ. ಅವಳು ಸಂಕು ಬಗ್ಗೆ ಚಿಂತಿಸುತ್ತಿದ್ದಳು.

''ಈ ಸಂಕೇತ ಬರೀ ಸ್ವಾರ್ಥಿ. ತಾನಾಯಿತು, ತನ್ನ ಸುಖವಾಯಿತು, ತಾಯಿಯ ಬಗ್ಗೆಯಾಗಲೀ, ತಮ್ಮನ ಬಗ್ಗೆಯಾಗಲೀ, ಯಾವ ಜವಾಬ್ದಾರಿಯಾಗಲೀ, ಕರ್ತವ್ಯವಾಗಲೀ, ಗಮನದಲ್ಲಿಲ್ಲ'' ಎಂದುಕೊಳ್ಳುತ್ತಾ ತಾನು ನೋಡೇ ಇರದ ಸಂಕೇತನ ಬಗ್ಗೆ ದುರಭಿಪ್ರಾಯಗಳನ್ನು ಬೆಳೆಸಿಕೊಂಡಳು. ಜಗ್ಗುವಿನ ಮೇಲಿನ ಅನುಕಂಪ ಹೆಚ್ಚಿತು.

ದಿನದಿನಕ್ಕೆ ಜಗ್ಗುವಿನೊಡನೆ ಹೆಚ್ಚು ಸ್ನೇಹವನ್ನು ಬೆಳೆಸಿಕೊಂಡಳು. ತನಗೆ ಬಿಡುವಿದ್ದಾಗ, ಅವನೊಂದಿಗೆ ಕುಳಿತು, ಅವನಿಗೆ ಹೊಸ ಹೊಸ ಮಾತುಗಳನ್ನು ಕಲಿಸಿಕೊಡಲು ಪ್ರಯತ್ನಿಸುತ್ತಿದ್ದಳು. ಬಣ್ಣ ಬಣ್ಣದ ಚಿತ್ರಗಳಿರುವ ಪುಸ್ತಕಗಳನ್ನು ತಂದು, ಚಿತ್ರಗಳನ್ನು ತೋರಿಸಿ, ಅವುಗಳ ಹೆಸರುಗಳನ್ನು ತಿಳಿಸಿಕೊಡುತ್ತಿದ್ದಳು. ಅವನಿಗೆ ಎಷ್ಟರ ಮಟ್ಟಿಗೆ ಅರ್ಥವಾಗುತ್ತಿತ್ತೋ ಅವನಿಗೇ ಗೊತ್ತು. ಆದರೆ ವಿಧೇಯ ವಿದ್ಯಾರ್ಥಿಯಂತೆ, ಸುಮತಿ ಹೇಳಿದುದನ್ನೆಲ್ಲಾ ಜಾಣನಂತೆ ಆಲಿಸುತ್ತಿದ್ದ.

ಅವನಿಗೆ ಇಷ್ಟವಾಗುವಂತಹ, ಟಿ.ವಿ.ಯಲ್ಲಿ ಬರುವ ಕಾರ್ಯಕ್ರಮವನ್ನು ಅವನಿಗಾಗಿ ಹಾಕಿ, ಅವನಿಗೆ ಅದೂ ಇದು ಅಂತ ತೋರಿಸಿ ಹೇಳುತ್ತಿದ್ದಳು. ಅವಳುನಕ್ಕಾಗ ಅವನೂ ನಗುತ್ತಿದ್ದ. ಅವಳು ಚಪ್ಪಾಳೆ ತಟ್ಟಿದರೆ, ಅವನೂ ಚಪ್ಪಾಳೆ ತಟ್ಟುತ್ತಿದ್ದ. ಅಪ್ಪಿತಪ್ಪಿ ಗದರಿದರೆ, ಪೆಚ್ಚಾಗಿ ಬಿಡುತ್ತಿದ್ದ.

ಒಮ್ಮೊಮ್ಮೆ, ಇವನು ಜೀವಮಾನವನ್ನೆಲ್ಲಾ ಹೀಗೇ ಕಳೆಯಬೇಕೇ ? ಆಂಟಿ ಯಾಕೆ, ಇವನನ್ನು ಯಾವುದಾದರೂ 'ಮೆಂಟಲ್ ಹೋಂ'ಗೆ ಸೇರಿಸಬಾರದು, ಅಲ್ಲಿ ಇವನಂತಹ ಮಕ್ಕಳು ಅನೇಕರಿರುತ್ತಾರೆ, ಅಂತಹವರ ಮಾನಸಿಕ ವಿಕಾಸಕ್ಕೆ ನೆರವಾಗುವಂತಹ ತರಬೇತಿಯನ್ನು ಪಡೆದ ಶಿಕ್ಷಕರೇ ಇರುತ್ತಾರೆ ; ಸಿಬ್ಬಂದಿಗಳಿರುತ್ತಾರೆ. ಅವರುಗಳು ಪ್ರತಿಯೊಬ್ಬನಿಗೂ ಪ್ರತ್ಯೇಕವಾಗಿ ಗಮನ ಕೊಡುತ್ತಾರೆ. ಅದರಿಂದ ಬೇಗ ಬೇಗ ಸುಧಾರಿಸಬಹುದು. ಈ ವಾತಾವರಣವೇ ಬೇರೆ, ಆ ವಾತಾವರಣವೇ ಬೇರೆ ಎಂದೆನಿಸುತಿತ್ತು.

ಇದೇ ಮಾತನ್ನು ಜಾನಕಿಗೆ ಒಮ್ಮೆ ಹೇಳಿದಾಗ, ಅವಳು ಅಡ್ಡಡ್ಡ ತಲೆಯಾಡಿಸಿದ್ದಳು. ''ನಾವು ಮಾಡದೇ ಬಿಟ್ಟಿರುವುದು ಯಾವುದೂ ಇಲ್ಲಮ್ಮಾ, ನಮ್ಮ ಯಜಮಾನರು ಬದುಕಿದ್ದಾಗ, ನಾನು ಬೇಡ ಬೇಡಾಂತ ಅತ್ತರೂ, ಇವನನ್ನು ಅಂಥದೇ ಒಂದು 'ಹೋಂ'ಗೆ ಸೇರಿಸಿದ್ದರು. ಸುಮ್ಮನೇ ದುಡ್ಡು ದಂಡ ಅಷ್ಟೇ. ಇವನಲ್ಲಿ ಯಾವ ಸುಧಾರಣೆಯೂ ಕಂಡು ಬರಲಿಲ್ಲ. ಎಷ್ಟೆಷ್ಟೋ ಡಾಕ್ಟರುಗಳಿಗೆ ತೋರಿಸಿದ್ದಾಯ್ತು ; ಯಾರು ಏನು ಹೇಳಿದರೆ ಅದನ್ನು ಮಾಡಿದ್ದಾಯ್ತು... ಆದರೆ ಇವನು ಮಾತ್ರ ಹೀಗೆ ಉಳಿದು ಬಿಟ್ಟ'' ನಿಟ್ಟುಸಿರನ್ನು ಬಿಟ್ಟಳು.

''ಆದರೂ ನೀವು ಪ್ರಯತ್ನವನ್ನು ಮುಂದುವರೆಸಬೇಕಾಗಿತ್ತು ಆಂಟಿ. ಒಮ್ಮೊಮ್ಮೆ ಪವಾಡ ನಡೆದು ಬಿಡುತ್ತೆ. ಸ್ವಲ್ಪವಾದರೂ ಬದಲಾಗುತ್ತಿದ್ದನೋ ಏನೋ.''

''ಇವನಿಗೆ ಗುಣಕಂಡು, ವಿದ್ಯಾವಂತನಾಗಿ, ಕೆಲಸಕ್ಕೆ ಸೇರಿಕೊಂಡು, ಸಂಪಾದನೆ ಮಾಡಿ, ಯಾವ ಸಂಸಾರವನ್ನು ಸಾಗಿಸಬೇಕಾಗಿದೆ ? ಇವನು ನನ್ನನ್ನು ನೋಡಿಕೊಳ್ಳುವ ಮಾತಂತೂ ಸುಳ್ಳು. ತನ್ನನ್ನು ತಾನೇ ನೋಡಿಕೊಳ್ಳುವ ಶಕ್ತಿಯೂ ಇವನಲ್ಲಿ ಇಲ್ಲ. ನನಗೆ ಯಾವ ನಂಬಿಕೆಯೂ ಇಲ್ಲ. ನಾನು ಬದುಕಿರುವವರೆಗೂ ಇವನನ್ನು ನೋಡಿಕೊಳ್ತೀನಿ ಮುಂದೆ ಇವನ ಹಣೇಬರಹ ಇದ್ದಂತಾಗುತ್ತದೆ. ನಾನು ನನ್ನ ಮನಸ್ಸನ್ನು ಎಂದೋ ಗಟ್ಟಿ ಮಾಡಿಕೊಂಡು ಬಿಟ್ಟಿದೀನಿ. ಈಗ ಈ ಮನೇಲಿ ತನ್ನ ಪಾಡಿಗೆ ತಾನು ಓಡಾಡಿ ಕೊಂಡಿದಾನೆ. ಅಷ್ಟೇ ಸಾಕು. ನಮ್ಮ ಸಂಕುವಿನ ಭವಿಷ್ಯಕ್ಕೋಸ್ಕರ, ಅವನಿಗೆ ಸಹನೆಯಾಗುವುದಿಲ್ಲವೆಂದು, ಎಷ್ಟೋ ವರ್ಷಗಳು ಇವನನ್ನು ಮನೆಯಿಂದ ಹೊರಗೇ ಇಟ್ಟಿದ್ದಾಗಿತ್ತು. ಈಗ ಅವನು ಮನೆಯಿಂದ ಹೊರಗೆ ವಿದೇಶದಲ್ಲಿದಾನೆ, ಇವನು ಮನೆಯಲ್ಲಿದಾನೆ. ಒಟ್ಟಿನಲ್ಲಿ ಇಬ್ಬರು ಗಂಡು ಮಕ್ಕಳಿದರೂ, ನಾನು ಮಾತ್ರ ಒಂಟಿ.'' ಜಾನಕಿ ನಿಟ್ಟುಸಿರನ್ನು ಬಿಟ್ಟಳು.

ಆ ಮಗನ ವಿರೋಧವನ್ನು ಕಟ್ಟಿಕೊಳ್ಳಲು ಆಗದೆ, ಈ ಮಗನನ್ನು ಮೂಲೆ ಗುಂಪು ಮಾಡಿ ಬಿಟ್ಟಿದ್ದಾಳೆ ಈ ತಾಯಿ. ತಾಯಿಯ ಕರ್ತವ್ಯ ಎಂದರೆ ಇದೇನಾ ? ಈಕೆ ಇವನಿಗೂ ತಾಯಿ, ಅವನಿಗೂ ತಾಯಿ. ಆದರೆ ಧೋರಣೆ ಮಾತ್ರ ಬೇರೆ ಬೇರೆ. ಅವನೋ ಎಲ್ಲಾ ಕರ್ತವ್ಯವನ್ನೂ ಮರೆತು, ಅಲ್ಲೆಲ್ಲೋ ಹಾಯಾಗಿದಾನೆ. ಇವನೋ ಪ್ರಪಂಚದ ಅರಿವೇ ಇಲ್ಲದೇ ಹಾಯಾಗಿದಾನೆ, ಅವನ ಸುಖದಲ್ಲಿ ಬರೀ ಸ್ವಾರ್ಥತೆ, ಇವನ ಸುಖದಲ್ಲಿ ಸತ್ವವೇ ಇಲ್ಲ. ಒಟ್ಟಿನಲ್ಲಿ

ಇಬ್ಬರೂ ತಾಯಿಗೆ ಸಹಾಯಕರಲ್ಲ. ಇದರಲ್ಲಿ ತಪ್ಪು ಯಾರದು ? ಈ ತಾಯಿಯದೇ ? ಅಥವಾ ಈ ಮಕ್ಕಳದೇ ? ಸುಮತಿ ಚಿಂತಿಸಿದ್ದಳು.

''ನೀನು ಯಾವ ಜನ್ಮದಲ್ಲಿ ನನಗೆ ಮಗಳಾಗಿದ್ದೆಯೋ ? ಅಥವಾ ಈ ಜಗ್ಗೂಗೆ ತಾಯಿಯಾಗಿದ್ದೆಯೋ ? ನಮ್ಮಿಬ್ಬರಿಗೋಸ್ಕರ, ನಿನ್ನ ಮನಸ್ಸನ್ನು ಕೆಡಿಸಿಕೊಳ್ಳುತ್ತಿದೀಯ ನೀನು ಇಲ್ಲಿ ಇರುವುದರಿಂದ ಇಷ್ಟರ ಮಟ್ಟಿಗೆ, ಈ ಮನೆಗೆ ಒಂದು ಕಳೆ ಬಂದಿದೆ ಇಲ್ಲದಿದ್ದರೆ, ಈ ಮನೇಲಿ ಯಾರಾದರೂ ಇದಾರೋ ಇಲ್ಲವೋ ಎನ್ನುವಷ್ಟು, ಯಾವ ಚಟುವಟಿಕೆಯೂ ಇರಲೇ ಇಲ್ಲ. ಭೂತ ಹೊಕ್ಕ ಮನೆಯಂತೆ ಮನೆಯಲ್ಲಿ ಸೊಗಸೇ ಇರಲಿಲ್ಲ.'' ಜಾನಕಿ ಭಾವುಕತೆಯಿಂದ ನುಡಿದು, ಸುಮತಿಯನ್ನು ಮೆಚ್ಚುಗೆಯಿಂದ ಹೊಗಳಿದಳು.

☆ ☆ ☆

ಸಂಕ್ರಾಂತಿ ಹಬ್ಬದ ರಜದೊಂದಿಗೆ, ಇನ್ನು ಒಂದೆರಡು ದಿನಗಳ ರಜವನ್ನು ಹಾಕಿಕೊಂಡು, ಸುಮತಿ ಭದ್ರಾವತಿಗೆ ಹೊರಟಿದ್ದಳು ಜಾನಕಿ ಪೆಚ್ಚಾಗಿದ್ದಳು.

''ನಾನು ಹೀಗೆ ಹೇಳ್ತೀನಿ ಅಂತ ತಪ್ಪು ತಿಳಕೋಬೇಡ ಸುಮತೀ, ನಾವುಗಳು ಹಬ್ಬ ಹರಿದಿನ ಅಂತ ಸಂಭ್ರಮ ಪಟ್ಟು, ಎಷ್ಟೋ ವರ್ಷಗಳಾಯಿತು. ನೀನು ಇಲ್ಲೇ ಇರೋದಾದ್ರೆ, ನಾನೂ ಹಬ್ಬ ಮಾಡ್ತೀನಿ''

ಸುಮತಿ ಕಸಿವಿಸಿಕೊಂಡಳು ''ಆಂಟಿ ಹೇಳುತ್ತಿರುವುದು ಸರಿಯೇ, ಆದರೂ ತಾನು ಬರುತ್ತೇನೆಂದು ತನ್ನ ಮನೆಯವರಿಗೆ ತಿಳಿಸಿಬಿಟ್ಟಿದ್ದಳು. ಅದೇ ಮಾತನ್ನು ಆಡಿದಳು'' ನಾನು ಹಬ್ಬಕ್ಕೆ ಬರ್ತೀನಿ ಅಂತ ಈ ಮುಂಚೇನೇ ಹೇಳಿ ಬಿಟ್ಟಿದ್ದೆ, ಎರಡು ಮೂರು ದಿನ ಅಷ್ಟೇ, ತಕ್ಷಣವೇ ವಾಪಸ್ಸು ಬಂದುಬಿಡ್ತೀನಿ'' ಜಾನಕಿ ಮರು ನುಡಿಯಲಿಲ್ಲ, ಆದರೂ ಅವಳ ಮನದ ಉತ್ಸಾಹ ಕಡಿಮೆ ಆಗಿತ್ತು.

ಅವಳು ಹೊರಟು ನಿಂತಾಗ, ಬಾಗಿಲ ತನಕ, ಜಗ್ಗು ಅವಳ ಹಿಂದೆ ಹಿಂದೆ ನಡೆದು ಬಂದಿದ್ದ. ಸುಮತಿ ಅವನ ತಲೆಯ ಮೇಲೆ ಕೈಯಾಡಿಸಿದಳು.

''ಒಂದೆರಡು ದಿನ ಅಷ್ಟೇ... ಬೇಗ ಬಂದು ಬಿಡ್ತೀನಿ. ಬರುವಾಗ ನಿನಗೆ ತುಂಬಾ ತಿಂಡಿ ತರ್ತೀನಿ'' ಅವನು ಹಲ್ಲುಗಳನ್ನು ತೋರಿಸಿ ನಕ್ಕು 'ಟಾಟಾ' ಮಾಡಿದ. ಅವಳು ಆಟೋ ಸ್ಟ್ಯಾಂಡಿಗೆ ಬಂದಳು. ಬಸ್ಸನ್ನು ಹತ್ತಿ ಕುಳಿತರೂ, ಏನೋ ಅನಿಸಿಕೆಗಳು.

''ಯಾವ ಜನ್ಮದ ನಂಟೋ ! ತಾನ್ಯಾಕೆ ಇಲ್ಲಿ ಬಂದು, ಇವರುಗಳಿಗೆ ಇಷ್ಟು ಬೇಕಾದವಳಾಗಿ ಬಿಟ್ಟೆನೋ ? ಭದ್ರಾವತಿಯಿಂದ ಮೊದಲ ಬಾರಿಗೆ ಹೊರಟಾಗ, ಮನೆಯವರನ್ನೆಲ್ಲಾ ಬಿಟ್ಟು ಹಾಸ್ಟೆಲ್ಲಿನಲ್ಲಿರಬೇಕಲ್ಲ, ಅಲ್ಲಿ ಹೇಗೋ ಏನೋ ಎಂದು ದಿಗಿಲಾದದ್ದು ನಿಜ, ಆದರೆ ವ್ಯಾಸಂಗದ ಅಮಲಿನಲ್ಲಿ ಎಲ್ಲಾದಕ್ಕೂ ಹೊಂದಿಕೊಂಡಿದ್ದಳು. ನಂತರ, ಬೆಂಗಳೂರಿನಂತಹ

ದೊಡ್ಡ ಊರಿನಲ್ಲಿ ಒಂಟಿಯಾಗಿ ಎಲ್ಲಿರುವುದಪ್ಪಾ ಅಂತ ಚಿಂತಿಸಿದರೂ, ಸುಚಿತ್ರ ಸಹಾಯಕ್ಕೆ ಒದಗಿದ್ದಳು.

ಆದರೆ ಆಗ ಅಲ್ಲಿ ಸುಚಿತ್ರಳ ಮನೆಯಲ್ಲಿ ಇದ್ದುದಕ್ಕೂ, ಈಗ ಇಲ್ಲಿ ಪೇಯಿಂಗ್ ಗೆಸ್ಟ್ ಆಗಿರುವುದಕ್ಕೂ ಸಾಕಷ್ಟು ವ್ಯತ್ಯಾಸಗಳಿದ್ದವು. ಅದು ಗೆಳತಿಯ ಮನೆ, ಗೆಳತಿಯ ಜೊತೆಯಲ್ಲಿ ಸಲುಗೆ ಇದ್ದರೂ, ಏನೋ ಹಿಂಜರಿಕೆ ಇತ್ತು. ಸುಧೀರ, ತಮ್ಮನಂತಿದ್ದರೂ, ಅವನೊಡನೆ ಮಾತುಕತೆ ಹೆಚ್ಚು ಇರಲಿಲ್ಲ. ಅವಳ ತಾಯಿ ತಂದೆಯೊಂದಿಗೆ ಎಷ್ಟೋ ಅಷ್ಟೇ ಮಾತು ಈಗ ಸುಚಿತ್ರಳಿಗೆ ಮದುವೆ ಗೊತ್ತಾದ ಮೇಲೆ, ಅವಳು ಸ್ವಲ್ಪ ಬದಲಾಗಿದಾಳೇನೋ ಅಂತೆನಿಸುತ್ತಿತ್ತು. ತನ್ನದೇ ಆದ ಬೇರೆ ಲೋಕದಲ್ಲಿ ವಿಹರಿಸುತ್ತಿದಾಳೆ, ಸ್ನೇಹಿತೆಯ ಮೇಲೆ ಗಮನ ಕಡಿಮೆಯಾಗುತ್ತಿದೆ ಎಂದೆನಿಸುತ್ತಿತ್ತು. ಈಚೀಚೆಗೆ ತಾನು ಅಲ್ಲಿ ಪರಕೀಯಳು ಎಂಬ ಭಾವನೆ ಆಗಾಗ್ಗೆ ಮೂಡುತ್ತಿತ್ತು.

ಈಗ ಇಲ್ಲಾದರೋ, ಜಾನಕಿಯ ಮಾತುಕತೆಗಳು, ಆದರಿಸುತ್ತಿದ್ದ ರೀತಿ, ಇವಳನ್ನು ಈ ಮನೆಯಲ್ಲಿ ಒಬ್ಬಳನ್ನಾಗಿ ಮಾಡಿ ಬಿಟ್ಟಿತ್ತು. ತಾನು ಹೊರಗಿನವಳಲ್ಲ, ಇದೇ ಮನೆಯಲ್ಲಿ ಎಷ್ಟೋ ವರ್ಷಗಳಿಂದ ಇದೀನೇನೋ ಎನ್ನುವಷ್ಟು ಹೊಂದಿಕೊಂಡು ಬಿಟ್ಟಿದ್ದಳು. ಇದೇ ಮಾತನ್ನು ಒಮ್ಮೆ ಸುಚಿತ್ರಳೊಡನೆ ನುಡಿದಾಗ, ಅವಳು ತಮಾಷೆಯಿಂದ ಬೆನ್ನ ಮೇಲೆ ಗುದ್ದಿದ್ದಳು.

"ಪರವಾಗಿಲ್ವೇ ? ಅವತ್ತು ನೋಡಿದರೆ ಹೆದರಿ ಓಡಿ ಬಿಡ್ತೀಯೇನೋ ಅನ್ನುವಷ್ಟು ಕೆಟ್ಟ ಮುಖ ಮಾಡಿದ್ದೆ. ಈಗ ಆ ಆಂಟಿ ಏನು ಜಾದೂ ಮಾಡಿದಾಳೆ ? ಎಷ್ಟು ಬೇಗ ಅವರಿಗೆ ಹೊಂದಿಕೊಂಡು ಬಿಟ್ಟಿದೀಯಾ ?"

"ಏನು ಮಾಡ್ಲೇ ? ಎಲ್ಲೇ ಆದರೂ ಅಡ್ಜಸ್ಟ್ ಮಾಡ್ಕೋ ಬೇಕು ಅಲ್ವಾ ! ಪಾಪ ಆಂಟಿ, ತುಂಬಾ ಒಳ್ಳೆಯವರು, ತುಂಬಾ ಒಂಟಿ, ಅವರನ್ನು ನೋಡಿದರೆ ಅಯ್ಯೋ ಅಂತ ಅನ್ನಿಸುತ್ತೆ... ಇನ್ನು ಜಗ್ಗೂನೋ... ಅವನೊಂದು ತರಹ, ನಿನಗೇ ಗೊತ್ತಲ್ಲ... ನಾನು ಇಲ್ಲಿ ಇರತೊಡಗಿದ ಮೇಲೆ, ಅವನಲ್ಲಿ ಎಷ್ಟೋ ಸುಧಾರಣೆ ಕಂಡಿದೆಯಂತೆ ಆಂಟೀನೇ ಹೇಳ್ತಾರೆ ಒಟ್ಟಿನಲ್ಲಿ ಈಗ ನಾನು ಅವರಿಬ್ಬರಿಗೂ ಬೇಕಾದವಳಾಗಿ ಬಿಟ್ಟಿದೀನಿ ಅಷ್ಟೇ..."

"ಏಯ್ ಸ್ವಲ್ಪ ಹುಶಾರಾಗಿರು ಅಷ್ಟೇ... ಬಹಳ ಅತಿರೇಕಕ್ಕೆ ಹೋಗಬೇಡ"

"ಇಲ್ಲ ಸುಚಿತ್ರಾ... ನಾನೇನು ಸದಾ ಕಾಲಕ್ಕೂ ಇಲ್ಲೇ ಇರ್ತೀನಾ ? ಇರುವಷ್ಟುದಿನ ನನ್ನಿಂದ ಅವರುಗಳಿಗೆ ಸಹಾಯವಾಗುವುದಾದರೆ, ಅದರಿಂದ ತೊಂದರೆ ಏನಿದೆ ?"

"ತೊಂದರೆ ಏನೂ ಇಲ್ಲ ... ಈ ಕಾಲದಲ್ಲಿ ಯಾರು ಹೇಗೆ ಅಂತ ಹೇಗೆ ಜಡ್ಜ್ ಮಾಡೋಕೆ ಆಗುತ್ತೆ ? ನೀನೋ, ನಿನ್ನ ಓದಿಗಾಗಿ, ನಿನ್ನ ಕೆಲಸಕ್ಕಾಗಿ, ಹುಟ್ಟಿದ ಮನೆಯಿಂದ ಹೊರಗೆ ಬಂದವಳು... ಅಣ್ಣ ಹಾಗಂದ, ಅಮ್ಮ ಹೀಗಂದ್ರು ಅಂತ, ಮನೆಯವರು ಹೇಳುತ್ತಿದ್ದುದೇ ನಿನಗೆ ಸರಿ

ಎನಿಸುತ್ತಿರಲಿಲ್ಲ. ಎಲ್ಲರನ್ನು ವಿರೋಧಿಸಿ, ಝಾನ್ಸಿರಾಣಿಯ ತರಹ ಬಂದೋಳು, ಈಗ ಇವರುಗಳಿಗೋಸ್ಕರ, ಕುರಿಮರಿಯ ತರಹ ಮ್ಯಾ... ಮ್ಯಾ... ಅಂತೀಯಲ್ಲ.''

''ಮ್ಯಾ... ನೂ ಇಲ್ಲ, ಮಿಯಾಂವೂ ಇಲ್ಲ.'' ಇಬ್ಬರು ನಕ್ಕಿದ್ದರು.

☆ ☆ ☆

ಬಸ್‌ಸ್ಟ್ಯಾಂಡ್‌ನಲ್ಲಿ ಒಂದು ಆಟೋ ಹಿಡಿದು ತನ್ನ ಮನೆಗೆ ಬಂದಳು. ಅವಳು ಬರುತ್ತೇನೆಂದು ತಿಳಿಸಿದ್ದುದರಿಂದ, ಯಾರೂ ಅವಳನ್ನು ಕಂಡು ಕಣ್ಣರಳಿಸಲಿಲ್ಲ. ಅಲ್ಲದೇ, ಹಬ್ಬದ ರಜಾ ದಿನಗಳಲ್ಲಿ, ಇಲ್ಲಿಗೆ ಬರದೇ ಇನ್ನೆಲ್ಲಿಗೆ ಹೋಗ್ತಾಳೆ ಎನ್ನುವ ಧೋರಣೆ ತಾಯಿಯ ನಡೆ ನುಡಿಯಲ್ಲಿ. ತಂದೆ ಮಾತ್ರ ''ಹೇಗಿದೀಯಮ್ಮಾ ?'' ಎಂದು ತಮ್ಮ ಧರ್ಮ ಎಂಬಂತೆ ವಿಚಾರಿಸಿದ್ದರು ಹೇಮಾ, ತಂಗಿಗೆ ಬಿಸಿ ಬಿಸಿ ಕಾಫಿಯನ್ನು ಕೊಟ್ಟು ಯೋಗಕ್ಷೇಮ ವಿಚಾರಿಸಿದಳು.

ಆದರೂ, ಈ ಬಾರಿ, ತನ್ನ ಮನೆಯನ್ನು ಸೇರಿದ ಒಂದು ಗಂಟೆಯೊಳಗೆ, ತಾನು ಈ ಮನೆಯಮಂದಿಯಲ್ಲಿ ಒಬ್ಬಳಲ್ಲ ಎನ್ನುವ ಭಾವನೆ ಬರತೊಡಗಿತು. ಕೆಲವು ವರ್ಷಗಳಿಂದ ಮನೆಯಿಂದ ದೂರವೇ ಇರುವುದರಿಂದ, ಇವರುಗಳೆಲ್ಲಾ ತನ್ನನ್ನು ದೂರ ದೂರವೇ ಇಟ್ಟಿರುವರೆಂದು ಭಾಸವಾಗತೊಡಗಿತ್ತು. ತನಗೂ ಮೊದಲಿನಂತೆ ಇವರುಗಳೊಡನೆ ಬೆರೆಯಲು ಆಗುತ್ತಿಲ್ಲವೆಂದೆನಿಸಿತ್ತು. ಅತಿಥಿಯಂತೆ ಹೊರ ಹೊರಗೇ ಇರುತ್ತಿದ್ದವಳನ್ನು ಅಣ್ಣಂದಿರು, ಹಂಗಿಸಿ, ನೋಯಿಸಿದ್ದರು ಹೇಮ ಮಾತ್ರ ತಮಾಷೆ ಎಂಬಂತೆ ನುಡಿದಿದ್ದಳು.

''ನೀನು ತುಂಬಾ ಬದಲಾಯಿಸಿ ಹೋಗಿದೀಯ ಕಣೇ ಚುಮ್ಮೀ...''

''ನಾನಾ ? ನಾನೇಕೆ ಬದಲಾಗಲಿ! ನೀವುಗಳೇ ಬದಲಾಗಿದೀರಿ... ನನ್ನನ್ನು ದೂರ ಮಾಡ್ತಿದೀರಿ.''

''ಏನೂ ಇಲ್ಲ, ನಾವುಗಳು ಅದೇ ಹಳೇ ಮನೆಯಲ್ಲಿ, ಅದೇ ಹಳೇ ಟೌನ್‌ನಲ್ಲಿ ವಾಸ ಮಾಡ್ತಾ ಇದೀವಿ. ನೀನೋ, ಮೈಸೂರಿನಲ್ಲಿ ಓದಿ, ಬೆಂಗಳೂರಿನಲ್ಲಿ ಕೆಲಸದಲ್ಲಿರುವವಳು, ಕಾಲೇಜಿನಲ್ಲಿ ಲೆಕ್ಚರರ್ ಆಗಿರುವವಳು, ನಿನ್ನ ನಡೆ ನುಡಿಗಳಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ.''

''ಏನೂ ಇಲ್ಲ, ಸ್ವಲ್ಪ ಉಡುಗೆತೊಡುಗೆಯಲ್ಲಿ ಬದಲಾಗಿದೀನಿ ಅಷ್ಟೇ. ಕಾಲೇಜಿಗೆ ಹೇಗೆ ಅಂದ್ರೆ ಹಾಗೋ ಹೋಗುಕ್ಕಾಗುತ್ತಾ ?''

''ಬರೀ ಅಷ್ಟೇ ಅಲ್ಲ, ನಿನಗೆ ತುಂಬಾ ಜಂಭ ಬಂದು ಬಿಟ್ಟಿದೆ ಅಂತ ಸೂರಿ ಹೇಳ್ತಿದ್ದ.'' ಸುಮತಿ ನಕ್ಕು ಬಿಟ್ಟಳು.

''ನನಗೆ ಜಂಭ ಅನ್ನೋ ಪಟ್ಟ ಕಟ್ಟಿ, ನನ್ನಿಂದ ದೂರ ಇರುವುದಕ್ಕೆ ಒಂದು ನೆವ ಅಷ್ಟೇ... ನನ್ನನ್ನ ಒಂದು ಸಾರಿಯಾದರೂ ಹೇಗಿದೀಯಾ ಅಂತ ಕೇಳಿದಾನಾ ?... ಹೆಸರಿಗೆ ಹಿರಿಯಣ್ಣ ಅಷ್ಟೇ... ದೊಡ್ಡ ಬುದ್ಧಿಯೇ ಇಲ್ಲ.'' ಮೂತಿ ಸೊಟ್ಟ ಮಾಡಿ ನುಡಿದಳು.

"ಅವನಿಗೆ ಏನೋ ಅಳುಕು, ಕೀಳರಿಮೆ. ನಿನ್ನಷ್ಟು ವಿದ್ಯಾವಂತನಾಗಲಿಲ್ಲ, ನಿನ್ನಷ್ಟು ಸಂಪಾದಿಸುವುದಿಲ್ಲ, ಬಹುಶಃ ಅದಕ್ಕೇ..."

"ಓದ ಬೇಡಾಂತ ಯಾರು ಅಂದಿದ್ರು ?..." ಕಿಡಿ ಕಾರಿದ್ದಳು.

"ಹೋಗಲಿ ಬಿಡು ಅತ್ಲಾಗೇ.. ಇನ್ನೊಂದು ನ್ಯೂಸ್ ಹೇಳ್ಲಾ? ಅಮ್ಮ ಸೂರಿಗೆ ಹೆಣ್ಣು ನೋಡಿದಾಳೆ ಒಬ್ಬಳೇ ಮಗಳು. ಇವನು ಮದುವೆಯಾದ ಮೇಲೆಹೆಂಡತಿಯ ಮನೇಲೇ ಇರ್ತಾನೆ" ಕಿಸಕ್ಕನೆ ನಕ್ಕಳು.

"ಥೂ ಅದೇನು ಚೆನ್ನ" ಅಮ್ಮ ಒಪ್ಪಿಕೊಂಡಳಾ ಅದಕ್ಕೆ ?

"ಅವರ ಮನೆಯವರು ಶ್ರೀಮಂತರು ವರದಕ್ಷಿಣೆ ಕೊಡ್ತಾರೆ. ಅಮ್ಮನಿಗೆ ಆ ಜಬರ್ದಸ್ತೆಲ್ಲಾ ಬೇಕು ಅಲ್ವಾ ?"

"ಇದೆಲ್ಲಾ ತಪ್ಪು ಹೇಮಕ್ಕ, ಅವನಿಗಾದ್ರೂ ನಾಚಿಕೆ ಬೇಡ್ವಾ ? ದುಡಿಯೋ ಗಂಡಸಾಗಿ, ಹೆಂಡತಿಯ ಮನೆಯ ಹಣಕ್ಕೆ ಆಸ ಪಡೋದಾ ?"

"ಇನ್ನೇನ್ಮಾಡ್ತಾನೆ ನೀನೇ ಹೇಳು. ಹಳ್ಳಿ ಪ್ರೈಮರಿ ಸ್ಕೂಲು ಮೇಷ್ಟ್ರೇ ಇವನು. ಬರೋ ಸಂಬಂಳ ಇವನಿಗೇ ಸಾಲದು. ಈಗ ಮಜಾ ಮಾಡೋಕೆ ಛಾನ್ಸು ಸಿಗುತ್ತಿದೆ. ಖುಷಿಯಾಗಿದಾನೆ."

"ಅದಕ್ಕೇ, ಅವನಿಗೇ ಅಷ್ಟು ಜಂಭ ಬಂದಿರೋದು ? ನಿನ್ನ ಮದುವೆಯಾಗೋ ವರೆಗಾದ್ರೂ ತಡೀಬಹುದಾಗಿತ್ತು, ಅರ್ಜೆಂಟೇನಂತೆ ?"

"ಇವನಿಗಿಂತ ಅವರ ಮನೆಯವರಿಗೇ ಅರ್ಜೆಂಟು ಜಾಸ್ತಿ. ಆದಷ್ಟೂ ಬೇಗ ಅಳಿಯನ್ನ ತಮ್ಮ ಮನೆ ತುಂಬಿಸ್ಕೊಳ್ಳೋ ಆಸೆ" ಮತ್ತೆ ನಕ್ಕಳು.

"ಅಪ್ಪ ಕೂಡಾ ಒಪ್ಕೊಂಡ್ರಾ ? ಅನುಮಾನದಿಂದ ಕೇಳಿದಳು.

"ಮೊದಲಿಗೆ ಅಪ್ಪ ಕೂಗಾಡಿ ಗಲಾಟೆ ಮಾಡಿದರು. ಸೂರಿಯೂ ಅಪ್ಪನ ಸರಿಸಮಾನವಾಗಿ ನಿಂತು ಕಿರುಚಾಡಿದ." ನಿಮಗಂತೂ ಆಸ್ತಿ ಪಾಸ್ತಿ ಇಲ್ಲ... ನಾನಾದರೂ ಆಸ್ತಿವಂತನಾಗುಕ್ಕೆ ಬಿಡಿ. ನನ್ನ ಶ್ರೀಮಂತಿಕೆಯಿಂದ ನಿಮಗೂ ಒಂದು ಅಂತಸ್ತು ಬರುತ್ತೆ ಅಂತ ಕೂಗಾಡಿದ."

"ಥೂ ಎಷ್ಟು ನಾಚಿಕೆಗೇಡೇ ಅಕ್ಕ... ಹಿರಿಯ ಮಗನಾಗಿ ಹೀಗೆಲ್ಲಾ ಮಾತನಾಡೋದಾ ? ಅವನೇ ಹೀಗಾಡಿದ ಮೇಲೆ, ವಿಶ್ವ ಸುಮ್ಮನಿರ್ತಾನಾ ? ಅವನೂ ಅದೇ ಹಾದಿಯನ್ನು ಹಿಡೀತಾನೆ."

"ಹೌದು. ಅವನೂ ಸೂರಿ ಕಡೆಗೇನೇ... ಕಡೆಗೆ ಅಪ್ಪ ಸುಮ್ಮನಾಗಿ ಬಿಟ್ಟರು. ನನಗೂ ಯಾಕೋ ಇಲ್ಲಿರೋಕೇ ಬೇಜಾರಾಗ್ತಿದೆ. ನಾನೂ ಬೆಂಗಳೂರಿಗೆ ಬಂದು ಬಿಡ್ತೀನಿ. ನನಗೆ ಒಂದು ಕೆಲಸ ಕೊಡಿಸ್ತೀಯ ?"

"ನಿನಗೆ ಕೆಲಸಾನಾ ? ಕೆಲಸಕ್ಕೆ ಯಾಕೆ ಸೇರ್ಕೊಬೇಕು ? ನಾನು ಫೀಸು ಕೊಡ್ತೀನಿ. ನೀನು ಕಾಲೇಜಿಗೆ ಸೇರ್ಕೋ..."

"ಕಾಲೇಜಾ ? ಬೇಡಪ್ಪ ನಾಚಿಕೆಯಾಗುತ್ತೆ..."

"ಅದು ಬೇಡವಾದ್ರೆ ಪ್ರೈವೇಟ್‌ನಲ್ಲಿ ಪರೀಕ್ಷೆಗೆ ಕಟ್ಟು. ಈಗಂತೂ ಎಲ್ಲಾ ಯೂನಿವರ್ಸಿಟಿಗಳಲ್ಲೂ ಕರೆಸ್ಪಾಂಡೆನ್ಸ್ ಕೋರ್ಸುಗಳಿವೆ."

"ನಾನು ನಿನ್ನ ಹಾಗೆ ಜಾಣೆ ಅಲ್ಲ ಚುಮ್ಮೀ... ಮನೇಲೇ ಓದೋದು ಅಂತಂದ್ರೆ, ನನಗೆ ಪಾಠಗಳನ್ನು ಹೇಳಿಕೊಡೋರು ಯಾರು ? ಪುರಸೊತ್ತು ತಾನೆ ಎಲ್ಲಿಸಿಗುತ್ತೆ..."

"ನೀನೂ ನನ್ನ ಜೊತೆಗೇ ಬಂದು ಬಿಡು. ಒಂದು ಬಾಡಿಗೆ ಮನೆ ಮಾಡಿ ನಿನ್ನನ್ನು ಕರೆಸಿಕೊಳ್ತೀನಿ... ಈಗ ಸಧ್ಯಕ್ಕೆ ಒಬ್ಬರ ಮನೇಲಿ ಪೇಯಿಂಗ್ ಗೆಸ್ಟ್ ಆಗಿದೀನಿ... ಎನ್ನುತ್ತಾ ಅಲ್ಲಿಯ ವಿಷಯಗಳನ್ನು ಹೇಳಿದಳು.

"ನಾನು ಊರಿಗೆ ಹೊರಡುವ ಮೊದಲು ನಾನೇ ಅಮ್ಮನ ಹತ್ತಿರ ಮಾತಾಡ್ತೀನಿ. ಆದರೆ, ಅಮ್ಮ ಏನಾದ್ರೂ ಆಡಿದ್ರೆ ನೀನು ಮಾತ್ರ ಬೇಸರ ಮಾಡ್ಕೋಬಾರದು."

"ನಿನ್ನಷ್ಟೇ ಧೈರ್ಯವೇ ನನಗಿಲ್ಲವಲ್ಲೇ..."

"ಈಗ ಗೊತ್ತಾಯ್ತಾ ? ಧೈರ್ಯ ಬೇಕೂಂತ... ನೋಡೋಣ ತಡಿ ಅದೇನೇನು ಆಗುತ್ತೆ ಅಂತ... ನೀನು ನನಗೊಂದು ಫೇವರ್ ಮಾಡಬೇಕು..."

"ಹೂಂ ಅದೇನು ಹೇಳು"

"ಎಳ್ಳು, ಸಕ್ಕರೆ ಅಚ್ಚು ಅದೇನೇನು ತಿಂಡಿಗಳಿವೆಯೋ ಎಲ್ಲವನ್ನೂ ನನಗೆ ಪ್ಯಾಕ್ ಮಾಡಿಕೊಡಬೇಕು..."

"ಅಮ್ಮ ಕೊಡದೇ ಇರ್ತಾಳಾ ?"

"ನನಗಲ್ಲ, ಜಗ್ಗೂಗೆ... ನಾನು ತಿಂಡಿ ತಂದುಕೊಡ್ತೀನಿ ಅಂತ ಅವನಿಗೆ ಪ್ರಾಮಿಸ್ ಮಾಡಿ ಬಿಟ್ಟಿದೀನಿ."

"ಜಗ್ಗು? ಯಾರೇ ಆ ಜಗ್ಗು?" ಸಂದೇಹದಿಂದ ಕೇಳಿದಳು.

"ಅದೇ ನಾನು ಇದೇನಲ್ಲ, ಆಮನೆಯ ಆಂಟಿಯ ಮಗ. ಇನ್ನೂಹುಡುಗ. ಹುಡುಗ ಅಂದ್ರೆ ಚಿಕ್ಕೋನೇನಲ್ಲ, ಗಡ್ಡ ಮೀಸೆ ಕೂಡಾ ಚೆನ್ನಾಗಿ ಬೆಳೆದಿದೆ. ಆದರೆ ತಿಳುವಳಿಕೆ ಮಾತ್ರ, ಚಿಕ್ಕ ಮಕ್ಕಳಿಗಿಂತ ಕಡಿಮೆ..."

"ಹುಂ. ಗೊತ್ತಾಯ್ತು ಬಿಡು" ಹೇಮ ಲೊಚಗುಟ್ಟಿದಳು... ನಿನಗೆ ಅವನನ್ನು ನೋಡಿದ್ರೆ ಭಯ ಆಗುಲ್ವಾ ?"

"ಭಯ ಯಾಕೆ ? ಅವನೇನು ಹುಲಿಯಲ್ಲ; ಕರಡಿಯಲ್ಲ... ಏನೋ ಸ್ವಲ್ಪ ತಿಳುವಳಿಕೆ ಕಡಿಮೆ... ಮನುಷ್ಯ ಪ್ರಾಣಿ ಅಷ್ಟೇ... ನಾನೂ ಪ್ರಾಣಿಶಾಸ್ತ್ರವನ್ನು ಓದಿರುವವಳು, ಪ್ರಾಣಿಗಳೂ ಜೀವಿಗಳೇ... ಜೀವಿಗಳೂ ಅಂದ ಮೇಲೆ ಜೀವ ಇರುತ್ತೆ."

"ಸಾಕು, ಸಾಕು. ನಾನು ನಿನ್ನ ಸ್ಟೂಡೆಂಟ್ ಅಲ್ಲ. ಅವನೇನೂಂತ ಗೊತ್ತಾಯ್ತು. ಅಷ್ಟು ಸಾಕು ನನಗೆ..." ನಿನ್ನ ಪ್ರಾಣಿ ಶಾಸ್ತ್ರ ನನಗೂ ಅರ್ಥವಾಗುವುದಿಲ್ಲ. ಅವನಿಗೂ ಅರ್ಥವಾಗುವುದಿಲ್ಲ. ಆ ತಿಂಡಿಪೋತನಿಗೆ ತಿಂಡಿ ಬೇಕು ಅಷ್ಟೇ ತಾನೇ ?"

"ಹುಂ. ಅವನು ತಿಂಡಿ ಪೋತ ಅಂತ ನಿನಗೆ ಹೇಗೆ ಗೊತ್ತಾಯ್ತು ?"

"ಅಂಥೋರು ತಿಂಡಿ ಪೋತರೇ ಆಗಿರ್ತಾರೆ. ಇಲ್ಲದಿದ್ದರೆ ಹೇಗೆ ಹೊತ್ತು ಹೋಗುತ್ತೆ" ಮತ್ತೆ ಹೇಮ ನಕ್ಕಾಗ, ಸುಮತಿ ತಡೆದಳು.

"ಪ್ಲೀಸ್ ನಗಬೇಡ ಕಣಕ್ಕಾ... ಅವನನ್ನು ನೋಡಿದರೆ, ನನಗೆ ಒಂಥರಾ ವ್ಯಥೆಯಾಗುತ್ತೆಂ... ಅವನ ಸ್ಥಿತಿ ಯಾರಿಗೂ ಬರಬಾರದು"

"ಸರಿ ಬಿಡು... ನನಗೇನಾಗಬೇಕು ?" ಎಂದು ಹೇಳಿ ಹೇಮ ಒಳಗಿನಿಂದ ಎದ್ದು ಹೊರಗೆ ಬಂದು ಬಿಟ್ಟಳು. ಸುಮತಿಯ ಮುಖ ಚಿಕ್ಕದಾಯಿತು. ಜಗ್ಗು ಪರವಹಿಸಿ, ಹೇಮಳ ಮನಸ್ಸಿಗೆ ನೋವುಂಟು ಮಾಡಿದೆನೇನೋ ಅಂತಂದುಕೊಂಡು, ಅವಳ ಹಿಂದೆಯೇ ಹೊರ ಬಂದಳು.

ಹಬ್ಬ ಚೆನ್ನಾಗಿ ನಡೆಯಿತು. ತಾಯಿ ವಿಶೇಷ ಅಡಿಗೆಯನ್ನು ಮಾಡಿದ್ದಳು. ಮನೆ ಮನೆಗೆ ಹೋಗಿ ಎಳ್ಳು ಬೀರುವ ಸಂಪ್ರದಾಯವಿದ್ದರೂ, ಯಾರೂ ಹೋಗಲು ಸಿದ್ಧ ಇರಲಿಲ್ಲ. ಹೇಮಳ ಜೊತೆ ಜೊತೆಯಲ್ಲಿ ಮನೆ ಮನೆಗೆ ಹೋಗಿ ಬರುತ್ತಿದ್ದ ಸಂಭ್ರಮವನ್ನು ನೆನೆಸಿಕೊಂಡಳು ಜರಿಲಂಗ ಕುಪ್ಪುಸ ತೊಟ್ಟು, ಎಳ್ಳು, ಸಕ್ಕರೆ ಅಚ್ಚು ಕಬ್ಬು ಇತ್ಯಾದಿಗಳನ್ನು ಅಕ್ಕಪಕ್ಕದ ಪರಿಚಯಸ್ಥರಿಗೆ ಹೋಗಿ ಬೀರಿ ಬರುತ್ತಿದ್ದುದರಲ್ಲಿ ಎಷ್ಟು ಮಜವಿತ್ತು ? ಈಗ ಯಾಕೆ ಮೊದಲಿನ ಉತ್ಸಾಹವೇ ಯಾರಲ್ಲೂ ಇಲ್ಲ ಅಂತಂದುಕೊಂಡರೂ, ತಂಗಿ ಕವಿತಾಳನ್ನು ಕೇಳಿದಳು.

"ನೀನೂ ಹೋಗೋದು ಬಿಟ್ಟು ಬಿಟ್ಯಾ ?"

"ಅಯ್ಯೋ ಬಿಡೇ ಯಾರು ಮನೇ ಮನೇ ತಿರುಗ್ತಾರೆ ? ಹೇಮಕ್ಕ ಬರುಲ್ಲ. ನಾನು ಒಬ್ಬಳೇ... ಹೋದ ವರ್ಷ ಅಂತು ಸಾಕಾಗಿ ಹೋಯ್ತು."

"ನೀನೇ ತಾನೇ ಚಿಕ್ಕೋಳು... ಅದು ಚಿಕ್ಕ ಹುಡುಗಿಯರ ಕೆಲಸ..."

"ಏನಿಲ್ಲ, ಯಾರು ಬೇಕಾದ್ರೂ ಮಾಡಬಹುದು. ಈ ವರ್ಷ ನೀನೇ ಯಾಕೆ ಹೋಗಿ ಬರಬಾರದು ? ಬೇಕಾದ್ರೆ ನಾನೂ ಜೊತೆಗೆ ಬರ್ತೀನಿ" ಹೇಮಕ್ಕಳ ಕಡೆ ನೋಡಿ ನಕ್ಕಳು.

"ಕಳ್ಳೀ ನನ್ನ ಮಾತನ್ನು ನನಗೇ ತಿರುಗಿಸ್ತೀಯಾ ...? ನಾನು ಈ ಊರ್ನಲ್ಲೇ ಇಲ್ಲವಲ್ಲ. ನೀವುಗಳೇ ತಾನೇ ಈ ಮನೇಲಿರೋರು."

"ಅದಕ್ಕೇ ಹೇಳಿದ್ದು, ನಮಗೆ ಇದೆಲ್ಲಾ ಅಪರೂಪವೇನಲ್ಲ. ನಿನಗೆ ತಾನೇ ಅಪರೂಪ ಆಗದಿದ್ದರೆ ಬಿಡು, ಹೇಗೂ ಅಕ್ಕಪಕ್ಕದವರು ನಮ್ಮ ಮನೆಗೆ ಬರ್ತಾರೆ. ಆಗ ಕೊಟ್ಟೇ ಕೊಡ್ತೇವಲ್ಲ. ಈ ಸಾರಿ ಒಬ್ಬ ಸ್ಪೆಷಲ್ ಪಾರ್ಟಿ ಬೇರೆ ಬರುತ್ತೆ" ನಕ್ಕಳು.

"ಯಾರೇ ಅದು ?"

"ನೀನೇ ಗೆಸ್ ಮಾಡು... ಎದ್ದು ಮನೆ ಕ್ಲೀನ್ ಮಾಡೋಣ. ಇಲ್ಲದಿದ್ದರೆ ಅಮ್ಮಾ ಬೈತಾಳೆ" ಎನ್ನುತ್ತಾ ಕಸಪೊರಕೆ ತೆಗೆದುಕೊಂಡು, ಮುಂಬಾಗಿಲಿಗೆ ಬಂದಳು.

"ಅಮ್ಮಾ... ಅವರುಗಳು ಬಂದೇ ಬಿಟ್ಟರು..." ಎನ್ನುತ್ತಾ ಹಾಗೇ ಹಿಂದಕ್ಕೆ ತಿರುಗಿ ಬಂದಳು. ಮನೇ ಮುಂದೆ ಒಂದು ಕಾರು ಬಂದು ನಿಂತಿತ್ತು. ಅದರಿಂದ ಒಬ್ಬೊಬ್ಬರಾಗಿ ಇಳಿದರು.

"ಓ... ನಮ್ಮ ಭಾವೀ ಬೀಗರು" ಎನ್ನುತ್ತಾ ಸೀತಮ್ಮ ಸಡಗರದಿಂದ ಅವರುಗಳನ್ನು ಸ್ವಾಗತಿಸಲು ಮುಂದಾದಳು. ಉಳಿದವರು ಒಳಬಾಗಿಲಿನಲ್ಲಿ ನಿಂತರು.

"ಚುಮ್ಮೀ... ನೋಡೇ ಅವಳೇ ನಿನ್ನ ಅತ್ತಿಗೆ, ಸಾಕ್ಷಾತ್ ಗಜಲಕ್ಷ್ಮಿ ! ಹೇಮ ಪಿಸುದನಿಯಲ್ಲಿ ನುಡಿದಳು. ಸೂರಿ ಹಬ್ಬದ ಊಟದ ನಂತರ ಗಡದ್ದಾಗಿ ನಿದ್ದೆ ಹೊಡೆದಿದ್ದ. ಎಲ್ಲರೂ ಒಬ್ಬೊಬ್ಬರಾಗಿ ಎದ್ದು ಬಂದರು. ಅವರುಗಳಿಗೆ ಸುಮತಿಯ ಪರಿಚಯ ಮಾಡಿಕೊಟ್ಟರು. ಅವರುಗಳು ಸಾಂಪ್ರದಾಯಿಕವಾಗಿ, ಎಳ್ಳು, ಬೀರಲು ಬಂದಿದ್ದರು. ಸುಮತಿ ಸೂರಿಯ ಕಡೆ ನೋಡಿದಳು. ಅವನು ಕೈಕಟ್ಟಿ ತಲೆತಗ್ಗಿಸಿ ಗೋಡೆಗೊರಗಿ ನಿಂತಿದ್ದ ಸೂರಿಯ ಮೇಲೆ ಮರುಕ ಉಂಟಾಯಿತು. ಅವರುಗಳು ಅತ್ತ ಹೋದ ಮೇಲೆ ಮನೆಯಲ್ಲಿ ಚರ್ಚೆ ಪ್ರಾರಂಭವಾಗಿತ್ತು. ಸುಮತಿ ಬೇಕೆಂದೇ ಆ ಚರ್ಚೆಯಲ್ಲಿ ಪಾಲ್ಗೊಳ್ಳಲಿಲ್ಲ. ತನಗೆ ಯಾವ ವಿಷಯವೂ ತಿಳಿಯದು ಎಂಬಂತೆ ಸುಮ್ಮನಿದ್ದಳು.

ಮಾರನೇ ದಿನ ಬೆಂಗಳೂರಿಗೆ ಹೊರಟಳು. ಹೇಮ ಮರೆಯದೇ ತಿಂಡಿಗಳನ್ನು ಪ್ಯಾಕ್ ಮಾಡಿಕೊಟ್ಟಳು. ತಂದೆ ಬಸ್‌ಗೆ ಹತ್ತಿಸಲು ಬಂದಿದ್ದರು.

"ಹುಶಾರು ಕಣಮ್ಮಾ ... ರಾತ್ರಿ ಪ್ರಯಾಣ... ಊರಿಗೆ ತಲುಪಿದ ಕೂಡಲೇ, ಫೋನು ಮಾಡಿಬಿಡು."

"ಹೂಂ ನಪ್ಪಾ" ತಲೆಯಾಡಿಸಿದಳು.

"ಸೂರಿಗೆ ಹೆಣ್ಣು ಗೊತ್ತಾಗಿದೆ. ಇನ್ನೂ ಲಗ್ನ ಪತ್ರಿಕೆ ಆಗಿಲ್ಲ. ಮದುವೆ ಬೇಸಗೆ ರಜದಲ್ಲಿ..."

"ಯಾಕಪ್ಪಾ... ನಿಮಗೆ ಇಷ್ಟವಿಲ್ಲದಿದ್ದರೂ ಈ ಮದುವೆಗೆ ಒಪ್ಪಿಕೊಂಡ್ರಿ ?"

"ಸೂರಿಗೆ ಶ್ರೀಮಂತನಾಗುವ ಆಸೆ. ಶ್ರೀಮಂತ ಅಪ್ಪನ ಮನೆಯಲ್ಲಂತೂ ಹುಟ್ಟಲಿಲ್ಲ. ಶ್ರೀಮಂತ ಮಾವನ ಮನೆಯಲ್ಲಾದ್ರೂ ಬದುಕಿಕೊಳ್ತಾನೆ ಬಿಡು... ಆದರೆ ನನಗೆ ಒಂದೇ ಚಿಂತೆ, ಹೇಮಂಗೆ ಯಾವ ಗಂಡೂ ಗೊತ್ತಾಗ್ಲಿಲ್ಲ. ಆಮೇಲೆ ಸೂರಿ ನಮ್ಮ ಕೈಗೆ ಸಿಕ್ತಾನಾ ?"

ಸುಮತಿ ಏನನ್ನೂ ಆಡಲಿಲ್ಲ. ಬಸ್ಸು ಹೊರಟಿತು. ಕೈ ಆಡಿಸಿದಳು.

ಬೆಳಿಗ್ಗೆ ಬಸ್ಸು ಬೆಂಗಳೂರನ್ನು ತಲುಪಿದಾಗ, ಇನ್ನೂ ಚೆನ್ನಾಗಿ ಬೆಳಕಾಗಿರಲಿಲ್ಲ. ಇಬ್ಬನಿಯ ಕಾಲವಾದುದದರಿಂದ, ಮಂಜಿನ ತುಂತುರು ಹನಿಗಳು ಬೇರೆ. ಬಂದು ಆಟೋ ಹಿಡಿದು ಮನೆಗೆ ಬಂದಳು. ಜಾನಕಿ ಸಂತಸದಿಂದ ಕಣ್ಣರಳಿಸಿದಳು.

"ಬಂದ್ಯಾ ಸುಮತೀ, ಎರಡು ದಿನದಿಂದ ಮನೆಯೆಲ್ಲಾ ಬಿಕೋ ಅನ್ನುತ್ತಿತ್ತು. ಜಗ್ಗು ಅಂತೂ ಮಂಕಾಗಿ ಬಿಟ್ಟಿದ್ದ. ನಿನಗೇ ಕಾಯೋನ ತರಹ, ಮಹಡಿ ಮೆಟ್ಟಿಲ ಬಳಿಯೇ ಕೂತಿರುತ್ತಿದ್ದ."

"ಅವನಿನ್ನು ಎದ್ದಿಲ್ವಾ ! ಈ ತಿಂಡೀನೆಲ್ಲಾ ಜಗ್ಗೂಗೆ ಅಂತ ತಂದಿದೀನಿ" ಅವನಿಗೆ ಕೊಟ್ಟು ಬಿಡಿ ಎಂದು ಹೇಳಿ, ಪ್ಲಾಸ್ಟಿಕ್ ಚೀಲವನ್ನು ಜಾನಕಿಯ ಕೈಗೆ ಕೊಟ್ಟಳು ನಿತ್ಯದಂತೆ, ಸಿದ್ಧಳಾಗಿ ಕಾಲೇಜಿಗೆ ಹೊರಡುವ ಸಮಯವಾದರೂ, ಜಗ್ಗೂ ಹೊರಕ್ಕೆ ಬಂದಿರಲಿಲ್ಲ.

"ನೆನ್ನೆ ರಾತ್ರಿ ಯಾಕೋ ವಿಪರೀತ ತಂಟೆ ಮಾಡಿದ. ಚೆನ್ನಾಗಿ ನಾಲ್ಕು ಬಾರಿಸಿ, ಎರಡು ನಿದ್ದೆ ಮಾತ್ರೆ ನುಂಗಿಸಿ ಮಲಗಿಸಿದೀನಿ. ಇನ್ನೂ ಎದ್ದಿಲ್ಲ."

"ಆಂಟೀ, ನೀವು ಅವನನ್ನು ಹೊಡೆಯಬಾರದಾಗಿತ್ತು."

"ನಿನಗೂ ಇಂತಹ ಒಬ್ಬ ಅವಿವೇಕಿ ಸ್ಟೂಡೆಂಟ್ ಇದ್ದಿದ್ರೆ ನೀನೂ ಹೊಡೆದು ಚಚ್ಚುತ್ತಿದ್ದೆ. ಎಷ್ಟು ಗೋಳು ಹೊಯ್ದುಕೊಳ್ತಾನೆ ಅಂತೀಯ..."

ಸುಮತಿ ಹೆಚ್ಚಿಗೆ ಮಾತನಾಡದೇ ತನ್ನ ಪಾಡಿಗೆ ತಾನು ಹೊರಟುಹೋದಳು. ಸಾಯಂಕಾಲ ಅವಳು ಮನೆಗೆ ವಾಪಸ್ಸು ಬರುವಷ್ಟರಲ್ಲಿ ಒಂದು ದೊಡ್ಡ ರಂಪವೇ ನಡೆದು ಹೋಗಿತ್ತು. ಸುಮತಿ ತಂದಿದ್ದ ತಿಂಡಿಗಳನ್ನೆಲ್ಲಾ ತಿನ್ನದೇ ಚೆಲ್ಲಾಪಿಲ್ಲಿ ಮಾಡಿದ್ದ. ಅವಳು ತಂದು ಕೊಟ್ಟಿದ್ದ ಪುಸ್ತಕಗಳನ್ನೆಲ್ಲ ಹರಿದು, ಮನೆಯಲ್ಲೆಲ್ಲಾ ಬಿಸಾಕಿದ್ದ. ಜಾನಕಿ ಮತ್ತೆ ಮಗನನ್ನು ಹೊಡೆದು, ಮನಸ್ವೀ ಬೈದು, ತಾನೂ ಅತ್ತಿದ್ದಳು. ಸುಮತಿ ಒಳಕ್ಕೆ ಕಾಲಿಡುತ್ತಿದ್ದಂತೆಯೇ, ಈ ರಾದ್ಧಾಂತವನ್ನು ಕಂಡು ಬೇಸರಿಸಿದಳು. ತಾನು ಈ ತಿಂಡಿಗಳನ್ನು ತರಲೇ ಬಾರದಾಗಿತ್ತೆನಿಸಿತ್ತು.

ಕೋಪಿಸಿಕೊಂಡು ಕೂತಿದ್ದ ಅವನ ಬಳಿಗೆ ಬಂದು, ಪ್ರೀತಿಯಿಂದ ಕರೆದಳು ಅವನು ಇತ್ತ ತಿರುಗಲೇ ಇಲ್ಲ, ತಾನೇ ಬಲವಂತವಾಗಿ, ಅವನ ಮುಖವನ್ನು ತನ್ನೆಡೆಗೆ ತಿರುಗಿಸಿಕೊಂಡಳು ಎರಡೂ ಕೆನ್ನೆಗಳ ಮೇಲೆ ಬೆರಳುಗಳ ಗುರುತುಗಳು !! ಊದಿಕೊಂಡು ಕೆಂಪಾಗಿರುವ ಕೆನ್ನೆಗಳು !! ಮೃದುವಾಗಿ ಕೆನ್ನೆಗಳ ಮೇಲೆ ಕೈಯಾಡಿಸಿದಳು. ಅವನು ಕೋಪದಿಂದ ಅವಳನ್ನು ತಳ್ಳಿದ.

"ಜಗ್ಗೂ, ತಿಂಡೀನ ಯಾಕೆ ತಿನ್ನಲಿಲ್ಲ ?" ಕೋಪದಿಂದ ಗದರಿ ಕೇಳಿದಳು. ಅವನು ಭಯದಿಂದ ಇವಳನ್ನೇ ನೋಡಿದ.

"ನೀನು ತಿನ್ನದೇ ಇದ್ದರೆ, ನಾನು ಮತ್ತೆ ಊರಿಗೆ ಹೊರಟು ಹೋಗ್ತೀನಿ ಅಷ್ಟೇ"

ತಕ್ಷಣವೇ ಅವನು ಬೇಡ ಎನ್ನುವಂತೆ ಅವಳ ಕೈ ಹಿಡಿದ ಏನೋ ಅಸ್ಪಷ್ಟವಾಗಿ ನುಡಿದ. ಅವಳು ಅವನನ್ನು ಎಬ್ಬಿಸಿದಳು ಅವನನ್ನು ಕರೆತಂದು ಟೇಬಲ್ಲಿನಲ್ಲಿ ಕೂರಿಸಿದಳು. ಅಳಿದುಳಿದ ತಿಂಡಿಗಳನ್ನು ಒಂದು ತಟ್ಟೆಗೆ ಹಾಕಿ ಅವನ ಮುಂದೆ ಇಟ್ಟಳು ಅವನು ನೀನೇ ತಿನ್ನಿಸು ಎನ್ನುವಂತೆ ಮೂತಿಯನ್ನು ಚಾಚಿದ. ಇವಳು ಅವನ ತಲೆಯ ಮೇಲೆ ಕೈಯಾಡಿಸಿ, ನೀನೇ ತಿನ್ನು ಎಂದು ಗದರಿದಳು. ಅವನು ವಿಧೇಯನಂತೆ, ನಿಧಾನವಾಗಿ ತಿನ್ನತೊಡಗಿದ "ದೇವರೇ ಯಾಕಪ್ಪಾ ಶಿಕ್ಷೆ ಇಂತಹ ಹುಡುಗನಿಗೆ ?" ಅವಳು ತನ್ನಲ್ಲೇ ಮರುಗಿದಳು.

"ಸಾಕು ಬಾ ಸುಮತೀ... ಅವನಿಗೆ ಎಷ್ಟು ಪ್ರೀತಿ, ಅಕ್ಕರೆ ತೋರಿದರೂ, ದಿನದಿನಕ್ಕೂ ಅಷ್ಟೇ ದಡ್ಡನಾಗುತ್ತಿದಾನೆ. ನೀನು ಕಾಫಿ ತಿಂಡಿ ತಗೋ. ನಾನು ಇಲ್ಲೇ ಮೆಡಿಕಲ್ ಸ್ಟೋರ್ಸ್‌ಗೆ ಹೋಗಿ ಬರ್ತೀನಿ"

"ಹಾಗೆನ್ನ ಬೇಡಿ ಆಂಟೀ... ಅವನಿಗೂ ಎಲ್ಲಾ ಅರ್ಥವಾಗುತ್ತೆ. ಅವನಿಗೆ ನನ್ನ ಮೇಲೆ ಕೋಪ ಬಂದಿತ್ತು. ಆಗ ಆ ಕೋಪ ಹೋಯ್ತು, ಅಲ್ವೇನೋ ಜಗ್ಗು ?" ಅವನು ಹಲ್ಲುಕಿರಿದ.

"ನಂಗಂತೂ ಅರ್ಥವಾಗುಲ್ಲಮ್ಮ ನಿಮ್ಮಿಬ್ಬರ ಈ ಸಂಬಂಧ ? ನಮ್ಮ ಸಂಕೂ ಅಂತೂ ಒಂದು ದಿನವಾದರೂ, ಹೀಗೆ ತಮ್ಮನನ್ನು ಪ್ರೀತಿಯಿಂದ ಮಾತನಾಡಿಸಿಲ್ಲ."

ಸಂಕೂ ಬಗ್ಗೆ ಅವಳಿಗೆ ತಿರಸ್ಕಾರ ಮೂಡಿತ್ತು. ಮನಸ್ಸು ಕಹಿಯಾಗಿತ್ತು. ಇವನೋ ಅರಿವಿಲ್ಲದವನು, ಅವನು ಅರಿವಿದ್ದೂ ಅವಿವೇಕಿ ಅಷ್ಟೇ ಅಂತಂದುಕೊಂಡಳು.



ಅವಳು ಭದ್ರಾವತಿಯಿಂದ ವಾಪಸ್ಸು ಬಂದು ಹದಿನೈದು ದಿನಗಳು ಕಳೆದಿದ್ದವು. ಒಂದು ದಿನ ಕಾಲೇಜನಿಂದ ವಾಪಸ್ಸು ಬರುವಾಗ, ಗೇಟಿನ ಬಳಿಗೆ ಬರುತ್ತಿದ್ದಂತೆಯೇ, ಮನೆಯ ಒಳಗಿನಿಂದ ಎತ್ತರದ ಧ್ವನಿಯಲ್ಲಿ ಯಾರೋ ಹೊರಗಿನವರು, ಮಾತನಾಡುತ್ತಿರುವುದು ಕೇಳಿಸಿತು. ಒಂದು ಗಳಿಗೆ ಕಾಲುಗಳು ಅಲ್ಲೇ ಗೇಟಿನ ಹೊರಗೇ ನಿಂತವು. ಮನೆಗೆ ಯಾರೋ

ಗೆಸ್ಟ್ ಬಂದಿರುವಂತೆ ಕಾಣುತ್ತದೆ ಯಾರಿರಬಹುದು ? ಒಳಗೆ ಹೋಗಲೋ ಬೇಡವೋ ಎಂದು ಅನುಮಾನಿಸುತ್ತಾ ನಿಂತಳು. ಆದರೆ ಗೇಟಿನ ಬಳಿಯೇ, ರಸ್ತೆಯಲ್ಲಿ ನಿಂತಿರುವುದೂ ಕಷ್ಟವೆನಿಸಿತ್ತು... ಪಕ್ಕದ ಓಣಿಯಿಂದ ಹಿಂಬಾಗಿಲಿನ ಬಳಿಗೆ ಬಂದಳು. ಹಿಂಬಾಗಿಲು ಒಳಗಿನಿಂದ ಚಿಲುಕ ಹಾಕಿತ್ತು. ಬಾಗಿಲನ್ನು ಬಡಿಯಲು ಹೀನಾಯವೆನಿಸಿ, ಮತ್ತೆ ಮುಂಬಾಗಿಲಿಗೆ ಬಂದಳು. ಹೊಸ್ತಿಲಿನಿಂದ ಒಳಕ್ಕೆ ಕಾಲಿಡುತ್ತಿದ್ದಂತೆಯೇ ಮಾತನಾಡುತ್ತಿದ್ದವರೆಲ್ಲಾ ಮಾತನ್ನು ನಿಲ್ಲಿಸಿ ಇವಳ ಕಡೆಗೆ ತಿರುಗಿದರು. ಅವರುಗಳ ಕಡೆ ನೋಡಿದಂತೆ ಮಾಡಿ, ತಲೆ ತಗ್ಗಿಸಿ, ಸುಮತಿ ಮೆಟ್ಟಿಲುಗಳ ಕಡೆಗೆ ತಿರುಗಿದಳು.

"ಸುಮತೀ... ಬಾಯಿಲ್ಲಿ" ಇದ್ದಕ್ಕಿದ್ದಂತೆ ಜಾನಕಿ ಹಿಂದಿನಿಂದ ಕರೆದು ನಿಲ್ಲಿಸಿದಾಗ ಸುಮತಿ ಬೆಚ್ಚಿದಳು. ಹಿಂತಿರುಗಿ ನೋಡಿದಳು ಜಾನಕಿಯ ಮುಖ ಖುಷಿಯಿಂದ ಅಗಲವಾಗಿದ್ದವು.

"ನೋಡಿಲ್ಲಿ... ನನ್ನ ಮಗ ಸಂಕೂ ಬಂದಿದಾನೆ..." ಎನ್ನುತ್ತಾ ಅವರುಗಳೆಲ್ಲ ಕುಳಿತಿದ್ದೆಡೆಗೆ ಕರೆದುಕೊಂಡು ಬಂದಳು.

"ಇವನು ನನ್ನ ಮಗ ಸಂಕೂ... ಸಂಕೂ ಇವಳು ನನ್ನ ಪೇಯಿಂಗ್ ಗೆಸ್ಟ್ ಸುಮತೀ..." ಸುಮತಿ ಅವನ ಕಡೆ ನೋಡಿದಳು. ಅವನು ಮುಗುಳ್ನಕ್ಕು ಹಲೋ ಮೇಡಂ... ಎಂದ. ಸುಮತಿಯೂ ಮಂದಹಾಸ ಬೀರಿ, ಮೆಲ್ಲಗೆ 'ಹಲೋ' ಎಂದಳು. ಅವನನ್ನೇ ಮತ್ತೆ ಮತ್ತೆ ನೋಡಬೇಕೆನ್ನಿಸಿತ್ತು. ಆಕರ್ಷಕ ರೂಪಿನ ಸುಂದರ ಯುವಕ. ಇವನು ಆಂಟಿಯ ಮಗ ಸಂಕೇತನೇ... ತಾನು ಊಹಿಸಿದ್ದೇ ಬೇರೆ... ಮನದಲ್ಲೇ ಜಗ್ಗೂಗೆ ಹೋಲಿಸಿದಳು.

"ಇವರುಗಳು ನಮ್ಮ ಸಂಕೂನ ಫ್ರೆಂಡ್ಸ್‌ಗಳು... ಸಂಕೂ ಇವರುಗಳ ಪರಿಚಯ ಮಾಡಿಸಿಕೊಡು..."

"ನನ್ನ ಹೆಸರು ಸಂಕೇತ್ ಅಂತ... ಇವನು ಹರೀಶ, ಇವನು ಗೋಪಿ, ಇವನು ವಿಠ್ಠಲ, ಇವನು ಮಧುಕರ ದಿನೇಶ ಸಂಕೇತ ಒಬ್ಬೊಬ್ಬರನ್ನಾಗಿ ಎಲ್ಲರನ್ನೂ ಪರಿಚಯಿಸಿದ. ಸುಮತಿ ಎಲ್ಲರಿಗೂ ಕೈಮುಗಿದು ನಮಸ್ಕಾರ ಹೇಳಿದಳು. ಎಲ್ಲರ ಕಣ್ಣೂ ಅವಳ ಮೇಲೇ ಇರುವುದು ಅವಳ ಗಮನಕ್ಕೆ ಬಂದಿತು. ಮುಖ ಕೆಂಗುಲಾಬಿಯಾಗಿತ್ತು. ನಿಂತಲ್ಲೇ ಚಡಪಡಿಸಿದಳು.

"ಕೂತ್ಕೊಳ್ಳಿ ಮೇಡಂ..." ಸಂಕೇತ ಸವಿನಯದಿಂದ ಹೇಳಿದಾಗ, ಸುಮತಿ ತಬ್ಬಿಬ್ಬುಗೊಂಡಿದ್ದಳು. ಜಾನಕಿ ಅವಳ ಸಹಾಯಕ್ಕೆ ಬಂದಳು.

"ಇವಳು ಈಗ್ತಾನೇ ಕಾಲೇಜ್ನಿಂದ ಬರ್ತಿದಾಳೆ... ಹೋಗು ಸುಮತಿ, ಹೋಗಿ ಕೈ ಕಾಲು ಮುಖ ತೊಳೆದುಕೊಂಡು ಬಾ... ಕಾಫಿ ಕೊಡ್ತೀನಿ."

ಅಲ್ಲಿಂದ ಸರಿದರೆ ಸಾಕು ಎನ್ನುವಂತೆ ಕಾದಿದ್ದ ಸುಮತಿ, ಸರಸರನೆ ಮೆಟ್ಟಿಲುಗಳನ್ನೇರಿದಳು. ಎಲ್ಲರ ದೃಷ್ಟಿಯೂ ತನ್ನ ಬೆನ್ನ ಮೇಲಿದೆ ಎನ್ನುವುದು ಅವಳಿಗೆ ಭಾಸವಾಗಿತ್ತು. ಮತ್ತೆ ಕೆಳಗಿಳಿದು

ಬರಲೋ ಬೇಡವೋ ಎಂದು ಯೋಚಿಸಿದಳು. ತನಗೆ ಈಗ ಬಿಸಿ ಬಿಸಿ ಕಾಫಿಯ ಅಗತ್ಯವಿದೆ. ಅದಕ್ಕೋಸ್ಕರವಾದರೂ ಕೆಳಗಿಳಿದು ಬರಬೇಕು. ಅಲ್ಲದೇ ತಾನೇನು ಹಳ್ಳಿಯ ಗುಗ್ಗೇ... ಈ ವಯಸ್ಸಿನ ಯುವಕರೊಡನೆ ಮುಜುಗರ ಪಟ್ಟುಕೊಳ್ಳುವುದಕ್ಕೆ ? ರೂಮಿನಿಂದ ಬರುವ ಮೊದಲು, ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡಿಕೊಂಡಳು. ಮುಂಗುರುಳನ್ನು ಸರಿಮಾಡಿಕೊಂಡಳು. ಸೀರೆಯ ಸೆರಗನ್ನು ಸರಿಪಡಿಸಿಕೊಳ್ಳುತ್ತಾ ಮೆಟ್ಟಿಲುಗಳನ್ನಿಳಿದಳು. ಅಲ್ಲಿ ಕುಳಿತಿದ್ದವರ ಕಡೆ ತಿರುಗಿ ನೋಡದೇ ಸೀದಾ ಅಡಿಗೆ ಮನೆಯ ಕಡೆಗೆ ಬಂದಳು.

''ಆಂಟೀ... ನಮಗೂ ಕಾಫೀ...'' ಎನ್ನುತ್ತಾ ಹರೀಶ ಅಡಿಗೆ ಮನೆಯ ಬಾಗಿಲಿಗೆ ಬಂದು ನಿಂತಿದ್ದ. ಅವನು ಸುಮತಿಯನ್ನೇ ಕೆಕ್ಕರಿಸಿ ನೋಡುತ್ತಿರುವನೆಂದೆನಿಸಿ ಜಾನಕಿ ಅವನಿಗೆ ಹೇಳಿದಳು.

''ನೀನು ಅಲ್ಲಿ ನಿನ್ನ ಫ್ರೆಂಡ್ಸ್ ಜೊತೆ ಕೂತು ಮಾತಾಡ್ತಿರು. ಕಾಫಿ ಬೆರೆಸಿಲ್ಲ ಇನ್ನೂ''

''ಆಂಟೀ ನಾನು ಕಾಫಿಯನ್ನು ಬೆರೆಸ್ತೀನಿ. ನೀವು ಹೊರಗೆ ಹೋಗಿ ಅವರುಗಳ ಜೊತೆ ಮಾತಾಡ್ತಾ ಇರಿ'' ಸುಮತಿ ಕಾಫಿ ಫಿಲ್ಟರಿನ ಮುಚ್ಚಳ ತೆಗೆದಳು.

''ನಾನು ಹೆಲ್ಪ್ ಮಾಡ್ಲಾ ಮೇಡಂ'' ಹರೀಶ ಅವಳ ಸಮೀಪಕ್ಕೆ ಬಂದು ನಿಂತ... ಅಷ್ಟರಲ್ಲಿ ಸಂಕೇತನೂ ಅಲ್ಲಿಗೆ ಬಂದಿದ್ದ.

''ಏಯ್ ಹರೀಶ, ಇಲ್ಲೇನು ಮಾಡ್ತಾ ಇದೀಯೋ... ನಿನಗೇನು ಕೆಲಸ ಅಡಿಗೆ ಮನೇಲಿ? ನಡೀ ಹೊರಕ್ಕೇ...'' ಸಂಕೇತ ಹರೀಶನನ್ನು ಎಳೆದುಕೊಂಡು ಹೋದ. ಸುಮತಿ ಹಾಯಾಗಿ ಉಸಿರಾಡಿದಳು. ಸಂಕೇತನ ಮೇಲಿನ ಕಹಿ ಕಡಿಮೆಯಾಯಿತು. ಹಿತವಾದ ಭಾವನೆ ಮೂಡಿತು.

ಕಪ್‌ಗಳಿಗೆ, ಬಿಸಿ ಬಿಸಿ ಕಾಫಿಯನ್ನು ತುಂಬಿಸಿ, ಟ್ರೇಯಲ್ಲಿ ಕಪ್ಪುಗಳನ್ನಿಟ್ಟುಕೊಂಡು ಹೊರಬಂದಳು. ಹರೀಶ ಎದ್ದು ಬಂದು ಟ್ರೇಯನ್ನು ತೆಗೆದುಕೊಂಡು 'ಥ್ಯಾಂಕ್ಸ್' ಎಂದಿದ್ದ. ಸುಮತಿ ಮತ್ತೆ ಅಡಿಗೆ ಮನೆಗೇ ಬಂದು ಅಲ್ಲಿದ್ದ ಮಣೆಯ ಮೇಲೆ ಕುಳಿತು, ನಿಧಾನವಾಗಿ ಕಾಫಿಯನ್ನು ಹೀರತೊಡಗಿದಳು. ತಾನು ಈವರೆಗೆ ನೋಡದಿದ್ದ ಸಂಕೇತನನ್ನು ನೋಡಿದ್ದಳು. ಸುಮಧುರ ಭಾವನೆಗಳು ಎದ್ದಿದ್ದವು. ಮನದಲ್ಲಿ ಸುಂದರ ಅಲೆಗಳು ಚಿಮ್ಮಿದವು.

ಇದ್ದಕ್ಕಿದ್ದಂತೆ ಮಾತುಗಳು ಕೇಳಿಸದಾದವು. ಜಾನಕಿ ಅಡಿಗೆ ಮನೆಯೊಳಕ್ಕೆ ಬಂದಿದ್ದಳು ''ಎಲ್ಲಾ ತಿರುಗಾಡಿ ಬರ್ತೀವಿ ಅಂತ ಹೊರಕ್ಕೆ ಹೋಗಿವೆ. ಡಿನ್ನರ್ ಹೊತ್ತಿಗೆ ಮತ್ತೆ ಹಾಜರಾಗುತ್ತವೆ... ಬೇಗ ಬೇಗ ಅಡಿಗೆ ಮಾಡಬೇಕು. ನನ್ನ ಕೈ ಕಾಲುಗಳೇ ನಡುಗುತ್ತಾ ಇವೆ...''

''ನೀವು ರೆಸ್ಟ್ ತಗೊಳ್ಳಿ ಆಂಟೀ... ನಾನು ರಾತ್ರಿಯ ಅಡಿಗೆ ಮಾಡ್ತೀನಿ. ಏನು ತರಕಾರಿ ಮಾಡಲಿ ಹೇಳಿ...''

"ಆರೇಳು ಜನಕ್ಕೆ ಅಡಿಗೆ ಮಾಡೋಕೆ ನಿನ್ನ ಕೈಲಿ ಆಗುತ್ತಾ ಸುಮತೀ..."

"ನಾನೂ ದೊಡ್ಡ ಕುಟುಂಬದಲ್ಲಿ ಬೆಳೆದವಳು, ಆಗ ಈಗ ಮಾಡಿ ಅಭ್ಯಾಸವಿದೆ. ಇಲ್ಲಿ ನಿಮ್ಮ ಮನೆಗೆ ಬಂದ ಮೇಲಂತೂ ಸೋಮಾರಿಯಾಗಿ ಬಿಟ್ಟಿದೀನಿ"

"ಒಳ್ಳೇದೇ ಆಯ್ತು... ನಾನಂತೂ ಒಂದು ದಿನವಾದರೂ, ನಿಮ್ಮ ಮನೆಯವರ ಬಗ್ಗೆ ಕೇಳಿದವಳಲ್ಲ... ಸದಾ ನನ್ನ ಪುರಾಣವನ್ನೇ ಹೇಳಿ ಹೇಳಿ ನಿನಗೆ ಬೋರ್ ಮಾಡಿದೀನಿ" ಸುಮತಿ ಸುಮ್ಮನೇ ನಕ್ಕಳು.

"ಚಪಾತಿ ಪಲ್ಯ ಮಾಡೋಣ್ವಾ ?"

"ಒಂದೊಂದೂ, ಐದಾರು ಚಪಾತಿಗಳನ್ನು ತಿನ್ನುತ್ವೆ... ಎರಡು ಬಗೆಯ ಪಲ್ಯವಾದರೂ ಬೇಕು... ಏನೂ ಬೇಡ. ಸುಲಭವಾಗಿ ಆಗೋ ಅಡಿಗೆ ಮಾಡಿದ್ರಾಯ್ತು. ಅನ್ನ, ಸಾರು, ಪಲ್ಯ ಸಾಕು. ಮೊಸರು, ಉಪ್ಪಿನಕಾಯಿ ಇದ್ದೇ ಇದೆ. ಸಂಕೂಗೆ ಸಾರು ಅಂತಂದ್ರೆ ಬಹಳ ಇಷ್ಟ.. ಅಲ್ಲದೇ ರಾತ್ರಿಯ ಊಟ ಹೆವಿಯಾಗಬಾರದು. ಲೈಟ್ ಆಗಿರಬೇಕು...?"

"ಜಗ್ಗೂ ಎಲ್ಲಿ ಆಂಟಿ ? ಕಾಣ್ತಾನೆ ಇಲ್ಲ," ಇದ್ದಕ್ಕಿದ್ದಂತೆ ಕೇಳಿದಳು.

"ಅವನು ಮಲಗಿದಾನೆ."

"ಮತ್ತೆ ಅವನಿಗೆ ಊಟ ?"

"ಮಧ್ಯಾಹ್ನ ಸಂಕೇತ ಏರ್‌ಪೋರ್ಟಿನಿಂದ ಫೋನು ಮಾಡಿದ, ನಾನು ಬರ್ತಾ ಇದೀನಿ ಅಂತ... ತಕ್ಷಣವೇ ನಾನು ಜಗ್ಗೂಗೆ ಗಡದ್ದಾಗಿ ಹೊಟ್ಟೆ ತುಂಬಾ ತಿನ್ನಿಸಿ, ನಿದ್ದೆ ಮಾತ್ರೆ ಕೊಟ್ಟು ಮಲಗಿಸಿದೀನಿ... ಇಲ್ಲದೇ ಇದ್ದಿದ್ರೆ..."

"ಇದು ತಪ್ಪಲ್ವಾ ಆಂಟೀ ?"

"ತಪ್ಪೋ ನೆಪ್ಪೋ ನನಗೆ ತಿಳಿಯದು.... ಸಂಕೇತ ಅಪರೂಪಕ್ಕೆ ಬಂದಿದಾನೆ. ಬರ್ತಿದ್ದ ಹಾಗೇ, ಜಗ್ಗು ಏನಾದ್ರೂ ರಂಪ ರಾದ್ಧಾಂತ ಮಾಡಿದರೆ, ಅವನು ತಕ್ಷಣವೇ ಹೊರಟು ಹೋಗ್ತಾನೆ. ಅವನೂ ನನ್ನ ಮಗನೇ... ಅವನ ಖುಷಿಯೂ ನನಗೆ ಮುಖ್ಯ. ಸದಾ ಜಗ್ಗೂ ಜಗ್ಗೂ ಅಂತ ಅವನ ಸೇವೆಯೇ ಆಗಿ ಹೋಗಿದೆ ನನಗೆ... ಇವನು ಊರಿಗೆ ಬಂದಿರುವಾಗಲಾದರೂ, ಇವನ ಮೇಲೆ ಒಂದಿಷ್ಟು ಗಮನ ಹರಿಸೋಣ ಅಂತ..."

ಈಗ ಆಂಟಿಯೊಂದಿಗೆ ವಾದ ಮಾಡುವುದು ಬೇಡವೆಂದುಕೊಂಡಳು.

ಅಡಿಗೆ ಎಲ್ಲಾ ಮಾಡಿ ಮುಗಿಸಿಯಾಗಿತ್ತು. ಆದರೂ ಅವರುಗಳ್ಯಾರೂ ಮನೆಗೆ ಬಂದಿರಲಿಲ್ಲ. ಜಾನಕಿ ಆಗಾಗ್ಗೆ ಗಡಿಯಾರದ ಕಡೆ ನೋಡುತ್ತಿದ್ದಳು. ಮೇಲೆ ಮೇಲೆ ಆಕಳಿಕೆ ಬರಲು ಪ್ರಾರಂಭಿಸಿದಾಗ ಗೊಣಗಿದಳು.

"ಇವನು ಯಾವಾಗ್ಲೂ ಹೀಗೇನೇ... ತಾನು ಯಾವಾಗ ಬರ್ತೀನಿ, ತನ್ನ ಪ್ರೋಗ್ರಾಂ ಏನೂಂತ ನನಗೆ ಒಂದು ವಿಷಯವನ್ನು ತಿಳಿಸೋದೇ ಇಲ್ಲ. ಫ್ರೆಂಡ್ಸ್‌ಗಾದ್ರೆ ಎಲ್ಲಾ ತಿಳಿಸಿರ್ತಾನೆ. ಇವತ್ತು ಹೀಗೆ ದಿಢೀರ್ ಅಂತ ಬರ್ತಾನೆ ಅಂತ ಸಹ ನನಗೆ ಗೊತ್ತಿರಲಿಲ್ಲ. ಗೊತ್ತಿದ್ದಿದ್ರೆ ಜಗ್ಗೂನ ಯಾವುದಾದ್ರೂ 'ಹೋಂ'ಗಾದ್ರೂ ಸೇರಿಸಬಹುದಾಗಿತ್ತು... ನಂಗಂತೂ ಏನೂ ಹೇಳೋದೇ ಇಲ್ಲ... ಎಲ್ಲಿ ತಿರುಗ್ತಾ ಇದಾರೋ ? ನಾವುಗಳು ಕಾಯ್ತಾ ಇರ್ತೀವಿ ಅನ್ನೋ ಚಿಂತೆನಾದ್ರೂ ಬೇಡ್ವಾ ?"

"ನೀವು ಊಟ ಮಾಡಿ ಮಲಗಿರಿ ಆಂಟೀ... ಅವರುಗಳು ಬಂದ ಮೇಲೆ, ನಾನೇ ನಿಮ್ಮನ್ನು ಎಬ್ಬಿಸ್ತೀನಿ"

"ನನಗೂ ವಯಸ್ಸಾಯ್ತು. ಲೇಟಾಗಿ ಊಟ ಮಾಡಿದ್ರೆ ಜೀರ್ಣವಾಗುವುದಿಲ್ಲ. ನಿದ್ದೆ ಕೆಟ್ಟರೆ ಮೈಗಾಗುಲ್ಲ... ನಾನೇನು ಮಾಡಲಿ ?" ಎನ್ನುತ್ತಾ ತಾನು ಊಟವನ್ನು ಮುಗಿಸಿ," ಮಲಗಿರ್ತೀನಿ, ಅವರುಗಳು ಬಂದ ಕೂಡಲೇ ಎಬ್ಬಿಸು" ಎಂದು ಹೇಳಿ ಹೋಗಿ ಮಲಗಿದವಳಿಗೆ, ಕೆಲವೇ ನಿಮಿಷಗಳಲ್ಲಿ ಗಾಢವಾದ ನಿದ್ದೆ ಆವರಿಸಿತ್ತು. ಸುಮತಿ ಕೈಯಲ್ಲಿ ಒಂದು ಪುಸ್ತಕವನ್ನು ಹಿಡಿದು, ಸೋಫಾದ ಮೇಲೆ ಕುಳಿತಳು. ಕೆಲವೇ ಸಮಯದ ನಂತರ, ಗೇಟು ತೆಗೆದ ಸದ್ದಾಗಿತ್ತು. ಎದ್ದು ಮುಂಬಾಗಿಲನ್ನು ತೆಗೆದಳು. ಎದುರಿಗೆ ಸಂಕೇತ ನಿಂತಿದ್ದ, ಅವನ ಹಿಂದೆ ಗೆಳೆಯರು.

"ಸಾರಿ ಮೇಡಂ... ನೀವು ...?" ಎಂದ. ಗಲಿಬಿಲಿಗೊಂಡು

"ಆಂಟಿ ಮಲಗಿದಾರೆ. ಎಬ್ಬಿಸ್ತೀನಿ" ಎಂದಳು.

"ಪ್ಲೀಸ್ ಎಬ್ಬಿಸಬೇಡಿ... ನಾವುಗಳೇ ಬಡಿಸಿಕೊಂಡು ಊಟ ಮಾಡ್ತೀವಿ. ನೀವು ಹೋಗಿ ಮಲಕ್ಕೊಳ್ಳಿ..."

"ನಿಮ್ಮ ಊಟ ಆಯ್ತಾ ಮೇಡಂ ...?" ಹರೀಶ ಪ್ರಶ್ನಿಸಿದ್ದ. ಸುಮತಿ ಅವನಿಗೆ ಉತ್ತರಿಸದೇ ಸೀದಾ ಅಡಿಗೆ ಮನೆಗೆ ಬಂದಳು. ತನ್ನ ತಟ್ಟೆಗೆ ಒಂದಿಷ್ಟು ಅನ್ನ ಮಜ್ಜಿಗೆ, ಪಲ್ಯವನ್ನು ಬಡಿಸಿಕೊಂಡು, ಉಳಿದುದೆಲ್ಲವನ್ನು ತಂದು ಡೈನಿಂಗ್ ಟೇಬಲ್ ಮೇಲಿಟ್ಟಳು. ತಟ್ಟೆಗಳನ್ನು, ನೀರಿನ ಲೋಟಗಳನ್ನು ತಂದಿಟ್ಟಳು.

"ಮೇಡಂ ನೀವು ಬಡಿಸ್ತೀರಾ ?" ಹರೀಶ ಆಸೆಕಣ್ಣುಗಳಿಂದ ನೋಡುತ್ತಾ ಕೇಳಿದ.

"ಶ್... ಇವರು, ಮಮ್ಮಿಯ ಪೇಯಿಂಗ್ ಗೆಸ್ಟ್... ಅವರಿಗೇಕೆ ತೊಂದರೆ ! ಸೆಲ್ಫ್ ಸರ್ವೀಸ್... ನಾವೇ ಬಡಿಸಿಕೊಂಡ್ರಾಯ್ತು." ಎಲ್ಲರೂ ಡೈನಿಂಗ್ ಟೇಬಲ್ಲಿನ ಸುತ್ತ ಕುಳಿತರು. ಪಾತ್ರೆಗಳ ಮುಚ್ಚಳಗಳನ್ನು ತೆಗೆದು ಮುಸಿ ಮುಸಿ ನೋಡಿ, ಆಹಾ... ಓಹೋ ಎಂದು ಉದ್ಗಾರವನ್ನು ತೆಗೆಯುತ್ತಾ ಊಟಕ್ಕೆ ಸಿದ್ಧರಾದರು. ಸುಮತಿ ಅಡಿಗೆ ಮನೆಯಲ್ಲಿಯೇ ಮಜ್ಜಿಗೆಯ ಅನ್ನವನ್ನು ಗಬಗಬನೆ ತಿಂದಳು.

ಮಾತುಕತೆ ಹರಟೆ, ನಗುವಿನೊಂದಿಗೆ, ಊಟದ ಕಾರ್ಯಕ್ರಮ, ಈಗಲೇ ಮುಗಿಯುವಂತೆ ಕಾಣುವುದಿಲ್ಲ ಎಂದುಕೊಂಡು, ತನ್ನ ಪಾಡಿಗೆ ತಾನು ತನ್ನ ರೂಮನ್ನು ಸೇರಿಕೊಂಡಳು. ಎಷ್ಟೋ ಹೊತ್ತಿನ ನಂತರ, ಪಕ್ಕದ ರೂಮಿನ ಬಾಗಿಲನ್ನು ತೆಗೆದ ಸದ್ದು ಕೇಳಿತು ಎಲ್ರೂ ಹೋದ್ರೇನೋ... ಇವನು ಮಲಗಲು ತನ್ನ ರೂಮಿಗೆ ಬಂದನೇನೋ ಎಂದುಕೊಂಡು ಮಗ್ಗುಲು ಬದಲಾಯಿಸಿದಳು. ಮರುಗಳಿಗೆಯಲ್ಲಿಯೇ ಯಾರೋ ಬಾಗಿಲನ್ನು ಬೆರಳಿನಿಂದ ಮೆಲ್ಲಗೆ ಬಡಿದಂತೆ ಕೇಳಿಸಿತು. ಹೌದೋ ಅಲ್ಲವೋ ಎಂಬ ಅನುಮಾನ ಬಂದರೂ, ಮತ್ತೊಮ್ಮೆ ಬಡಿತ ಕೇಳಿ ಬಂದಾಗ ಎದ್ದು ಬಾಗಿಲನ್ನು ತೆರೆದಳು. ಹೊರಬಾಗಿಲಿನಲ್ಲಿ ಸಂಕು ನಿಂತಿದ್ದ ಅವನ ಕೈಯಲ್ಲಿ ಒಂದೆರಡು ಪ್ಲಾಸ್ಟಿಕ್ ಕವರುಗಳಿದ್ದವು.

''ಸಾರಿ ಮೇಡಂ... ಮಲಗಿದ್ರಾ ?... ಎಬ್ಬಿಸಿ ಬಿಟ್ಟೆ''

''ಪರವಾಗಿಲ್ಲ... ಏನು ಬೇಕಾಗಿತ್ತು ?''

''ನಿಮ್ಮ ಊಟ ಆಯ್ತೋ ಇಲ್ಲವೋ ತಿಳಿಯಲಿಲ್ಲ. ಮಮ್ಮೀನ ಕೂಗಿದೆ ಅವಳೂ ಏಳಲಿಲ್ಲ. ಅಲ್ಲಿ ಏನೂ ಉಳಿದಿಲ್ಲ. ಅದಕ್ಕೇ...''

''ಪರವಾಗಿಲ್ಲ ಬಿಡಿ... ನನ್ನ ಊಟ ಆಯ್ತು...''

''ಥ್ಯಾಂಕ್ಸ್... ನಮಗೋಸ್ಕರ ತೊಂದರೆ ತಗೊಂಡ್ರಿ... ತಗೊಳ್ಳಿ ಇದು ಚಾಕ್ಲೇಟ್ಸ್'' ಎನ್ನುತ್ತಾ ಪ್ಯಾಕೆಟ್ಟನ್ನು ಕೊಟ್ಟ'' ಕೈಗೆ ತೆಗೆದುಕೊಂಡಳು.

''ನಂಗ್ಯಾಕ್ರೀ ಚಾಕ್ಲೆಟ್ಸ್... ನಾನೇನು ಚಿಕ್ಕ ಮಗೂನ...?'' ಮುಗುಳ್ನಕ್ಕಳು

''ಚಿಕ್ಕ ಮಕ್ಕಳೇ ಚಾಕ್ಲೆಟ್ಸ್ ತಿನ್ನಬೇಕೂಂತ ಏನಿಲ್ಲ. ಅಮೆರಿಕಾದಲ್ಲಿ ತುಂಬಾ ಒಳ್ಳೊಳ್ಳೆಯ ಬೇರೆ ಬೇರೆ ತರಹದ ಚಾಕ್ಲೆಟ್ಸ್‌ಗಳು ಸಿಗುತ್ತವೆ. ಇಂಡಿಯಾಕ್ಕೆ ಬರೋರಲ್ಲ ತುಂಬಾ ತುಂಬಾ ತರ್ತಾರೆ... ನಾನು ನನ್ನ ಸ್ನೇಹಿತರಿಗೋಸ್ಕರ ಅಂತ ತಂದಿದ್ದೆ. ನೀವು ಊಟಮಾಡಿಲ್ಲವೇನೋ ಅಂತನ್ನಿಸ್ತು...'' ಅವನೂ ಕಿರುನಗೆ ನಕ್ಕ

''ಥ್ಯಾಂಕ್ಸ್... ಆದರೆ ರಾತ್ರಿಯ ಹೊತತು ಚಾಕ್ಲೆಟ್ಸ್ ತಿನ್ನೋದು ಒಳ್ಳೇದಲ್ಲ''

''ಬೆಳಿಗ್ಗೆ ತಿನ್ನಿ..'' ಎಂದು ಮುಗುಳ್ನಕ್ಕು. ಓ.ಕೇ. ಮೇಡಂ ಗುಡ್‌ನೈಟ್'' ಅಂತಂದು ತನ್ನ ರೂಮಿಗೆ ಹೊರಟು ಹೋದ. ಸುಮತಿ ಬಾಗಿಲನ್ನು ಹಾಕಿ, ಚಾಕ್ಲೇಟ್ಸ್‌ಗಳನ್ನು ಟೇಬಲ್ಲಿನ ಮೇಲಿಟ್ಟಳು. ನಿದ್ದೆ ಬಂದು ಸೆಳೆಯುವವರೆಗೂ, ಅವಳ ಮನಸ್ಸು ಅವನ ಸುತ್ತ ಮುತ್ತವೇ ಸುತ್ತುತ್ತಿತ್ತು. ಅವನೆಡೆಗೆ ಆಕರ್ಷಿತಳಾಗಿದ್ದಳು.

ಬೆಳಿಗ್ಗೆ ಕೆಲಸದ ರಾಜಮ್ಮ ಬಂದು ಬೆಲ್ ಮಾಡಿದಾಗ ಎಚ್ಚರವಾಗಿತ್ತು. ಕೆಳಗಿನಿಂದ ಎತ್ತರದ ಧ್ವನಿಯಲ್ಲಿ ಅವಳು ಮಾತನಾಡುತ್ತಿದ್ದಾಗ, ಕೆಳಗಿಳಿದು ಬಂದಳು.

''ಸಂಕಪ್ನೋರು ಬಂದವ್ರೇ... ನಂಗೇಳ್ಲೇ ಇಲ್ಲ ನೀವು ?'' ಜಾನಕಿಯನ್ನು ಆಕ್ಷೇಪಿಸುತ್ತಿದ್ದಳು.

''ಸರಿ ಸರಿ... ನಂಗೇ ಗೊತ್ತಿರಲಿಲ್ಲ... ನಿಂಗೇನು ಹೇಳೋದು ?''

''ರಾತ್ರಿ ಬಾರಿ ಊಟ ಮಾಡಿದಂಗೈತೆ'' ಎನ್ನುತ್ತಾ ಟೇಬಲ್ ಮೇಲಿದ್ದ ತಟ್ಟೆ ಬಟ್ಟಲು, ಪಾತ್ರೆಗಳನ್ನು ತೆಗೆದು, ತೊಳೆಯಲು ಪ್ರಾರಂಭಿಸಿದಳು.

''ಮೆಲ್ಲಗೇ... ಮೆಲ್ಲಗೇ... ಅದೇನು ಅಷ್ಟು ಸದ್ದು ಮಾಡ್ತಿದೀಯ ಹೋಟೆಲ್ಲಿನವರ ತರಹ... ಮಲಗಿರೋರೆಲ್ಲ ಬೈಕೊಂಡು ಏಳ್ತಾರೆ...''

''ನಾನೇನು ಮಾಡ್ಲೀ ? ಪಾತ್ರೆಯೆಲ್ಲಾ ಒಣಗಿದೆ. ರಾತ್ರೀನೆ ಸ್ವಲ್ಪ ನೀರು ಆಕಿಟ್ವಿದ್ರೆ... ಅಂಗೇ ಎಲ್ಲಾ ಟೇಬಲ್ ಮೇಲೆ ಬಿದ್ದಿದ್ವಲ್ಲಾ''

''ಏನಾದ್ರೂ ಮಾಡ್ಕೋ... ನಿನ್ನ ಬಾಯಿಯೂ ಜೋರು...'' ಎಂದು ಗೊಣಗುತ್ತಾ ಜಾನಕಿ ಇತ್ತ ತಿರುಗಿದಳು ಸುಮತಿಯನ್ನು ಕಂಡಳು.

''ರಾತ್ರಿ ನೀನೇ ಎಲ್ರಿಗೂ ಬಡಿಸಿದ್ಯಾ ?''

''ಇಲ್ಲ, ಅವರುಗಳೇ ಬಡಿಸಿಕೊಂಡ್ರು.''

''ಒಳ್ಳೇದೇ ಆಯ್ತು. ನನ್ನನ್ಯಾಕೆ ಎಬ್ಬಿಸಲಿಲ್ಲ?''

''ಬೇಡಾಂತಂದ್ರು ಸುಮ್ಮನಾಗಿಬಿಟ್ಟೆ...''

''ರಾತ್ರಿ, ನಿನಗೇನಾದ್ರೂ ಮಿಕ್ಕಿತ್ತೋ ಇಲ್ಲವೋ... ಎಲ್ಲಾ ಬಕಾಸುರನ ವಂಶದೋವು. ಒಂದು ಕಾಳು ಅನ್ನ ಮಿಗಿಸಿಲ್ಲ, ಒಂದು ಹನಿ ಸಾರು ಉಳಿಸಿಲ್ಲ''

''ಏನ್ ಮಮ್ಮೀ ನೀನೂ... ನನ್ನ ಫ್ರೆಂಡ್ಸ್‌ಗಳಿಗೆ ಅವಮಾನ ಮಾಡ್ತಾ ಇದೀಯ ನೀನು ? ಬಕಾಸುರ ಗಿಕಾಸುರ ಅಂತ ಅವರುಗಳನ್ನು ಅಂದ್ರೆ, ನಾನು ಹೋಗಿ ಅಲ್ಲಿ ಅವರುಗಳ ಜೊತೇನೇ ಇದ್ದು ಬಿಡ್ತೀನಿ.''

''ಓ... ನೀನೂ ಎದ್ಯಾ ? ಕಾಫಿ ಕೊಡ್ಲಾ ?'' ಮಗನ ಕಡೆ ತಿರುಗಿ ಕೇಳಿದಳು ಏಳದೇ ಇದ್ದರೆ ಬಿಡ್ತೀರಾ ? ಅದೆಷ್ಟು ಗಲಾಟೆ ಮಾಡ್ತೀರಿ ! ಒಳ್ಳೆ ತಮಟೆ ಹೊಡೆದ ಹಾಗೆ ಮಾತುಗಳು ಕೇಳಿಸುತ್ತೆ''

''ನಾಸಲ್ಲಪ್ಪಾ... ರಾಜಮ್ಮ ಅವಳ ದನಿಯಂತೂ ವಿಪರೀತ ಜೋರು...'' ನೀನು ಬಂದಿದೀಯ ಅಂತ ಗೊತ್ತಾಯ್ತು... ಅದಕ್ಕೇ ಅಷ್ಟು ಬಾಯಿ...''

"ನೀವುಗಳೆಲ್ಲ ಹಾಗೇ ಇದೀರಿ. ಏನೂ ಬದಲಾಗಿಲ್ಲ. ಹೂಂ ಕಾಫಿ ಕೊಡು" ಎನ್ನುತ್ತಾ ಟೇಬಲ್ ಬಳಿ ಕುಳಿತ. ಸುಮತಿ ಅಡಿಗೆ ಮನೆ ಹೊಕ್ಕಿದ್ದಳು.

"ಇವತ್ತಿನ ನ್ಯೂಸ್ ಪೇಪರ್ ಇದ್ರೆ ಕೊಡ್ತೀಯಾ ?" ಜಾನಕಿ ಸುಮತಿಯ ಕಡೆ ನೋಡಿ ಕಾಫಿಯೊಂದಿಗೆ ಬಂದಳು. ಕಾಫಿಯ ಬಟ್ಟಲನ್ನು ಅವನ ಮುಂದಿಟ್ಟು, ರಾಜಮ್ಮನನ್ನು ಕರೆದಳು "ಹೋಗು ಈಗಲೇ ಪಕ್ಕದ ಬೀಡ ಅಂಗಡಿಗೆ ಹೋಗಿ ಇವತ್ತಿನ ಇಂಗ್ಲಿಷ್ ಪೇಪರನ್ನು ತಗೊಂಡು ಬಾ..." ಎನ್ನುತ್ತಾ ಚಿಲ್ಲರೆ ಹಣವನ್ನು ಕೊಟ್ಟಳು.

"ಏನ್ ಸಂಕಪ್ಪಾ... ಎಂಗಿದೀರಿ ? ಯಾವಾಗ ಬಂದ್ರಿ ?" ರಾಜಮ್ಮ ಹಲ್ಲು ಕಿರಿದಾಗ, ಸಂಕೇತ ಕಣ್ಣುಗಳನ್ನು ಕಿರಿದು ಮಾಡಿದ.

"ನೀನು ಇನ್ನು ಕೆಲಸಕ್ಕೆ ಬರ್ತಾ ಇದೀಯ ? ರಿಟೈರ್ ಆದ್ಯೇನೋ ಅಂತ ಅಂದ್ಕೊಂಡೆ..."

"ರಿಟೈರು, ಪೆಂಚನ್ನು ನಮ್ಮಂತೋರು ಏನು ಬಲ್ರು ? ... ಎಷ್ಟು ದಿನ ಇರ್ತೀರಿ ಇಲ್ಲಿ?"

"ನಾನಿನ್ನೂ ಬಂದು ಒಂದು ದಿನ ಸಹ ಕಳೆದಿಲ್ಲ..." ಗೊಣಗಿದ.

"ನೀನು ಹೋಗು ರಾಜಮ್ಮ. ಮಾತಾಡ್ತಾ ನಿಂತ್ಕೋ ಬೇಡ. ಹೊತ್ತಾಗುತ್ತೆ..." ರಾಜಮ್ಮ ಸೀರೆಯ ಸೆರಗಿಗೆ ಕೈ ಒರೆಸುತ್ತಾ ನಡೆದಳು.

"ನಿಂಗೆ ಏನು ತಿಂಡಿ ಮಾಡ್ಲೋ ಸಂಕು... ನಿನಗೇನು ಇಷ್ಟ ? ಏನು ಬೇಕು ಹೇಳು ಅದನ್ನೇ ಮಾಡ್ತೀನಿ"

"ನನ್ನ ಇಷ್ಟದ ತಿಂಡಿ ಯಾವುದು ಅಂತ ನಿನಗೇ ಗೊತ್ತು... ಪ್ಲೀಸ್... ಎಲ್ಲರ ಎದುರಿಗೂ ಸಂಕೂ ಪಿಂಕೂ ಅಂತ ನನ್ನನ್ನ ಕರೀಬೇಡ. ನನಗಿಷ್ಟವಾಗುಲ್ಲ."

"ಏನು ಮಾಡ್ಲೋ ಅದೇ ಅಭ್ಯಾಸವಾಗಿ ಹೋಗಿದೆ. ಅಲ್ಲದೇ ಸುಮತಿ ಏನೂ ಹೊರಗಿನವಳಲ್ಲ. ಈ ಮನೆಯವಳೇ" ಸುಮತಿಯ ದೇಹ ಬಿಸಿಯಾಯಿತು ಕಿವಿಗಳು ಕೆಂಪಾದವು. ಸಂಕೇತ ಅಸಹನೆಯಿಂದ ರೇಗಿದ.

"ನನ್ನ ಫ್ರೆಂಡ್ಸ್ ಎಲ್ಲಾ ಹಾಸ್ಯ ಮಾಡ್ತಾರೆ. ಅಷ್ಟು ಕಾಮನ್ ಸೆನ್ಸ್ ಬೇಡ್ವಾ ನಿನಗೆ..." ಜಾನಕಿ ಪೆಚ್ಚಾದಳು. ಅಷ್ಟರಲ್ಲಿ ರಾಜಮ್ಮ ಆ ದಿನದ ಪೇಪರನ್ನು ತಂದಳು. ಅವನು ಪೇಪರ್ರಿನ ಮೇಲೆ ಕಣ್ಣಾಡಿಸಿದ. ಜಾನಕಿ ಮಾತಾಡದೆ, ಬೆಳಗಿನ ತಿಂಡಿಯ ತಯಾರಿ ನಡೆಸಿದಾಗ, ಸುಮತಿ ಅವಳಿಗೆ ಸಹಾಯ ಮಾಡಿದಳು. ಸುಮತಿ ಹೊರ ಬಂದಾಗಲೂ, ಸಂಕೇತ ನ್ಯೂಸ್ ಪೇಪರ್ರಿನಿಂದ ಕಣ್ಣುಗ್ಗಳನ್ನು ಇತ್ತ ಸರಿಸಿರಲಿಲ್ಲ.

"ನಿತ್ಯದಂತೆ, ಕಾಲೇಜಿಗೆ ಹೊರಡುವ ಸಮಯ ಬಂದಾಗ, ರೆಡಿಯಾಗಿ ಕೆಳಗಿಳಿದು ಬಂದಳು. ಅವನಿನ್ನೂ ನ್ಯೂಸ್ ಪೇಪರ್ರನ್ನು ಕೈಲಿ ಹಿಡಿದು, ಮೂರನೆಯ ಸುತ್ತಿನ ಕಾಫಿಯನ್ನು

ಕುಡಿಯುತ್ತಿದ್ದ. ಸುಮತಿ ತನಗೆಂದು ತಿಂಡಿಯನ್ನು ಹಾಕಿಕೊಂಡಳು.

''ಮೂರು ಸಾರಿ ಕಾಫಿಯಾಯ್ತು. ತಿಂಡಿ ತಿಂತಿಯೇನೋ ಅಂತಂದ್ರೆ ಬೇಡಾಂತಾನೆ. ನೀನೇ ಕೇಳು.'' ಸುಮತಿ ಇಕ್ಕಟ್ಟಿಗೆ ಸಿಕ್ಕಿ ಬಿದ್ದಳು ಆದರೂ ವಿಧಿ ಇಲ್ಲದೇ, ತನ್ನ ತಿಂಡಿಯ ತಟ್ಟೆಯನ್ನು ಟೇಬಲ್ಲಿನ ಮೇಲಿಟ್ಟು, ಕೇಳಿದಳು.

''ನೀವೂ ತಿಂಡಿ ತಗೋತೀರಾ... ?'' ಅವನು ಪೇಪರ್ರಿನಿಂದ ಇತ್ತ ಮುಖ ಸರಿಸಿ, ಇವಳ ಕಡೆ ನೋಡಿದ. ಏನನ್ನಿಸಿತೋ... ಏನೋ ಓ... ಯೆಸ್'' ಎಂದ.

''ಸುಮತಿ ಬಿಸಿ ಬಿಸಿಯಾದ, ಘಮಘಮಿಸುವ ಉಪ್ಪಿಟ್ಟನ್ನು ಪ್ಲೇಟ್‌ಗೆ ಹಾಕಿ ತಂದಿತ್ತಳು... ''ಥ್ಯಾಂಕ್ಸ್'' ಎಂದು ಹೇಳಿ, ಸ್ಪೂನ್ ಪ್ಲೀಸ್'' ಎಂದು ನಕ್ಕ. ಅವಳು ಒಳಗೆ ಹೋಗಿ ಚಮಚವನ್ನು ತಂದುಕೊಟ್ಟಳು. ಒಂದು ಚಮಚ ಉಪ್ಪಿಟ್ಟು ಬಾಯಿಗೆ ಹೋಯ್ತೋ ಇಲ್ಲವೋ... ಹಾ... ಹಾ... ಎನ್ನಲು ಪ್ರಾರಂಭಿಸಿದ. ಜೊತೆಗೇ ಬಿಕ್ಕಳಿಕೆ ಜಾನಕಿ ನೀರಿನ ಲೋಟವನ್ನು ತಂದಿತ್ತಳು.

''ಅದ್ಯಾಕೆ ಇಷ್ಟು ಖಾರವಾಗಿ ಮಾಡಿದೀಯ ? ನನ್ನ ಮೇಲಿನ ಸಿಟ್ಟನ್ನೆಲ್ಲಾ ಇದರ ಮೇಲೆ ಕಾರಿರುವ ಹಾಗಿದೆ... ನಿಮಗೆ ಖಾರ ಅಂತ ಅನ್ನಿಸ್ತಿಲ್ವಾ ಮೇಡಂ ?'' ಸುಮತಿ ಮುಗುಳ್ನಕ್ಕಳು. ಅವನಿಗೆ ಎಲ್ಲಾ ಮರೆತು ಹೋದಂತಾಯಿತು.

''ತಡೀ, ಮೆಣಸಿನ ಕಾಯಿ ಚೂರುಗಳನ್ನು ತೆಗೆದು ಬಿಡ್ತೀನಿ. ನೀನೆಲ್ಲೋ ಅದನ್ನೇ ತಿಂದಿದೀಯ'' ಜಾನಕಿ ಮೆಣಸಿನ ಕಾಯಿಯ ಚೂರುಗಳನ್ನು ಆರಿಸಿ ತೆಗೆದಳು.

ಅವನು ಆಗಾಗ್ಗೆ ಸುಮತಿಯ ಕಡೆ ನೋಡುತ್ತಾ ಉಪ್ಪಿಟ್ಟನ್ನು ತಿಂದು ಮುಗಿಸಿದ. ಕಾದು ಆರಿಸಿದ ನೀರು ತಾನೇ ...? ಎನ್ನುತ್ತಾ ಗಟಗಟನೆ ನೀರನ್ನು ಕುಡಿದ. ಸುಮತಿ ತನ್ನ ಪಾಡಿಗೆ ತಾನು, ತಿಂಡಿ ಕಾಫಿ ಮುಗಿಸಿ, ಲಂಚ್ ಬಾಕ್ಸನ್ನು ಎತ್ತಿಕೊಂಡು ಕಾಲೇಜಿಗೆ ನಡೆದಳು.

ಸಂಕೇತ ಆಲಸ್ಯವನ್ನು ಬಿಟ್ಟು ತಾನೂ ಎದ್ದ. ಷೇವ್ ಮಾಡಿಕೊಂಡು, ಬಿಸಿನೀರಿನ ಸ್ನಾನ ಮಾಡಿ ಬರುತ್ತಿದ್ದಂತೆಯೇ ಸ್ನೇಹಿತರ ದಂಡು ಬಂದಿತ್ತು. ಹರೀಶ ಒಳಬಂದವನೇ ಮನೆಯೆಲ್ಲೆಲ್ಲಾ ಕಣ್ಣು ಹಾಯಿಸಿದ್ದ. ಸುಮತಿ ಎಲ್ಲಿಯೂ ಕಾಣದಿದ್ದಾಗ, ಸಂಕೇತನನ್ನೇ ಕೇಳಿದ್ದ.

''ಚಿತ್ರಾಂಗದೆ... ಎಲ್ಲಿ? ಕಾಣ್ತಾ ಇಲ್ಲ...''

''ಚಿತ್ರಾಂಗದೆ...? ಆ ಹೆಸರಿನವರು ಯಾರೂ ಇಲ್ಲ.. ಇಲ್ಲಿ...''

''ಅದೇ ಕಣೋ... ನಿಮ್ಮಮ್ಮನ ಪೇಯಿಂಗ್ ಗೆಸ್ಟ್... ಎಲ್ಲಿ ಅಂದೆ...''

''ಅವರು ಹೆಸರು ಸುಮತೀ ಅಂತ ಚಿತ್ರಾಂಗದೆ ಅಲ್ಲ...''

"ನನಗೂ ಗೊತ್ತು. ಆದರೆ ಈ ಹೆಸರನ್ನು ಇಟ್ಟೋನು ನಾನು... ಬಬ್ರುವಾಹನ ಸಿನಿಮಾದಲ್ಲಿ ಚಿತ್ರಾಂಗದೆ ಹೀಗೇ ಅಲ್ವಾ ಇದ್ದದ್ದು..."

"ನಂಗೆ ಗೊತ್ತಿಲ್ಲಪ್ಪಾ.. ಮರೆತು ಹೋಗಿದೆ. ನೀನು ಈಗಲೂ ಮುಂಚಿನಂತೆ ಪಿಕ್ಚರ್ಸ್ ನೋಡ್ತೀಯಾ ?"

"ಈಗ ಅಷ್ಟಿಲ್ಲ. ಕಡಿಮೆ ಆಗಿದೆ. ಕೇಬಲ್ ಟಿ.ವಿ.ಯವರು ಎಷ್ಟೋ ಸಿನಿಮಾ ಹಾಕ್ತಾ ಇರ್ತಾರೆ. ಅದನ್ನೆಲ್ಲಾ ನೋಡೋಕೇ ಬಿಡುವಿಲ್ಲ... ಬರ್ತೀಯಾ ಹೊರಗೆಲ್ಲಾದ್ರೂ ಸುತ್ತಿ ಬರೋಣ..."

"ಓ...ಕೇ... ನಡೀರಿ... ಮನೇಲಿ ಕೂತು ಏನ್ಮಾಡಬೇಕು..." ಸಂಕೇತ ಸಿದ್ಧನಾದ. ಅಷ್ಟರಲ್ಲಿ ಹರೀಶ ಮನೆಯ ಮೂಲೆ ಮೂಲೆಗೂ ಕಣ್ಣು ಹಾಯಿಸಿದ್ದ.. ಅವರುಗಳೆಲ್ಲ ಅತ್ತ ಹೋದ ಕೂಡಲೇ ಜಾನಕಿ, ಗಡಬಡಿಸಿ ತನ್ನ ರೂಮಿಗೆ ಬಂದಳು. ಜಗ್ಗು ಇನ್ನು ಎದ್ದಿರಲಿಲ್ಲ. ತಿವಿದು ಎಬ್ಬಿಸಿದಳು. ನಿತ್ಯದಂತೆ, ರಾಜಮ್ಮನ ಸಹಕಾರದಿಂದ ಅವನಿಗೆ ಸ್ನಾನ ಮಾಡಿಸಿ, ಬಟ್ಟೆ ಬದಲಾಯಿಸಿ, ಅವನಿಗೂ ತಿಂಡಿ ತಿನ್ನಿಸಿದಳು.

"ಅವನಿನ್ನೂ ಬರೋದು ಎಷ್ಟು ಹೊತ್ತಿಗೋ... ಅಲ್ಲೀವರೆಗೂ ಹಾಯಾಗಿ ತಿರುಗಾಡಿಕೊಂಡಿರು ಎಂದು ಹೇಳಿ ಮನೆ ಕೆಲಸದಲ್ಲಿ ತೊಡಗಿದಳು..."

☆ ☆ ☆

"ಮಮ್ಮೀ... ಮಮ್ಮೀ..." ಸಂಕೇತ ಮೆಟ್ಟಿಲ ಬಳಿ ನಿಂತು ತಾಯಿಯನ್ನು ಕರೆದಾಗ, ಜಾನಕಿ ಕೆಳಗಿನಿಂದಲೇ ಉತ್ತರಿಸಿದಳು.

"ನನ್ನ ರೂಮಿಗೆ ಯಾರು ಬಂದಿದ್ರು ?" ಸಿಡುಕಿನಿಂದ ಕೇಳಿದಾಗ, ಸುಮತಿಯೂ ತನ್ನ ರೂಮಿನಿಂದ ಹೊರಬಂದಳು.

"ನನ್ನ ರೂಮಿಗೆ ಯಾರು ಬಂದಿದ್ರು ಅಂತ ಕೇಳ್ದೆ... ಬ್ಯಾಗ್‌ನೆಲ್ಲಾ ಕಿತ್ತಾಕಿದಾರೆ... ರೂಮು ತುಂಬಾ ಸಾಮಾನು ಬಿದ್ದಿದೆ..." ಜಾನಕಿ ಕೈಯನ್ನು ಬಾಯಿಯ ಮೇಲೆ ಇಟ್ಟುಕೊಂಡಳು. ಹೆದರಿಕೆಯಿಂದ ಎದೆ ಬಡಿತ ತೀವ್ರವಾಗಿತ್ತು.

ಸುಮತಿಗೂ ಪರಿಸ್ಥಿತಿ ಅರ್ಥವಾಗಿತ್ತು. ಇದು ಜಗ್ಗೂದೇ ಕೆಲಸ. ಎಲ್ಲಾ ಸಾಮಾನನ್ನು ಕಿತ್ತು ಹಾಕಿದಾನೆ. ಜಾನಕಿ ಮೆಟ್ಟಿಲುಗಳನ್ನು ಪ್ರಯಾಸದಿಂದ ಹತ್ತಿ ಬಂದಳು.

"ನಾನು ಎಲ್ಲಾ ಕ್ಲೀನ್ ಮಾಡಿ ಕೊಡ್ತೀನಿ ನೀನು ಕೂಗಾಡಬೇಡ..." ಸಮಾಧಾನವಾಗಿ ನುಡಿದಳು.

"ಯಾಕೆ ಕೂಗಾಡಬಾರದು ? ನಾನು ಮನೇಲಿಲ್ಲದಾಗ, ಯಾರೋ ಬಂದು ಎಲ್ಲಾ ಕೆದಕಿದ್ದಾರೆ. ಯಾರು ಅಂತ ಕೇಳಲೂ ಬಾರದಾ ?"

"ಏನೋ... ಅವನಿಗಂತೂ ತಿಳುವಳಿಕೆ ಸಾಲದು... ನಿಂಗೇ ಗೊತ್ತಲ್ಲ"

" ಯಾರು ! ಆ ದಡ್ಡಾನಾ ? ಇನ್ನು ಮನೇಲಿ ಇಟ್ಟುಕೊಂಡಿದೀಯ ಅವನನ್ನು ?" ಕರ್ಕಶವಾಗಿ ಕೇಳಿದ.

"ಅವನು ಇನ್ನೆಲ್ಲಿ ಹೋಗ್ತಾನೆ ನೀನೇ ಹೇಳು... ಅವನೂ ಈ ಮನೆಯೋನೇ ತಾನೇ ?"

"ಹೌದು ಅವನೂ ಈ ಮನೆಯೋನೇ ? ಆದರೆ ಅವನಿಂದ ತೊಂದರೆ ಏನು ಕಡಿಮೇನಾ ! ಅದಕ್ಕೇ ಹೇಳಿದ್ದು ಅವನು ಎಲ್ಲಿದ್ದನೋ ಅಲ್ಲೇ ಇರಲಿ ಅಂತ... ನನ್ನ ಮಾತನ್ನೆಲ್ಲಿ ಕೇಳ್ತೀಯಾ ನೀನು ?"

"ಅವನು ಬಂದು ಹೀಗೆಲ್ಲಾ ಮಾಡ್ತಾನೆ ಅಂತ ನನಗೆ ಗೊತ್ತಿರಲಿಲ್ಲಪ್ಪಾ... ಗೊತ್ತಿದ್ದಿದ್ರೆ ಅವನನ್ನು ರೂಮಿನಲ್ಲೇ ಕೂಡಿ ಹಾಕ್ತಿದ್ದೆ..."

"ಅವನಿಲ್ಲೇ ಇದಾನೆ ಅಂತ ಗೊತ್ತಿದ್ದಿದ್ರೆ, ನಾನು ಖಂಡಿತಾ ಇಲ್ಲಿಗೆ ಬರುತ್ತಿರಲಿಲ್ಲ. ಹೋಟೆಲಿನಲ್ಲಿರುತ್ತಿದ್ದೆ." ಖಾರವಾಗಿ ನುಡಿದ.

"ಆಯ್ತಪ್ಪಾ... ನೀನು ಬರೋದೇ ಗೊತ್ತಿರಲಿಲ್ಲ ನನಗೆ... ಇವತ್ತೇ ಅವನನ್ನು ಕರೆದುಕೊಂಡುಹೋಗಿ 'ಹೋಂ'ಗೆ ಸೇರಿಸಿಬಿಡ್ತೀನಿ."

"ಏನೂ ಬೇಡ... ನಾನೇ ಇವತ್ತು ಎಲ್ಲಿಗಾದ್ರೂ ಹೊರಟು ಹೋಗ್ತೀನಿ. ನೀನೂ ನಿನ್ನ ಮಗ ಹಾಯಾಗಿರಿ..." ಎನ್ನುತ್ತಾ ಕೆಳಗಿಳಿಯಲು ಹೊರಟವನನ್ನು ಜಾನಕಿ ತಡೆಯಲು ನೋಡಿದಳು ಅವನು ಕೈ ತಳ್ಳಿದ ಆ ರಭಸಕ್ಕೆ ಜಾನಕಿ ಆಯತಪ್ಪಿ ಕೆಳಕ್ಕೆ ಕುಸಿದು ಬಿಟ್ಟಳು. ಅಷ್ಟರಲ್ಲೇ ಸಂಕೇತ ಅವಳನ್ನು ಹಿಡಿದುಕೊಂಡ. ಸುಮತಿಯೂ ಸಹಾಯಕ್ಕೆ ಬಂದಳು. ಜಾನಕಿ ಅಳಲು ಪ್ರಾರಂಭಿಸಿದಳು.

"ಐ ಆಮ್ ಸಾರಿ... ಮಮ್ಮೀ... ತುಂಬಾ ಪೆಟ್ಟಾಯ್ತಾ ?" ಜಾನಕಿ ಕೋಪದಿಂದ ಮಾತನಾಡಲಿಲ್ಲ. ಸುಮತಿಯ ಕಡೆ ತಿರುಗಿದ. ಮೇಡಂ... "ಸ್ವಲ್ಪ ಹೆಲ್ಪ್ ಮಾಡಿ... ಮಮ್ಮೀನ ಕೆಳಕ್ಕೆ ನಡೆಸಿಕೊಂಡು ಇಳಿಸೋಣ." ಇಬ್ಬರೂ ಕೈ ಹಿಡಿದು ಒಂದೊಂದೇ ಮೆಟ್ಟಿಲುಗಳನ್ನು ಇಳಿಸಿಕೊಂಡು ಬಂದು ಕೆಳಗೆ ಸೋಫಾದ ಮೇಲೆ ಕೂರಿಸಿದರು.

"ಎಲ್ಲಿಗೆ ಪೆಟ್ಟಾಯ್ತು ?"... ಅವನು ಮತ್ತೆ ಕೇಳಿದಾಗ ಉತ್ತರಿಸಲಿಲ್ಲ.

"ನೋವಿನಿಂದ ಸಾಯ್ತಾ ಇದ್ರೂ ನಿನಗೆ ಕೋಪ ? ನಾನು ಈಗಲೇ ಹೋಗಿ ಡಾಕ್ಟರನ್ನು ಕರೆದುಕೊಂಡು ಬರ್ತೀನಿ" ಅವನನ್ನು ತಡೆದಳು.

''ಏನೂ ಬೇಡ. ಸ್ವಲ್ಪ ಉಳುಕಿದೆ ಅಂತ ಕಾಣಿಸುತ್ತೆ. ಐಯೋಡೆಕ್ಸ್ ಹಚ್ಚಿಕೊಂಡರೆ ನೋವು ಕಡಿಮೆ ಆಗುತ್ತೆ...'' ನೋವಾಗಿದ್ದ ಜಾಗವನ್ನು ಬೆರಳಿನಿಂದ ಉಜ್ಜಿಕೊಂಡಳು.

''ಮನೇಲಿ ಐಯೋಡೆಕ್ಸ್ ಇದೆಯೋ ತರಲೋ'' ಎಂದು ಸುಮತಿಯ ಕಡೆ ನೋಡಿದ ಅವಳು ಇದೆ ಎಂದಳು. ಸುಮತಿ ಐಯೋಡೆಕ್ಸ್ ಬಾಟಲಿಯನ್ನು ಹುಡುಕಿ ತಂದು, ಉಳುಕಿದ್ದ ಭಾಗಕ್ಕೆ ಮೃದುವಾಗಿ ಬಳಿಯುವುದನ್ನೇ ಸಂಕೇತ ನೋಡುತ್ತಿದ್ದ.

''ಥ್ಯಾಂಕ್ ಯೂ ಮೇಡಂ... ಒಂದು ಗಳಿಗೇಲಿ ಹೆದರಿಸಿ ಬಿಟ್ಲು... ಮಮ್ಮೀ...''

''ನಿನಗೆ ನನ್ನ ಬಗ್ಗೆ ಅಷ್ಟು ಕೇರ್ ಇದ್ದರೆ... ನನ್ನನ್ನು ಬಿಟ್ಟು ಅಮೆರಿಕಾಕ್ಕೆ ಯಾಕೆ ಹೋದೆ'' ಅಂತ ಕೇಳುವ ಮನಸ್ಸಾದರೂ, ಜಾನಕಿ ತಡೆದುಕೊಂಡಳು ನೋವಿನಿಂದ ಮುಖ ಕಿವುಚಿ ಕಣ್ಣು ಮುಚ್ಚಿದಳು.

''ಸೀರಿಯಸ್ ಇಂಜುರಿ ಏನೂ ಇಲ್ಲ ಅಂತ ಕಾಣುತ್ತೆ. ಈಗ ಏನ್ಮಾಡೋಣ'' ಅವನು ಸುಮತಿಯನ್ನೇ ಕೇಳಿದ.

''ಇಷ್ಟು ಹೊತ್ನಲ್ಲಿ ಯಾವ ಡಾಕ್ಟರ್ರೂ ಮನೆಗೆ ಬರುಲ್ಲ.... ಬೆಳಿಗ್ಗೆವರೆಗೆ ನೋವು ಕಡಿಮೆ ಆಗದಿದ್ದರೆ, ಬೆಳಿಗ್ಗೆ ಡಾಕ್ಟರನ್ನು ಕೇಳಿದರೆ ಆಯ್ತು.''

''ಸರಿ ಹಾಗೇ ಮಾಡೋಣ ಅಂತ ಅವನು ಮತ್ತೆ ಮೆಟ್ಟಿಲ ಬಳಿ ನಡೆದಾಗ, ಜಾನಕಿ ಕೇಳಿದಳು ಊಟ ಮಾಡುಲ್ವೇನೋ...?''

''ಇಲ್ಲ... ನನಗೆ ಹಸಿವಿಲ್ಲ...''

''ಹಾಗಂದ್ರೆ ಹೇಗೋ ಎಲ್ಲಾ ತರಕಾರಿಗಳನ್ನು ಹಾಕಿ ಕೂಟು ಮಾಡಿದೀನಿ... ನಿನಗೆ ಇಷ್ಟ ಅಂತ...''

''ಮಹಾ ನನ್ನ ಇಷ್ಟಕ್ಕೆ ಬೆಲೆ ಕೊಡೋದು'' ಅಂತ ಅವನು ಗೊಣಗಿದ್ದು ಸುಮತಿಗೆ ಕೇಳಿಸಿತ್ತು. ಅವನ ಹಿಂದೆಯೇ ಮೆಟ್ಟಿಲು ಹತ್ತಿದಳು. ಅವನು ಬಗ್ಗಿ ನಿಂತು, ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ವಸ್ತುಗಳನ್ನೆಲ್ಲಾ ಕಿಟ್‌ಬ್ಯಾಗ್‌ಗೆ ತುಂಬುತ್ತಿದ್ದ. ಬಾಗಿಲ ಹೊರಗೇ ನಿಂತು ಕೇಳಿದಳು'' ನಾನು ಏನಾದ್ರೂ ಹೆಲ್ಪ್ ಮಾಡ್ಲಾ?'' ಈ ಕಡೆ ತಿರುಗದೆಯೇ ನುಡಿದ

''ದೇವರೇ ಹೆಲ್ಪ್ ಮಾಡಬೇಕು ನನಗೆ...''

''ನೀವು ಇಷ್ಟು ಅಪ್ಸೆಟ್ ಆದರೆ ಹೇಗೆ ? ಅವನು ಏನೂಂತ ನಿಮಗೂ ಗೊತ್ತು.''

''ಗೊತ್ತು. ಅದಕ್ಕೆ ಇಷ್ಟು ಸಹಿಸಿಕೊಂಡಿದೀನಿ... ಮಮ್ಮೀಗೆ ನೋವಾಗುತ್ತೆ ಅಂತ ಸುಮ್ಮನಿದೀನಿ... ಇಲ್ಲದಿದ್ರೆ ಅವನಿಗೆ ಸರಿಯಾಗಿ ಬುದ್ಧಿ ಕಲಿಸ್ತಿದ್ದೆ.''

"ಬುದ್ಧಿಯೇ ಇಲ್ಲದೋನಿಗೆ ಏನು ಬುದ್ಧಿಯನ್ನು ಕಲಿಸೋಕೆ ಆಗುತ್ತೆ...? ನೀವು ಅಡ್ಜಸ್ಟ್ ಮಾಡ್ಕೋ ಬೇಕು."

"ನೀವೂ ನನಗೆ ತಿಳುವಳಿಕೆ ಹೇಳಬೇಡಿ ಮೇಡಂ... ನಿಮ್ಮ ಮನೇಲೂ ಇಂತಹ ಒಂದು ಕೇಸ್ ಇದ್ದಿದ್ರೆ ... ನೀವೂ ಹೀಗೆ ಅಪ್ಸೆಟ್ ಆಗ್ತಿದ್ರಿ... ಖಂಡಿತಾ ಅಡ್ಜಸ್ಟ್ ಮಾಡಿಕೊಳ್ಳುತ್ತಿರಲಿಲ್ಲ." ಸುಮತೀ ಅವನನ್ನೇ ನೋಡಿದಳು. ಕೋಪದಿಂದ ಕೆಂಪಾಗಿರುವ ಮುಖ, ಹಣೆಯ ಮೇಲೆ ಬೆವರ ಹನಿಗಳು, ಅವನಿಗೆ ಸಮಾಧಾನದ ಮಾತುಗಳನ್ನು ಹೇಳಬೇಕೆನಿಸಿತ್ತು.

"ಏನೇ ಆಗಲಿ, ಅವನು ನಿಮ್ಮ ತಮ್ಮ... ಅವನು ತಾನೇ ಇನ್ನೆಲ್ಲಿ ಹೋಗ್ತಾನೆ ? ಅವನಿಗೆ ಬೇರೆ ಯಾರು ಇದಾರೆ ?"

"ಅದೆಲ್ಲ ನನಗೆ ಗೊತ್ತಿಲ್ಲ... ಅವನಿರುವ ಕಡೆ ನಾನಂತೂ ಇರುವುದು ಸಾಧ್ಯವಿಲ್ಲ, ನಾನು ಈಗಲೇ ಎಲ್ಲಿಗಾದ್ರೂ ಹೊರಟು ಹೋಗ್ತೀನಿ"

"ನೀವು ಹೊರಟು ಹೋದರೆ ಈ ಪ್ರಾಬ್ಲಂ ಸಾಲ್ವ್ ಆಗುಲ್ಲ... ನಿಮ್ಮ ತಾಯಿಯ ಮನಸ್ಸಿಗೆ ಇನ್ನೂ ನೋವಾಗುತ್ತೆ"

"ನೀವು ಇದೀರಲ್ಲ, ಆಯಿಂಟ್‌ಮೆಂಟ್ ಬಳಿಯೋಕೆ..." ಸುಮತಿಗೂ ಕೋಪ ಬಂದಿತು. ಅವಡು ಕಚ್ಚಿ ನುಡಿದಳು.

"ರೀ ಮಿಸ್ಟರ್... ನಾನು ಇಲ್ಲಿ ಪೇಯಿಂಗ್‌ಗೆಸ್ಟ್ ಮಾತ್ರ... ಪರ್ಮನೆಂಟ್ ಆಗಿ ಇಲ್ಲಿ ಏನೂ ಇರುಲ್ಲ" ಎನ್ನುತ್ತಾ ಬಿರುಗಾಳಿಯಂತೆ ತನ್ನ ರೂಮಿಗೆ ಬಂದು ಬಿಟ್ಟಳು. ಕೆಲವೇ ನಿಮಿಷಗಳಲ್ಲಿ ಸಂಕೇತ ಸಮಾಧಾನ ಮಾಡಿಕೊಂಡ. ತನ್ನ ದುಡುಕಿನ ಅರಿವಾಗಿತ್ತು. ಸುಮತಿಯನ್ನು ಗದರಲು ತನಗೇನು ಹಕ್ಕಿದೆ ಎಂದೆನಿಸಿತ್ತು. ಸಾರೀ ಕೇಳೋಣವೆಂದುಕೊಂಡು ಅವಳ ರೂಮಿಗೆ ಬಂದ. ಟೇಬಲ್ ಲ್ಯಾಂಪ್ ಬೆಳಕಿನಲ್ಲಿ ಅವಳು ಏನನ್ನೋ ಓದುತ್ತಿರುವುದನ್ನು ಕಂಡು, ಬಾಗಿಲ ಮೇಲೆ ಬೆರಳನ್ನು ಬಡಿದ. ಸುಮತಿ ಇತ್ತ ತಿರುಗಿದಳು. 'ಎಸ್' ಎಂದಳು.

"ಬನ್ನಿ, ಊಟ ಮಾಡೋಣ. ಹೊಟ್ಟೆ ಹಸಿಯುತ್ತಿದೆ" ಎಂದ.

"ನಡೀರಿ..." ಅವಳೂ ಹೆಚ್ಚಿಗೆ ಮಾತನಾಡದೇ ಕೆಳಗಿಳಿದು ಬಂದಳು. ಜಾನಕಿ ತನ್ನ ರೂಮಿಗೆ ಹೊರಟು ಹೋಗಿದ್ದಳು. ಸುಮತಿ ತಾನೇ ಬಟ್ಟಲು, ತಟ್ಟೆಗಳನಿಟ್ಟಳು. ಸಾರು, ಪಲ್ಯವನ್ನು ಮತ್ತೆ ಬಿಸಿ ಮಾಡಿ ತಂದಿರಿಸಿದಳು.

"ಮಮ್ಮೀದು ಊಟ ಆಯ್ತಾ ? ಕೇಳ್ತೀರಾ ಮೇಡಂ..."

"ನೀನೇ ಕೇಳಬಹುದಲ್ಲ ಅಂತಂದುಕೊಂಡರೂ, ಅವನ ಮೂಡ್ ಇನ್ನೂ ತಿಳಿಯಾಗಿಲ್ಲ ಅಂತಂದುಕೊಂಡು, ಜಾನಕಿಯ ರೂಮಿಗೆ ಬಂದಳು.

"ಆಂಟೀ ಊಟಕ್ಕೆ ಬರ್ತೀರಾ ?" ಕೇಳಿದಳು.

"ನಾನು ಜಗ್ಗೂಗು ಊಟ ಮಾಡಿಸಿ, ನಾನೂ ಮಾಡಿದೆ. ಕಾಲು ವಿಪರೀತ ನೋಯ್ತಿದೆ. ಒಂದು ನೋವಿನ ಮಾತ್ರೆ ಕೊಡ್ತೀಯ ? ಅಲ್ಲಿದೆ..." ಸುಮತಿ ಮಾತ್ರೆಗಳಿದ್ದ ಡಬ್ಬಿಯನ್ನು ಆಂಟಿಯ ಕೈಗಿತ್ತು, ನೀರನ್ನು ತಂದುಕೊಟ್ಟಳು. ಹೊರಬಂದಳು.

"ಆಂಟೀದು ಊಟ ಆಯ್ತಂತೆ. ಮಲಗಿದಾರ"

"ನಿಜವೋ ಸುಳ್ಳೋ...?" ಅನುಮಾನದಿಂದ ಪ್ರಶ್ನಿಸಿದ.

"ಸುಳ್ಳನ್ಯಾಕೆ ಹೇಳ್ತಾರೆ ? ಅವರಿಗೂ ವಯಸ್ಸಾಗಿದೆ. ಹೊಟ್ಟೆ ಹಸಿದುಕೊಂಡಿದ್ರೆ ಅಸಿಡಿಟಿಯಾಗುತ್ತೆ. ನಿದ್ದೆ ಬರುಲ್ಲ..." ಸಂಕೇತ ಆ ಮಾತಿಗೆ ಉತ್ತರಿಸದೇ ಊಟ ಮಾಡಲು ಪ್ರಾರಂಭಿಸಿದ. ಸುಮತಿ ತಾನೂ ಕುಳಿತು, ತಟ್ಟೆಗೆ ಬಡಿಸಿಕೊಂಡಳು. ಇಬ್ಬರೂ ಮೌನವಾಗಿ ಊಟ ಮಾಡಿ ಮುಗಿಸಿ ಎದ್ದರು.

ಬೆಳಿಗ್ಗೆಯ ಹೊತ್ತಿಗೆ ಜಾನಕಿಯ ಕಾಲು ನೋವು ಇನ್ನೂ ಜಾಸ್ತಿಯಾಗಿತ್ತು. ಸಂಕೇತ ಬಂದು ವಿಚಾರಿಸಿರಲಿಲ್ಲ. ಸುಮತಿಯ ಕೈಯ್ಯಲ್ಲಿ ಹೇಳಿಕೊಂಡಳು.

"ಯಾಕೋ ಕಾಲು ನೋವು ಜಾಸ್ತಿಯಾಗಿದೆ. ಫ್ರಾಕ್ಚರ್ ಆಗಿದೆಯೋ ಏನೋ ಅಂತ ಭಯವಾಗ್ತಿದೆ."

"ಫ್ರಾಕ್ಚರ್ ಆಗಿದ್ರೆ ತುಂಬಾ ಸ್ವೆಲಿಂಗ್ ಇರುತ್ತೆ. ಕಾಲನ್ನು ಊರುಕ್ಕೇ ಆಗದಷ್ಟು ನೋಯುತ್ತೆ ಅಂತಾರೆ... ಒಂಭತ್ತು ಗಂಟೆಯಾಗಲಿ, ನಾನೇ ಡಾಕ್ಟರನ್ನು ಕರೆದುಕೊಂಡು ಬರ್ತೀನಿ."

"ಸಂಕೂ ಇನ್ನೂ ಎದ್ದಿಲ್ವಾ ?"

"ಗೊತ್ತಿಲ್ಲ ನಾನು ನೋಡಲಿಲ್ಲ. ಕಾಫಿ ಕುಡಿದಾಯ್ತಾ ಆಂಟಿ... ?"

"ಕುಡಿದಾಯ್ತು ನನಗಲ್ಲದಿದ್ರೂ ಇವನಿಗೋಸ್ಕರ ಮಾಡಬೇಕಲ್ಲ... ಪಕ್ಕದ್ದಲ್ಲೇ ಕೂತಿದ್ದ ಜಗ್ಗುವಿನ ಮೂತಿ ತಿವಿದಳು. ಅವನು ಹಲ್ಲು ಕಿರಿದು ನಕ್ಕ. ಅವನಿಗೋ ಇದನ್ನು ಕಂಡರೇ ಆಗುಲ್ಲ. ಸಿಡಿ ಸಿಡಿ ಅಂತಾನೆ. ಅವನ ಕಣ್ಣಿಗೆ ಬೀಳದಿರಲಿ ಅಂತ ಇವನನ್ನು ದೂರದೂರವೇ ಇಡ್ತೀನಿ ಆದರೂ ನೋಡು ಅದ್ಯಾವ ಮಾಯದಲ್ಲಿ ಅಲ್ಲಿಗೆ ಹೋದ್ನೋ, ನಂಗಂತೂ ಗೊತ್ತಾಗ್ಲೇ ಇಲ್ಲ" ಪೇಚಾಡಿದಳು.

"ಚಾಕ್ಲೇಟು ತಗೋಳ್ಳೋಕೆ ಅಂತ ಬ್ಯಾಗ್ ಕಿತ್ತಾಡಿರಬಹುದು."

"ಸಂಕು ಚಾಕ್ಲೇಟ್ಸ್ ತಂದಿದಾನಾ ? ನಂಗೆ ಕೊಡಲೇ ಇಲ್ಲ" ಸುಮತಿ ಬೆಪ್ಪಾದಳು. ತನಗೆ

ಚಾಕ್ಲೇಟ್ಸ್ ಕೊಟ್ಟ ಅಂತ ಆಂಟಿಗೆ ತಿಳಿದರೆ ಏನಂದುಕೊಳ್ಳುವನೋ ಅಂತಂದುಕೊಂಡು," ಏನೋ ನಂಗೊತ್ತಿಲ್ಲ... ತಂದಿರಬಹುದೇನೋ ಅಂತ ಅಂದುಕೊಂಡೇ ಅಂತಂದಳು.

"ತಂದಿದ್ರೂ ನಮ್ಮ ತನಕ ಎಲ್ಲಿ ಬರುತ್ತೆ ? ಇದೆಯಲ್ಲ ವಾನರ ಸೈನ್ಯ... ಲೂಟಿ ಮಾಡೋಕೆ..." ಸುಮತಿ ನಕ್ಕಂತೆ ಮಾಡಿದಳು.

"ಏನು ತಿಂಡಿ ಮಾಡಲಿ ?"

"ಏನೂ ಬೇಡ ರಾಜಮ್ಮನ ಹತ್ತಿರ, ಹೋಟೆಲ್ಲಿನಿಂದ ಇಡ್ಲಿ ವಡೆ ಸಾಂಬಾರು ತರಿಸಿ ಬಿಡು... ಆಮೇಲೆ ಎದ್ದು ನಿಧಾನವಾಗಿ ಅಡಿಗೆ ಮಾಡ್ತೀನಿ"

ಅಷ್ಟರಲ್ಲಿ ಸಂಕೇತ ಕೆಳಗಿಳಿದು ಬಂದ "ಮಮ್ಮೀ ಇನ್ನು ಎದ್ದಿಲ್ವಾ ?" ಅಂತ ಕೇಳಿದ.

"ಅವರ ಕಾಲು ನೋವು ಜಾಸ್ತಿಯಾಗಿದೆಯಂತೆ ಮಲಗೇ ಇದಾರೆ ?"

"ಹೌದಾ ? ಈಗೇನ್ಮಾಡೋದು ?" ಅವಳನ್ನೇ ಪ್ರಶ್ನಿಸಿದ.

"ನನ್ನನ್ನ ಕೇಳಿದರೆ ನಾನೇನು ಹೇಳಲಿ ? ನೀವೇ ಮಾತನಾಡಿ..."

"ಮಮ್ಮಿ ಎದ್ದು ಹೊರಗೆ ಬರಲಿ ಆಮೇಲೆ ವಿಚಾರಿಸ್ತೀನಿ..."

"ಯಾಕೆ ? ಈಗಲೇ ವಿಚಾರಿಸಿದರೆ, ನಿಮ್ಮ ತಾಯಿಗೂ ಸಂತೋಷವಾಗುತ್ತೆ"

"ಅವಳಿಗೆ ಸಂತೋಷವಾಗುತ್ತೆ... ಆದರೆ ನನಗೆ ಆ ರೂಮಿಗೆ ಹೋಗುಕ್ಕೇ ಇಷ್ಟವಿಲ್ಲವಲ್ಲ."

"ಯಾಕೆ ?"

"ಯಾಕೆ ? ಯಾಕೆ ! ನಿಮಗ್ಯಾಕೆ ? ನೀವೇನು ಎನ್‌ಕ್ವೈಯರಿ ಮಾಡ್ತಿದೀರಾ ?" ಅವನು ಎತ್ತರದ ಧ್ವನಿಯಲ್ಲಿ ಕೇಳಿದಾಗ, ಸುಮತಿಗೆ ಸಂಕೋಚವಾದಂತಾಯಿತು. ಇವನನ್ನು ಮಾತನಾಡಿಸುವುದೇ ತಪ್ಪು ಅಂತ ಅಂದುಕೊಂಡು ಸುಮ್ಮನಾದಳು.

"ಯಾಕ್ರೀ... ಕೋಪ ಬಂತಾ ? ಗುಂ ಅಂತಿದೀರಲ್ಲ... ಇವತ್ತಿನ ನ್ಯೂಸ್ ಪೇಪರ್ ಎಲ್ಲಿ! ಹೇಳ್ತೀರಾ ಪ್ಲೀಸ್"

"ನಂಗೊತ್ತಿಲ್ಲ..."

"ಓ... ಕೋಪ ಬಹಳ ಜೋರಾಗಿರುವ ಹಾಗೇ ಇದೆ... ನಾನು ಇಲ್ಲಿಗೆ ಬಂದು ಫೂಲ್ ಆದೆ..... ನಮ್ಮಪ್ಪನ ಮನೆ, ನನಗೇ ಸ್ವತಂತ್ರವಿಲ್ಲ..." ಅವಳು ಅದಕ್ಕೂ ಉತ್ತರಿಸದೇ ಸುಮ್ಮನಾದಾಗ, ಎದ್ದು ರೂಮಿನ ಬಾಗಿಲಬಳಿಗೆ ಬಂದ.

''ಮಮ್ಮೀ... ಮಮ್ಮೀ...''ಹೊರಗಿನಿಂದಲೇ ಕೂಗಿದ

''ಏನು ಬೇಕಪ್ಪಾ...? ಕಾಫಿ ಬೇಕೇನೋ...?''

''ಕಾಫಿ ಆಯ್ತು... ಕಾಲು ನೋವು ಹೇಗಿದೆ ?''

''ನೋವು ಹಾಗೇ ಇದೆ'' ಅಂತ ಹೇಳಿ ಕುಂಟುತ್ತಾ ಹೊರಗೆ ಬಂದಳು.

''ನಾನು ಬಂದಾಗಲೇ ಈ ಡ್ರಾಮಾ ಎಲ್ಲಾ ಆಗ್ಬೇಕಾ ? ನಾನು ಇವತ್ತೇ ಹೊಟೆಲ್ಲಿಗೆ ಹೋಗ್ತೀನಿ. ನಾನು ಇಲ್ಲಿರೋದ್ರಿಂದ ನಿಮಗೆಲ್ಲ ಕಷ್ಟ..''

''ಥೂ ಏನು ಮಾತೂಂತ ಆಡ್ತೀಯ ! ನೀನೂ ಈ ಮನೆಯವನೇ... ಇನ್ನೊಂದೆರಡು ದಿನಗಳಲ್ಲಿ ನೋವು ಕಡಿಮೆ ಆಗುತ್ತೆ... ಸುಮತಿ ಇದಾಳಲ್ಲ, ಎಲ್ಲಾ ನೋಡ್ಕೋತಾಳೆ...''

''ನಿನ್ನ ಸುಮತಿ ಗುಂ ಅಂತಿದಾರೆ...'' ಸುಮತಿಯ ಕಡೆ ನೋಡಿ ನಕ್ಕ.

''ನೀನು ಏನೋ ಕೆಣಕಿರಬೇಕು. ಇಲ್ಲದಿದ್ದರೆ, ಸುಮತಿ ಅಂತ ಹುಡುಗಿಯಲ್ಲ''

''ನೋಡಿದ್ಯಾ... ನನಗೆ ಅದೇ ಬೇಜಾರು... ನನಗಿಂತ ಹೊರಗಿನವರೇ ನಿನಗೆ ಒಳ್ಳೆಯವರು.'' ಹಂಗಿಸಿದ.

''ಅವಳು ಹೊರಗಿನವಳು ಅಂಥ ನನಗೆ ಅನ್ನಿಸಿಯೇ ಇಲ್ಲ, ನನಗೆ ಮಗಳಿದ್ದ ಹಾಗೇ... ಜಗ್ಗೂನ ಕಂಡ್ರಂತೂ...'' ಎಂದು ಅಷ್ಟಕ್ಕೇ ಮಾತನ್ನು ನಿಲ್ಲಿಸಿದಳು. ಸಂಕೇತ ಕೆಕ್ಕರಿಸಿ ತಾಯಿಯನ್ನೇ ನೋಡಿ, ಸರಸರನೆ ಮುಂಬಾಗಿಲಿಗೆ ಬಂದು ನಿಂತ. ಜಗ್ಗುವಿನ ಹೆಸರನ್ನು ಎತ್ತಿ ಅವನಿಗೆ ಬೇಸರ ಮಾಡಿದೆ ಎನ್ನುವಂತೆ ಜಾನಕಿ ಪೆಚ್ಚು ಮುಖ ಮಾಡಿದಳು.

''ಏನ್ ಸ್ವಾಮಾರೇ... ಎದ್ದು ಬಿಟ್ರಾ ?'' ಎನ್ನುತ್ತಾ ರಾಜಮ್ಮ ಒಳಗೆ ಬಂದಳು.

''ಇದೇನೇ ರಾಜಮ್ಮ ? ಯಾಕೇ ಇಷ್ಟು ಲೇಟು ?'' ಜಾನಕಿ ಕೇಳಿದಳು.

''ಊಂ... ವಸಿ ತಡ ಆಯ್ತು. ಮನೆಯಿಂದ ಹೊಂಟಿದ್ನಾ ? ರಸ್ತೆ ಮೂಲೇಲಿ ಜನ ಗುಂಪು ಕಟ್ಕೊಂಡು ನಿಂತಿದ್ರು... ಬಗ್ಗಿ ನೋಡ್ದೆ ಎದುರುಗಡೆ ಪೆಟ್ಟಿಗೆ ಅಂಗಡಿ ಹುಡುಗ ನೆಲಕ್ಕೆ ಬಿದ್ದು ಬಿಟ್ಟವ್ನೆ. ಬಾಯಲೆಲ್ಲಾ ನೊರೆ, ಕೈಕಾಲು ಅದುರುತ್ಯೆತೆ ಪಿಟ್ಸ್ ಬಂದಿತಂತೆ...'' ಯಾರೂ ಮಾತಾಡಲಿಲ್ಲ.

''ಪೇಪರ್ರು ತರ್ತೀನಿ ಕಾಸು ಕೊಡಿ'' ಜಾನಕಿ ಚಿಲ್ಲರೆ ಎಣಿಸಿಕೊಟ್ಟಳು. ರಾಜಮ್ಮ ತಂದುಕೊಟ್ಟ ನ್ಯೂಸ್ ಪೇಪರನ್ನು ಎತ್ತಿಕೊಂಡು ಸಂಕೇತ ತನ್ನ ರೂಮಿಗೆ ಹೋದ.

''ಅವ್ವಾ ಯಾಕ್ರವ್ವ, ಸಂಕಪ್ನೋರು ಮುನಿಸ್ಕಂಡವ್ರೇ...''

"ಅಯ್ಯೋ ಬಿಡು, ಏನೋ ಇರುತ್ತಲ್ಲ ಮನೆ ಅಂದ್ಮೇಲೆ.. ನಂಗೆ ಕಾಲು ಉಳುಕಿ ಬಿಟ್ಟಿದೆ ಹೋಟೆಲ್ನಿಂದ ಇಡ್ಲಿ ಸಾಂಬಾರು ವಡೆ ಕಟ್ಟಿಸ್ಕೊಂಡು ಬಾ..." ಎನ್ನುತ್ತಾ ನೋಟುಗಳನ್ನು ಎಣಿಸಿಕೊಟ್ಟಳು.

"ಅದಕ್ಕೇ ಮತ್ತೆ ಕ್ವಾಪ ಅವರು ಊರಿಗೆ ಬಂದಾಗ್ಲೇ... ನೀವು ಕಾಲ್ನ ಉಳುಕಿಸ್ಕೋ ಬೇಕಾ?"

"ಏ, ಹೋಗೇ... ನಾನೇನು ಬೇಕೂಂತ ಮಾಡ್ಕೊಂಡ್ನಾ ? ನನಗೂ ನೋವು ಡಾಕ್ಟರ ಹತ್ತಿರ ಬೇರೆ ಹೋಗಬೇಕು..."

"ಚಿಕ್ಕಮ್ಮಾರೇ ಟಿಫಿನ್ ಬಾಕ್ಸ್ ಕೊಡಿ, ಸಾಂಬಾರಿಗೆ' ಎನ್ನುತ್ತಾ ಸುಮತಿ ಕೊಟ್ಟ ಕ್ಯಾರಿಯರ್ ಹಿಡಿದು ಹೋಟೆಲ್ಲಿಗೆಂದು ನಡೆದಳು.

"ಅಬ್ಬಾ.. ಇವಳೂ ಅಷ್ಟೇ ಅದೆಷ್ಟು ಕೆದಕ್ತಾಳೆ. ತೆಪ್ಪಗೆ ಮನೆ ಕೆಲಸ ಮಾಡಿಕೊಂಡು ಹೋದರಾಗುಲ್ವಾ ?"

"ಆಂಟಿ ನಾನು ಕಾಲೇಜಿಗೆ ರಜ ಹಾಕ್ಲಾ?"

"ಏನೂ ಬೇಡ ಹೇಗೋ ಆಗುತ್ತೆ. ನಾನೇನು ಹಾಸಿಗೆ ಹಿಡಿದು ಮಲಗಿಲ್ಲವಲ್ಲ... ಬಿಸಿ ಬಿಸಿ ಕಾಫಿ ಇದ್ದರೆ ಕೊಡು ಸಿಕ್ಕಾ ಬಟ್ಟೆ ತಲೆ ನೋಯ್ತಿದೆ" ಎನ್ನುತ್ತಾ ಅಲ್ಲೇ ಕುಳಿತಳು.

ಸುಮತಿ ಎಲ್ಲರಿಗೂ ಆಗುವಷ್ಟು ಕಾಫಿ ಬೆರೆಸಿದಳು. ಜಾನಕಿಗೂ, ಕಾಫಿ ಅಂತಂದ್ರೆ ಚಪಲ ಎನ್ನುವುದು ತಿಳಿದಿತ್ತು. ಅವಳಂತೂ ಮಲೆನಾಡಿನ ಕಡೆಯವಳು, ಮಳೆಗಾಲ, ಚಳಿಗಾಲದಲ್ಲಿ ದಿನಕ್ಕೆ ಅದೆಷ್ಟು ಕಾಫಿಯ ಸಮಾರಾಧನೆಯಾಗುತ್ತಿತ್ತೋ... ಸಧ್ಯ ಇಲ್ಲಿ ಆಂಟಿಯ ಮನೆಯಲ್ಲಿ ಕಾಫಿಗೆ ಯಾವ ರೆಸ್ಟ್ರಿಕ್ಷನ್ ಇಲ್ಲ ಎನ್ನುವುದೇ ಸಮಾಧಾನದ ಮಾತಾಗಿತ್ತು.

"ಇಲ್ಲಿ ಕೊಡು, ಜಗ್ಗೂಗೆ ನಾನು ಕುಡಿಸ್ತೀನಿ.... ಆ ಉರಿಸಿಂಗನಿಗೆ ನೀನೇ ತಗೊಂಡು ಹೋಗಿ ಕೊಡು" ಸುಮತಿ ಕಣ್ಣು ಕಣ್ಣು ಬಿಟ್ಟಳು.

"ಕರೆದ್ರೂ ಕೆಳಗಿಳಿದು ಬರುಲ್ಲ ನಂಗೊತ್ತು. ನನಗೆ ಕಾಲು ನೋವು... ಈಗ ನೀನೇ ಕೊಡಬೇಕು." ಸುಮತಿ ಟ್ರೇಯಲ್ಲಿ ಎರಡು ಕಪ್‌ಗಳನ್ನಿಟ್ಟುಕೊಂಡು ಮಹಡಿ ಹತ್ತಿದಳು. ಬಾಲ್ಕನಿಯಲ್ಲಿ ಕೂತು ಪೇಪರ್ರು ಓದುತ್ತಿದ್ದ. ಸುಮತಿ, ಸಮೀಪಕ್ಕೆ ಹೋಗಿ ನಿಂತರೂ ಕತ್ತೆತ್ತಿ ನೋಡಿರಲಿಲ್ಲ. ಇವನಿಗೆಷ್ಟು ಕೊಬ್ಬು ಅಂತ ಮನದಲ್ಲೇ ಬೈದುಕೊಂಡು, ಸಣ್ಣಗೆ ಕೆಮ್ಮಿದಳು.

"ಏನು ಬೇಕಾಗಿತ್ತು ? ಕತ್ತೆತ್ತದೇ ಕೇಳಿದ

"ಕಾಫಿ ಬೇಕಾ ?"

"ತಂದಿದ್ರೆ ಕೊಡಿ"

''ಹುಂ ತಗೊಳ್ಳಿ ಎನ್ನುತ್ತಾ ಅವನ ಮುಂದೆ ಟ್ರೇ ಹಿಡಿದಳು...'' ಇನ್ನೊಂದು ಯಾರಿಗೆ ?'' ಕೇಳಿದ.

''ನನಗೇ...''

''ನನಗೇ ಎರಡು ಕಪ್ ಕಾಫೀನೇನೋ ಅಂತಂದುಕೊಂಡೆ'' ಎಂದು ನಕ್ಕ ಅವಳಿಗೆ ನಗಬೇಕೆನಿಸಲಿಲ್ಲ.

''ಯಾಕ್ರೀ ಇನ್ನೂ ಕೋಪಾನಾ ? ಅದಕ್ಕೇ ಕಾಫಿಗೆ ರುಚಿಯೇ ಇಲ್ಲ...''

''ಮನಸ್ಸು ಸರಿಯಾಗಿದ್ರೆ ಎಲ್ಲಾ ರುಚಿಯಾಗಿರುತ್ತೆ...''

''ಎಲ್ಲಾ ಅಂದ್ರೆ...'' ಎನ್ನುತ್ತಾ ಅವಳನ್ನೇ ದೃಷ್ಟಿಸಿದ. ಅವಳ ಕಪೋಲಗಳು ಕೆಂಪಾದವು ದೃಷ್ಟಿಯನ್ನು ತಗ್ಗಿಸಿದಳು ''ಲವ್ಲೀ...'' ಎಂದ ಅವಳು ಕತ್ತೆತ್ತಿದಳು.

''ಕೂತ್ಕೊಳ್ಳಿ... ಪಕ್ಕದಲ್ಲಿದ್ದ ಕುರ್ಚಿಯನ್ನು ಇತ್ತ ತಳ್ಳಿದ.

''ಇಲ್ಲ, ನನಗಿನ್ನು ಕೆಲಸವಿದೆ... ಕಾಲೇಜಿಗೆ ಹೋಗಬೇಕು...'' ಎಂದು ಹೇಳಿ ಅಲ್ಲಿ ನಿಲ್ಲದೇ ಹೊರಟು ಹೋದಳು. ಅವನು ಕಾಫಿಯನ್ನು ನಿಧಾನವಾಗಿ ಹೀರಿ, ರಸಾಸ್ವಾದ ಮಾಡಿದ ಮನಸ್ಸಿಗೆ ಮುದವೆನಿಸಿತ್ತು.

ಈ ಸುಮತಿಯೂ ಇಲ್ಲದೇ ಇದ್ದಿದ್ದರೆ, ತಾನು ಖಂಡಿತಾ ಹಿಂದಿನ ರಾತ್ರಿಯೇ ಹೋಟೆಲ್ಲಿಗೆ ಹೊರಟು ಹೋಗುತ್ತಿದ್ದೆನೋ ಏನೋ ಅಂತಂದುಕೊಂಡ.

''ಸುಮತೀ... ಯಾರಿವಳು ? ಅಮ್ಮನ ಪೇಯಿಂಗ್ ಗೆಸ್ಟ್ ! ಫೋನು ಮಾಡಿದ್ದಾಗ ಪೇಯಿಂಗ್ ಗೆಸ್ಟ್ ವಿಷಯವನ್ನು ಹೇಳಿದ್ದಳು. ಮೊನ್ನೆಯೇ ಮೊದಲ ಬಾರಿಗೆ ನೋಡಿದ್ದು, ನೋಡಿದ ಕೂಡಲೇ ಯಾರಾದರೂ ಮೆಚ್ಚಬೇಕಾದಂತಹವಳೇ... ರೂಪವಿದೆ, ಯೌವನವಿದೆ, ಆಕರ್ಷಕ ವ್ಯಕ್ತಿತ್ವವಿದೆ... ಮೆಚ್ಚಬೇಕಾದ ಗುಣಗಳಿವೆ... ಅವಳಿರುವುದರಿಂದಲೇ ಈ ಮನೆಗೆ ಒಂದು ಕಳೆ ಇದೆ... ಇಲ್ಲದಿದ್ದರೆ ಇಷ್ಟು ದೊಡ್ಡ ಮನೆಯಲ್ಲಿ ಅಮ್ಮ, ನಾನು, ಇಬ್ಬರೇ... ಮಾತಿಲ್ಲ ಕತೆಯಿಲ್ಲ, ಅವಳ ಪಾಡಿಗೆ ಅವಳು, ನನ್ನ ಪಾಡಿಗೆ ನಾನು, ಸ್ನೇಹಿತರನ್ನು ಹುಡುಕಿಕೊಂಡು ಅಲೆಯುತ್ತಿದ್ದೆ.. ಸ್ನೇಹಿತರು ಅಂತಂದುಕೊಂಡ ಕೂಡಲೇ ಅವರುಗಳು ಬರಬಹುದೆಂದುಕೊಂಡು, ಎದ್ದ.

ಸುಮತಿ, ಸಮೀಪದಲ್ಲೇ ಇದ್ದ ಡಾಕ್ಟರೊಬ್ಬರನ್ನು ಮನೆಗೆ ಕರೆ ತಂದಿದ್ದಳು. ಅವರು ಕಾಲನ್ನು ಪರೀಕ್ಷಿಸಿ, ''ಬರೀ ಉಳುಕಿದೆ ಅಷ್ಟೆ.. ನೋವಿಗೆ ಮಾತ್ರೆ ಬರೆದು ಕೊಡ್ತೀನಿ. ರೆಸ್ಟ್ ತಗೊಳ್ಳಿ... ಒಂದೆರಡು ದಿನಗಳಲ್ಲಿ ನೋವು ಕಡಿಮೆ ಆಗುತ್ತದೆ '' ಎಂದಿದ್ದರು.

ರಾಜಮ್ಮ ತಂದಿಟ್ಟ ತಿಂಡಿಯನ್ನು ತಿಂದು, ಮಾತ್ರೆ ನುಂಗಿದ್ದಳು ಜಾನಕಿ.

ತಾನು ಕಾಲೇಜಿಗೆ ಹೋಗುವ ಮೊದಲೇ, ಅವನಿಗೂ ತಿಂಡಿ ಕೊಟ್ಟು ಬಿಟ್ಟರೆ, ಆ ಕೆಲಸವೂ ಮುಗಿಯುತ್ತದೆ ಎಂದುಕೊಂಡು, ಸಂಕೇತನಿಗೆ ಹೇಳಿ ಕಳಿಸಿದಳು.

"ಇಲ್ಲಿಗೇ ತಂದು ಕೊಡಬೇಕಂತೆ ಅಂತ ಹೇಳು... ನನಗೆ ಅಲ್ಲಿ ಕೂತು ತಿನ್ನಕ್ಕೆ ಬೇಜಾರು" ಅಂದಿದ್ದ. ರಾಜಮ್ಮ ದಬಾಯಿಸಿದ್ದಳು.

"ಏನ್ಸಾಮಿ ಇಂಗಂತೀರಿ ? ದೊಡ್ಡಮ್ಮಾವರಿಗೆ ಕಾಲು ನೋವು ಡಾಕ್ಟರು ರೆಸ್ಟ್ ತಗೊಳ್ಳಿ ಅಂದವ್ರೆ... ಚಿಕ್ಕಮ್ಮ ಎಷ್ಟೊಂತ ಓಡಾಡುತ್ತೆ... ನಾನೇ ತಂದು ಕೊಡ್ಲಾ? ನನ್ನ ಕೈಯಿಂದ ತಿಂತೀರಾ ?"

"ಬೇಡ ಬಿಡು. ಕೆಳಕ್ಕೆ ಬರ್ತೀನಿ" ಎನ್ನುತ್ತಾ ಕೆಳಗೆ ಬಂದ... ತಟ್ಟೆಯಲ್ಲಿ ಹಾಕಿಟ್ಟಿದ್ದ ಇಡ್ಲಿ ಸಾಂಬಾರು, ವಡೆ ಚಟ್ನಿ ಎಲ್ಲಾ ಮುಗಿಸಿದ.

"ಥ್ಯಾಂಕ್ಸ್... ತಿಂಡಿ ತುಂಬಾ ಚೆನ್ನಾಗಿತ್ತು" ಅಂತಂದ... ಸುಮತಿ ನಕ್ಕಳು.

"ನನಗೆ ಥ್ಯಾಂಕ್ಸ್ ಹೇಳ ಬೇಕಾಗಿಲ್ಲ, ತಿಂಡಿ ಮಾಡಿದವನು ಹೋಟೆಲ್ಲಿನ ಅಡಿಗೆ ಭಟ್ಟ ತಂದವಳು ರಾಜಮ್ಮ... ಬಡಿಸಿದವಳು ನಾನು ಅಷ್ಟೇ..."

"ಏನೋ ಒಂದು ಡಾಕ್ಟರ್ ಬಂದಿದ್ರಂತೆ ನನಗೆ ಹೇಳಲೇ ಇಲ್ಲ ನೀವು..."

"ಹೇಳುವಂತಹ ಸೀರಿಯಸ್ ಏನಿರಲಿಲ್ಲ, ಆದಕ್ಕೇ ಹೇಳಲಿಲ್ಲ..."

"ಎನಿವೇ ಥ್ಯಾಂಕ್ಸ್... ಮಮ್ಮೀನ ನನಗಿಂತ ಚೆನ್ನಾಗಿ ನೋಡ್ಕೋತಾ ಇದೀರಿ...' ಪ ಅವನ ಮಾತಿನಲ್ಲಿ ಏನಾದರೂ ವ್ಯಂಗ್ಯವಿರಬಹುದೇ ಎಂಬ ಅನುಮಾನ ಕಾಡಿತು.

"ನಾನು ಕಾಲೇಜಿಗೆ ಹೊರಟಿದೀನಿ. ನಿಮ್ಮ ಪ್ರೋಗ್ರಾಂ ಏನು ?"

"ನನ್ನ ಫ್ರೆಂಡ್ಸ್ ಬರ್ತಾರೆ. ಅವರುಗಳ ಜೊತೆ ಹೊರಕ್ಕೆ ಹೋಗ್ತೀನಿ. ಅಷ್ಟೇ..." ಸುಮತಿ ಮತ್ತೊಮ್ಮೆ ಆಂಟಿಗೆ ಹೇಳಿ ಹೊರಟುಬಿಟ್ಟಳು. ಅವನೂ ಗೇಟಿನ ತನಕ ಅವಳ ಹಿಂದೆಯೇ ಬಂದ. ಬಗಲಲ್ಲಿ ತೂಗಾಡುವ ಹ್ಯಾಂಡ್ ಬ್ಯಾಂಗ್, ತೂಗಾಡುವ ಜಡೆ... ಸಾಧಾರಣವಾದ ಸರಳವಾದ ಅಲಂಕಾರ... ಒಂದೊಂದನ್ನೇ ಗಮನಿಸಿದ.

ತಿಳಿಗೆಂಪು ಬಣ್ಣದ ಕಾಟನ್ ಸೀರೆ, ಅದಕ್ಕೆ ಒಪ್ಪುವ ತಿಳಿಗೆಂಪು ಬಣ್ಣದ ರವಿಕೆ, ಅಂತೆಯೇ ತಿಳಿಗೆಂಪಾದ ಕೆನ್ನೆಗಳು... ಕೆಂಪು ತುಟಿಗಳು... ಈ ಸುಮತಿಯ ಬಗ್ಗೆ ತಾನೇಕೆ ಯೋಚಿಸ್ತೀನಿ ಎಂದು ಅವನಿಗೇ ಅರ್ಥವಾಗಿರಲಿಲ್ಲ.

"ಏನೋ ಬಾಗಿಲಲ್ಲಿ ನಿಂತು ಯಾವ ಅಪ್ಸರೆಗಾಗಿ ಕಾದು ನಿಂತಿದೀಯೋ ?" ಹರೀಶನ ಧ್ವನಿ ಎಚ್ಚರಿಸಿತು.

"ನಿನಗಾಗೇ ಕಾಯ್ತಾ ಇದ್ದೆ..." ಗಂಭೀರವನ್ನು ನಟಿಸಿ ನುಡಿದ.

"ಥೂ ! ನಾನು ನಿನಗೆ ಅಪ್ಸರೆ ತರಹ ಕಾಣ್ತೀನಾ ?" ಉಳಿದವರೂ ನಕ್ಕರು.

"ನಿನ್ನನ್ನು ನೀನೇ ಅಪ್ಸರೆ ಅಂತ ಅಂದುಕೊಂಡರೆ ನಾನು ಏನು ಹೇಳಲಿ ?" ಮತ್ತೊಮ್ಮೆ ಎಲ್ಲರೂ ನಕ್ಕರು. ಎಲ್ಲರೂ ಒಳಗೆ ಬಂದರು.

"ಯಾರೂ ಇಲ್ಲವೇನೋ ಮನೇಲಿ... ನಿನ್ನ ಮಮ್ಮಿ...? ನಿನ್ನ ಚಿತ್ರಾಂಗದೆ ?"

"ಚಿತ್ರಾಂಗದೆ ಕಾಲೇಜಿಗೆ ಹೋದರು... ಅಮ್ಮ ರೆಸ್ಟ್ ತಗೋತಿದಾಳೆ... ಮೇಡ್ ಸರ್ವೆಂಟ್ ಇದಾಳೆ. ಕರೀಲಾ ?" ಎಲ್ಲರೂ ಗೊಳ್ಳೆಂದು ನಕ್ಕರು. ಹರೀಶ ಕೆಂಪಾದ ತಾನೂ ನಕ್ಕ

"ನಾನು ಬರ್ಲಾ ಅಮ್ಮೋರೆ...." ಎನ್ನುತ್ತಾ ರಾಜಮ್ಮ ಹೊರಟಳು ಎಲ್ಲರೂ ಅವಳನ್ನೇ ನೋಡಿದರು. ಸಂಕೇತ ಹರೀಶನ ಕಡೆ ನೋಡಿ ಕಣ್ಣು ಮಿಟುಕಿಸಿದ. ಹರೀಶ ಮಾತಾಡಲಿಲ್ಲ.

"ಮಮ್ಮೀ.. ನನ್ನ ಫ್ರೆಂಡ್ಸ್ ಬಂದಿದಾರೆ, ಇಲ್ಲೇ ಸುತ್ತಾಡಿಕೊಂಡು ಬರ್ತೀನಿ" ಎನ್ನುತ್ತಾ ಸಂಕೇತ ಬಾಗಿಲನ್ನು ದಾಟಿದ. ಜಗ್ಗು ರೂಮಿನಿಂದ ಹೊರಕ್ಕೆ ಬಂದ.

"ಏ ಹಾಳಾದೋನೇ ಇಲ್ಲೇ ಕುಕ್ಕುರುಬಡಿ... ಮಹಡಿ ಹತ್ತಿ ಗಿತ್ತಿ ಹೋದೆಯೋ ಕೊಂದು ಹಾಕಿ ಬಿಡ್ತೀನಿ" ಜಾನಕಿ ಕೂಗಿದರೂ, ಜಗ್ಗು ಅಡ್ಡಾ ದಿಡ್ಡಿ ಹೆಜ್ಜೆ ಹಾಕುತ್ತಾ ಮಹಡಿ ಹತ್ತಿದ ಜಾನಕಿ ತಲೆ ತಲೆ ಚಚ್ಚಿಕೊಂಡಳು. ಎಷ್ಟೋ ಹೊತ್ತಿನ ನಂತರ, ಜಗ್ಗು ಕೆಳಗೆ ಇಳಿದು ಬಂದ. ಅವನ ಮೂತಿಯೆಲ್ಲಾ ಚಾಕ್ಲೆಟಿನ ಅಂಟಾಗಿತ್ತು. ಚಾಕ್ಲೇಟಿನ ವಾಸನೆ ಮೂಗಿಗೆ ಬಡಿಯುತ್ತಿತ್ತು. ಕೈ ಬಾಯಿ ತೊಳೆಸಿ, ನಾಲ್ಕೇಟು ಹಾಕಿದಳು.

"ಪ್ರಾರಬ್ಧ ಹೋಗಬೇಡಾಂತಂದ್ರೂ ಹೋಗಿದೀಯಲ್ಲ, ಅದಕ್ಕೇ ಎಲ್ಲಾ ಬೈಯೋದು ನಿನ್ನನ್ನು" ಹಾಗೆ ಬೈದರೂ, ಸಂಕೇತ ಚಾಕ್ಲೇಟು ತಂದಿದಾನೆ, ಜಗ್ಗೂಗೆ ಕೊಟ್ಟಿಲ್ಲ ಎನ್ನುವ ವಿಷಯ ಅವಳನ್ನು ಚುಚ್ಚಿತು ಇವನಿಗೆ ಹೇಗೆ ವಾಸನೆ ತಿಳಿಯಿತೋ ನಾಯಿ ತರಹ ಮೂಸಿಕೊಂಡು ಹೋಗಿ ತಿಂದಿದಾನಲ್ಲ ಅಂತ ಕೋಪವೂ ಬಂತು. ಮತ್ತು ಒಂದ್ನಾಲ್ಕು ಏಟು ಹಾಕಿದಳು. ಕುಂಟಿಕೊಂಡೇ, ಕುಕ್ಕರನ್ನಿಟ್ಟು ಅನ್ನ ಮಾಡಿದಳು. ಹೋಟೆಲ್ಲಿನ ಸಾಂಬಾರು ಇತ್ತು. ಅವಳು ಊಟ ಮುಗಿಸುತ್ತಿದ್ದಂತೆಯೇ ಸುಮತಿ ಮನೆಗೆ ಬಂದಿದ್ದಳು.

"ಬೇಗ ಬಂದಿದೀಯ ಅಲ್ವಾ ?... ವಿಚಾರಿಸಿದಳು.

"ಹೂಂ... ಕಡೇ ಪಿರಿಯಡ್ ಕ್ಲಾಸು ಇರಲಿಲ್ಲ, ಅಲ್ಲೇ ಕೂತು ಮಾಡೋದೇನು ಅಂತ ಬಂದು ಬಿಟ್ಟೆ, ಸುಚಿತ್ರಾ ಬರ್ತೀನಿ ಅಂತ ಫೋನು ಮಾಡಿದ್ದಳು. ಅವಳ ಜೊತೆ ಷಾಪಿಂಗ್ ಹೋಗಬೇಕು... ನಿಮಗೂ ಏನಾದ್ರೂ ಬೇಕಾ ಆಂಟಿ !..."

"ಏನೂ ಬೇಡ" ಉದಾಸೀನತೆಯಿಂದ ನುಡಿದಳು. ಸುಮತಿ ಮೇಲೆ ಹತ್ತಿ ಬರುತ್ತಿದ್ದಂತೆಯೇ ಪಕ್ಕದ ರೂಮಿನ ಕಡೆ ಗಮನ ಹರಿಸಿದಳು. ರೂಮಿನ ಬಾಗಿಲಿಗೆ ಬೀಗ ಹಾಕಿತ್ತು. ಕಿರುನಗೆ ಮೂಡಿತ್ತು. ತನ್ನ ರೂಮಿನ ಕಡೆ ಬರುತ್ತಿದ್ದಂತೆಯೇ ಚಾಕ್ಲೇಟಿನ ವಾಸನೆ

ಮೂಗಿಗೆ ಬಡಿಯಿತು. ಬಾಗಿಲು, ಬಾಗಿಲ ಬಳಿಯ ನೆಲ ಎಲ್ಲಾ ಚಾಕ್ಲೇಟಿನ ಅಂಟಿನಿಂದ ಕೊಳಕಾಗಿತ್ತು. ನೆಲದ ಮೇಲೆ ಬಿದ್ದಿದ್ದ ಚಾಕ್ಲೇಟಿನ ರ್‍ಯಾಪರು್ರ ಎಲ್ಲವನ್ನು ತಿಳಿಸಿತ್ತು. ಸಂಕೇತ ಅವಳಿಗೆಂದು ಕೊಟ್ಟಿದ್ದ ಚಾಕ್ಲೇಟುಗಳನ್ನು ಅಲ್ಲೇ ಹಾಗೇ ಟೇಬಲ್ಲ ಬಳಿ ಇಟ್ಟಿದ್ದಳು. ಜಗ್ಗೂಗೆ ಇದು ಹೇಗೆ ತಿಳಿಯಿತು ? ನೆನ್ನೆ ದಿನ ಸಂಕೇತನ ರೂಮಿಗೆ ಹೋಗಿ ಅವಾಂತರ ಮಾಡಿದ್ದ. ಇವತ್ತು ಅಲ್ಲಿಗೆ ಬೀಗ ಹಾಕಿರುವುದರಿಂದ ತನ್ನ ರೂಮಿಗೆ ಬಂದು ಅವಾಂತರ ನಡೆಸಿದ್ದಾನೆ... ಎಂದುಕೊಂಡಳು. ಒಂದುಗಳಿಗೆ ಮೈಯೆಲ್ಲಾ ಉರಿದಂತಾಯ್ತು. ತಾನಿನ್ನು ಈಗ ಬರ್ತಿದೀನಿ. ಈಗ ಇದನ್ನೆಲ್ಲ ಕ್ಲೀನ್ ಮಾಡಬೇಕಲ್ಲ ಅಂತೆನ್ನಿಸಿದರೂ, ಸಂಕೇತ ಬರುವುದರೊಳಗೆ ಎಲ್ಲಾ ಒರೆಸಿ ಬಿಡಬೇಕು. ಇಲ್ಲದಿದ್ದರೆ ಏನಾದರೂ ಆಡಿಯೇ ಆಡುತ್ತಾನೆಂದು ಕೊಂಡಳು. ಒರೆಸತೊಡಗಿದಳು.

"ಏನ್ಮಾಡ್ತಿದೀಯೆ ? ನೀನೇ ಮನೆ ಒರೆಸಬೇಕಾ ? ಕೆಲಸದವಳು ಬರಲಿಲ್ವಾ ?"

ಸುಮತಿ ನಡೆದುದನ್ನೆಲ್ಲಾ ಸ್ನೇಹಿತೆಗೆ ವರದಿ ನೀಡಿದಳು. ಸಂಕೇತ ಬಂದಿರುವುದನ್ನು ತಿಳಿಸಿದಳು.

"ಓ ಸಂಕೇತ ಬಂದಿದಾನಾ ? ಹೇಗಿದಾನೆ ? ಇನ್ನು ಹ್ಯಾಂಡ್ಸಮ್ ಆಗಿರಬಹುದು. ನಿಂಗೇನನ್ನಿಸುತ್ತೆ ?" ಚಿಕ್ಕ ಹುಡುಗನಾಗಿದ್ದಾಗ ನೋಡಿದ್ದು.

"ನಂಗೇನನ್ನಿಸಬೇಕು ! ಈಗ್ಲೇ ಎರಡು ದಿನಗಳಿಂದ ತಾನೇ ನೋಡ್ತಿರುವುದು." ನಾನು ಅವನನ್ನ

"ಆದರೂ ಅವನು ಒಂಥರಾ... ಸ್ವಲ್ಪ ವಿಚಿತ್ರ... ಆದರೂ ಸ್ಮಾರ್ಟ್ ಬಾಯ್..."

"ನಿಂಗೇ ಎಲ್ಲಾ ಗೊತ್ತಲ್ಲ."

"ನಂಗೆ ಎಲ್ಲಾ ಗೊತ್ತಿಲ್ಲ. ಜಗ್ಗು ಇರೋ ವಿಷಯವೇ ಗೊತ್ತಿರಲಿಲ್ಲ."

"ನಿಜವಾಗಿಯೂ ?"

"ನಿಜವಾಗಲೂ ನಿನ್ನಾಣೆ... ಗೊತ್ತಿದ್ದಿದ್ರೆ ನಾನಂತೂ ನಿನ್ನನ್ನ ಈ ಮನೆಗೆ ಕಳಿಸುತ್ತಿರಲಿಲ್ಲ... ಬೇರೆ ಕಡೆ ಎಲ್ಲಾದ್ರೂ ವಿಚಾರಿಸಿದೆಯಾ ?"

"ಇಲ್ಲ. ನಿನ್ನ ಮದುವೆ ಡೇಟ್ ಫಿಕ್ಸ್ ಆಯ್ತಾ ?"

"ಹುಂ. ಡೇಟ್ ಪ್ರಿಪೋನ್ ಆಯ್ತು... ಇನ್ನು ಇಪ್ಪತ್ತು ದಿನಕ್ಕೆ ಮದುವೆ...

"ಅರೇ ವ್ಹಾ... ಯಾಕೇ ಅಷ್ಟು ಆತುರ...?" ಗೇಲಿ ಮಾಡುತ್ತಾ ಕೇಳಿದಳು.

"ನನಗಲ್ಲ ಆತುರ... ನನ್ನ ವುಡ್‌ಬೀಗೆ ಆತುರ..."

"ಪಾಪ, ನಿನ್ನನ್ನು ಬಿಟ್ಟು ಇರೋದು ಕಷ್ಟ ಆಗ್ತಾ ಇರಬಹುದು ಅವರಿಗೆ..."

''ರುಚಿ ರುಚಿಯಾಗಿ ಅಡಿಗೆ ತಿಂಡಿ ಮಾಡೋದನ್ನ ಕಲಿತ್ಕೋ. ಹೋಟೆಲ್ಲಿನ ಊಟ ಮಾಡಿ ಮಾಡೀ ಬೇಜಾರಾಗಿದೆ ಅಂತ ಹೇಳಿದ್ರು ಫೋನ್ನಲ್ಲಿ'' ಇಬ್ಬರೂ ನಕ್ಕರು.

''ಅಂತೂ, ಮನುಷ್ಯರಿಗೆ, ಊಟ, ತಿಂಡಿ, ತೀರ್ಥದ ಚಪಲ ಜಾಸ್ತಿ... ಸುತ್ತಿ ಬಳಸಿ ಅದೇ ಮಾತಿಗೆ ಬರ್ತಾರೆ ಅಲ್ವಾ...?''

''ಅದಕ್ಕೇ ಒಬ್ಬ ಅಡಿಗೆಯ ಹುಡುಗಿಯನ್ನು ಇಟ್ಕೊಳ್ಳೋಣ ಅಂತ ನೋಡ್ತಾ ಇದೀನಿ...''

''ಏಯ್ ಹುಶಾರೇ... ಆ ಅಡಿಗೆಯ ಹುಡುಗಿಯ ಕೈ ಊಟಮಾಡಿ ಮಾಡೀ, ಅವಳನ್ನೇ ಹೊಗಳಿದರೆ, ನೀನು ಸುಮ್ಮನಿರ್ತೀಯಾ ?''

''ಅಡಿಗೆಗೆ ಹುಡುಗನ್ನ ಇಟ್ಟುಕೊಂಡರೆ...''

''ಗಂಡು ಹುಡುಗರಿಗೆ ಅಡಿಗೆ ಕೆಲಸ ಏನು ಬರುತ್ತೆ !''

''ಹಾಗಾದ್ರೆ ಅಡಿಗೆ ಕೆಲಸ ಹೆಂಗಸರಿಗೆ ಮಾತ್ರ ಲಾಯಕ್ಕು ಅಂತೀಯ... ಹಾಗಾದ್ರೆ ನಾವುಗಳು ಇಷ್ಟು ಓದಿದ್ದು ದಂಡ...''

''ಅದೇ ಮಾತನ್ನು ನಮ್ಮಮ್ಮ ಪದೇ ಪದೇ ಹೇಳ್ತಾ ಇದ್ದದ್ದು. ಹುಡುಗಿಯರು ಎಷ್ಟು ಓದಿದರೇನು ! ಅಡಿಗೆ ಮನೆ ಕೆಲಸ, ಕಸ ಮುಸುರೆ ಕೆಲಸ ತಪ್ಪಿದ್ದಲ್ಲ ಅಂತ ಎಷ್ಟು ಸರಿ ಅಲ್ವಾ ! ಆ ಮಾತು !''

''ಹುಂ ಹೌದು. ಬೇಗ ಬೇಗ ಹೊರಡು... ರಸ್ತೇಲಿ ಮಾತನಾಡೋಣ...'' ನಾನು ಆಂಟಿ ಹತ್ತಿರ ಮಾತನಾಡ್ತಿರ್ತೀನಿ ಬೇಗ ಬಾ...'' ಕೆಲವೇ ನಿಮಿಷಗಳಲ್ಲಿ ಸ್ನೇಹಿತೆಯರಿಬ್ಬರೂ ಮನೆಯಿಂದ ಹೊರಟರು.

ಸೀಟಿ ಹೊಡೆಯುತ್ತಾ ಮೇಲೆ ಹತ್ತಿದವನು, ಬೀಗ ತೆಗೆಯುವ ಮುನ್ನ ಸುಮತಿಯ ರೂಮಿನ ಕಡೆ ಇಣುಕಿ ನೋಡಿದ. ಚಾಕ್ಲೇಟಿನ ವಾಸನೆ ! ಎಲ್ಲೋ ಒಬ್ಬಳೇ ಕೂತು ತಿನ್ನುತ್ತಿರಬಹುದೆಂದುಕೊಂಡು, ತಮಾಷೆಯಾಗಿ ಬಾಗಿಲ ಬಳಿಗೆ ಬಂದ. ಒಳಗೆ ಯಾರೂ ಇಲ್ಲ, ಬಾಗಿಲು ಹಾರು ಹೊಡೆದಿದೆ. ಅವಳೆಲ್ಲಿ ಹೋದಳು ? ಎಂದುಕೊಂಡು ಮೆಲ್ಲನೆ ಕಳ್ಳನಂತೆ ಅವಳ ರೂಮಿನೊಳಕ್ಕೆ ಕಾಲಿಟ್ಟ, ಟೇಬಲ್ ಮೇಲಿದ್ದ ಪುಸ್ತಕಗಳ ಮೇಲೆ ಕಣ್ಣಾಡಿಸಿದ. ಇದ್ದಕ್ಕಿದ್ದಂತೆ, ತಾನು ಮಾಡುತ್ತಿರುವುದು ಸರಿ ಅಲ್ಲ ಅಂತೆನ್ನಿಸಿದಾಗ, ಹೊರಕ್ಕೆ ಬಂದುಬಿಟ್ಟ..

''ಸಂಕೂ ಸಂಕೂ'' ಕೆಳಗಿನಿಂದ ತಾಯಿ ಕರೆದಿದ್ದಳು.

''ಏನು ? ಅಲ್ಲಿಂದಲೇ ಕೇಳಿದ್ದ.''

''ನಿನ್ನ ಊಟ ಆಯ್ತೇನೋ ...?''

"ಹುಂ. ಆಯ್ತು... ಇವತ್ತು ವಿಠ್ಠಲನ ಮನೇಲಿ ಊಟ ಮಾಡಿದೆ." ಜಾನಕಿ ಮತ್ತೇನನ್ನೂ ಕೇಳಲಿಲ್ಲ. ಇವನೂ ತನ್ನ ಪಾಡಿಗೆ ತಾನು ಕೈಯಲ್ಲಿ ಒಂದು ಪುಸ್ತಕ ಹಿಡಿದು ಮಲಗಿದ. ಎಚ್ಚರವಾದಾಗ, ಪಕ್ಕದ ರೂಮಿನಿಂದ ಯಾರೋ ಕಿಲಕಿಲನೆ ನಗುತ್ತಿರುವ ಧ್ವನಿ ಕೇಳಿ ಆಶ್ಚರ್ಯಗೊಂಡ." ಯಾರು ಬಂದಿರಬಹುದು ? ಸುಮತಿ ಒಬ್ಬಳೇ ಅಂತೂ ನಗುತ್ತಿಲ್ಲ"

"ನಾನಿನ್ನು ಬರ್ತೀನಿ ಕಣೇ... ಹೊತ್ತಾಯ್ತು..." ಸುಚಿತ್ರ ಹೊರಟಳು.

"ನಿನ್ನ ಸ್ಮಾರ್ಟ್‌ಬಾಯ್‌ನ ಮಾತಾಡಿಸುಲ್ವಾ ! ಮನೆಗೆ ಬಂದಿರುವ ಹಾಗಿದೆ."

"ಮಲಗಿದಾನೇನೋ ಬಿಡು..." ಸ್ನೇಹಿತೆ ಯಾರು ಎಂದು ನೋಡುವ ಕುತೂಹಲದಿಂದ ಸಂಕೇತ ಎದ್ದು ಹೊರಕ್ಕೆ ಬಂದ... ಸುಚಿತ್ರಳನ್ನು ಕಂಡು ಹುಬ್ಬೇರಿಸಿದ.

"ಏಯ್ ಸುಚಿತ್ರಾ... ಯಾವಾಗ್ಬಂದೆ! ವ್ಹಾಟ್ ಎ ಸರ್ಪ್ರೈಸ್ ?" ಸುಚಿತ್ರ ಸಂಕೇತನನ್ನೇ ಮೇಲಿನಿಂದ ಕೆಳಕ್ಕೆ ನೋಡಿದಳು.

"ಏನೋ ಸಂಕೇತ್, ಹಾಗೇ ಇದೀಯಲ್ಲೋ ಒಂದು ಚೂರೂ ಬದಲಾಗಿಲ್ಲವಲ್ಲೋ...?"

"ಬದಲಾಗುಕ್ಕೆ ನಾನೇನು ಓತಿಕೇತನಾ ?... ನೀನು ಹೇಗಿದೀಯ ? ಏನು ಬಂದಿದ್ದು?"

"ಸುಮತಿ ನನ್ನ ಫ್ರೆಂಡ್ ಅವಳ ಜೊತೆ ಷಾಪಿಂಗ್‌ಗೆ ಹೋಗಿದ್ದೆ."

"ಓ ! ಇವರು ನನಗೆ ಹೇಳಲೇ ಇಲ್ಲ."

"ನಮ್ಮ ಹುಡುಗಿಗೆ ಗೊತ್ತಿಲ್ಲ, ನಾವಿಬ್ರೂ ಚಿಕ್ಕವಯಸ್ನಲ್ಲಿ ಫ್ರೆಂಡ್ಸ್ ಅಂತ... ಎಷ್ಟು ದಿನದ ರಜ ?"

"ಆರುವಾರಗಳ ರಜ. ಒಂದು ವಾರ ಕಳೆದೇ ಹೋಯ್ತು. ಬಾಂಬೇಲಿ ಒಂದು ನಾಲ್ಕೈದು ದಿನ ಇದ್ದು ಬಂದೆ."

"ಇನ್ನೇನೇ ವಿಷಯ ? ಮದುವೆ ಗೊತ್ತಾಗಿದೆಯಂತೆ, ಮಮ್ಮಿ ಹೇಳಿದ್ದಾಗಿತ್ತು..."

"ಹುಂ ಇನ್ನು ಇಪ್ಪತ್ತು ದಿನಕ್ಕೆ ಮದುವೆ ಬಂದು ಇನ್ವಿಟೇಷನ್ ಕೊಡ್ತೀನಿ. ಖಂಡಿತಾ ಬರಬೇಕು. ತಪ್ಪಿಸ್ಕೋ ಬಾರದು."

"ಓ ಷೂರ್... ಹಾರ್ಟಿ ಕಂಗ್ರಾಜುಲೇಷನ್ಸ್" ಎಂದ ಅವಳ ಕೈ ಕುಲುಕಿ." ಈಗ ಬಂದೆ ಒಂದ್ನಿಮಿಷ ಎಂದು ಹೇಳಿ ತನ್ನ ರೂಮಿಗೆ ಬಂದು ಎರಡು ಪರ್‌ಫ್ಯೂಮರ್ ಬಾಟಲಿಗಳನ್ನು ತಂದ. ಒಂದನ್ನು ಸುಚಿತ್ರಳಿಗೆ ಕೊಟ್ಟ

"ಎ, ಸ್ಮಾಲ್ ಗಿಫ್ಟ್ ಫಾರ್ ವುಡ್ ಬೀ ಬ್ರೈಡ್" ಎಂದ. ಇನ್ನೊಂದನ್ನು ಸುಮತಿಯ ಕೈಗಿತ್ತ "ತಗೊಳ್ಳಿ ಇದು ನಿಮಗೆ" ಅಂತಂದ

''ನನಗಾ ? ನನಗ್ಯಾಕೆ... ಪ್ಲೀಸ್ ಬೇಡ'' ಎಂದಳು ನಿರಾಕರಿಸುತ್ತಾ.

''ಯಾಕೆ ಅಂತಂದ್ರೆ... ಉಪಯೋಗಿಸುಕ್ಕೆ...''

''ಸಾಕು, ಸುಮ್ಮನೇ ಜಂಭ ಆಡಬೇಡ, ಇಸ್ಕೋ...'' ಸುಚಿತ್ರ ಒತ್ತಾಯ ಮಾಡಿದಳು. ಸುಮತಿ ''ಥ್ಯಾಂಕ್ಸ್'' ಎಂದು ಹೇಳಿ, ಸೆಂಟ್ ಬಾಟಲಿಯನ್ನು ಕೈಗೆತ್ತಿಕೊಂಡಳು. ಮೂರು ಜನರೂ ಕೆಳಗಿಳಿದು ಬಂದರು ಸುಚಿತ್ರ, ಜಾನಕಿಗೆ ಹೇಳಿ ಹೊರಟಳು. ಸಂಕೇತ, ಆಟೋ ಸ್ಟ್ಯಾಂಡಿನ ತನಕ ಬರ್ತೀನಿ ಎಂದು ಹೇಳಿ ಅವಳ ಜೊತೆ ಹೊರಟ. ಸುಮತಿ ರಾತ್ರಿಯ ಅಡಿಗೆಯ ತಯಾರಿ ನಡೆಸಿದಳು. ಸಂಕೇತ ಅಲ್ಲಿ ಇಲ್ಲಿಸುತ್ತಾಡಿ ಎಷ್ಟೋ ಹೊತ್ತಿನ ನಂತರ ಮನೆಗೆ ವಾಪಸ್ಸಾದ. ಅಷ್ಟರೊಳಗೆ ಜಾನಕಿ ಜಗ್ಗೂಗೆ ಊಟ ಮಾಡಿಸಿ, ನಿದ್ದೆ ಮಾತ್ರೆಗಳನ್ನು ಕೊಟ್ಟು ರೂಮಿನಲ್ಲಿ ಕೂಡಿ ಹಾಕಿದಳು.

''ಮಮ್ಮೀ, ನಾವು ಫ್ರೆಂಡ್ಸ್‌ಗಳೆಲ್ಲರೂ ಎರಡು ದಿನ ಟ್ರಿಪ್ ಹೋಗ್ತಾ ಇದೀವಿ...'' ಊಟಕ್ಕೆ ಕುಳಿತಾಗ ಹೇಳಿದ.

''ಸರಿಯಪ್ಪಾ... ಯಾರ್‍ಯಾರು ಹೋಗ್ತೀರಿ ? ಎಲ್ಲೆಲ್ಲಿ ಹೋಗ್ತೀರಿ !

''ನಾವು ಎಲ್ಲರೂ ಅಂತ ಹೇಳಿದ್ನಲ್ಲ... ಮೈಸೂರು... ಮೈಸೂರಿನ ಸುತ್ತಮುತ್ತ...''

''ಮೈಸೂರಿಗಾ ? ಮತ್ತೆ ಮತ್ತೆ ಅಲ್ಲೇ ಹೋಗಿ ಏನು ಮಾಡ್ತೀರಿ ?''

''ಎಲ್ಲೋ ಒಂದು, ತಿರುಗಾಡಿ ಬರ್ತೀವಿ... ಮನೇಲೆ ಕೂತು ಮಾಡೋಕೆ ಏನಿದೆ ?'' ಜಾನಕಿ ಸುಮ್ಮನಾದಳು. ಮಲಗುವ ಮೊದಲು, ಸುಮತಿಯ ರೂಮಿಗೆ ಬಂದಿದ್ದ.'' ನಮ್ಮ ಜೊತೆ ನೀವೂ ಬನ್ನಿ ಸುಮತಿ... ಕರೆದ.

''ಇಲ್ಲ, ನನಗೆ ರಜ ಇಲ್ಲ, ಪೋರ್ಷನ್ಸ್ ಮುಗಿಸಬೇಕಾಗಿದೆ.'' ಸುಮತಿ ನಯವಾಗಿ ನಿರಾಕರಿಸಿದಳು. ಸಂಕೇತನಿಗೆ ಸಮಾಧಾನವಾಗಿರಲಿಲ್ಲ, ಆದರೂ ಮತ್ತೆ ಕರೆಯಲಿಲ್ಲ.

ಬೆಳಿಗ್ಗೆ ಮನೆಯ ಮುಂದೆ ವ್ಯಾನು ಬಂದು ನಿಂತಾಗ, ಸುಮತಿ ಇಣುಕಿ ನೋಡಿದಳು. ಸಂಕೇತನ ಸ್ನೇಹಿತರು. ಹರೀಶ ಹೊರಕ್ಕೆ ಧುಮುಕಿ ಇಳಿದು ಮನೆಯೊಳಕ್ಕೆ ಓಡಿಬಂದ...'' ರೆಡೀನಾ ಮೇಡಂ...'' ಅವಳನ್ನು ಉತ್ಸಾಹದಿಂದ ಕೇಳಿದ. ಅಷ್ಟರಲ್ಲಿ ಸಂಕೇತ ಸಣ್ಣ ಬ್ಯಾಗ್ ಹಿಡಿದು ಕೆಳಗಿಳಿದು ಬಂದ.

''ನಡೆಯೋ...'' ಸ್ನೇಹಿತನ ಹೆಗಲ ಮೇಲೆ ಕೈಹಾಕಿದ...

''ಚಿತ್ರಾಂಗದೆ ?'' ಪಿಸುದನಿಯಲ್ಲಿಕೇಳಿದ. ಕಣ್ಣುತ್ತ ನೋಡುತ್ತಿತ್ತು.

''ಚಿತ್ರಾಂಗದೆಯೂ ಇಲ್ಲ; ಮಾಯಾಂಗನೆಯೂ ಇಲ್ಲ, ನಡೀ ಸುಮ್ಮನೇ...

''ಯಾಕೋ... ನೀನೆಲ್ಲೋ ಸರಿಯಾಗಿ ಕರೆಯಲಿಲ್ಲ ಅಂತ ಕಾಣುತ್ತೆ...''

''ಅವಳು ನನ್ನ ಮಮ್ಮಿಯ ಪೇಯಿಂಗ್ ಗೆಸ್ಟ್... ನಮ್ಮ ಜೊತೆ ಯಾಕೆ ಬರ್ತಾಳೆ ?''

''ನಾನು ಕರೀಲಾ ?''

''ಟ್ರೈ ಮಾಡಪ್ಪಾ... ನನಗೇನು ?'' ಸಂಕೇತ ಮುಂದಾಗಿ ಹೋಗಿ ವ್ಯಾನಿನಲ್ಲಿ ಕುಳಿತ. ಅಷ್ಟರಲ್ಲಿ ಜಾನಕಿಯೂ ಅಲ್ಲಿಗೆ ಬಂದಳು.

''ಆಂಟೀ... ನೀವೂ ಬಂದಿದ್ರೆ ಚೆನ್ನಾಗಿತ್ತು...'' ಹರೀಶ ತಡವರಿಸಿದ.

''ನನ್ನ ಕಾಲು ಉಳುಕಿದೆ ಅಂತ ತಿಳಿದೂ ಕರೆತಿದೀಯಲ್ಲ... ಬ್ಲಫ್ ಮಾಡ್ತಿಲ್ಲ ತಾನೇ ?''

''ಇಲ್ಲ ಆಂಟೀ, ಎಲ್ಲರೂ ಬನ್ನಿ... ಗೋವಿಂದನ ಅಣ್ಣ ಅತ್ತಿಗೆ, ದಿನೇಶನ ತಂಗಿ, ವಿಠ್ಠಲನ ತಮ್ಮಂದಿರು, ಎಲ್ರೂ ಬರುತ್ತಿದಾರೆ... ಸುಮತಿಯೂ ಬಂದಿದ್ರೆ ಚೆನ್ನಾಗಿರುತ್ತಿತ್ತು.''

''ಸುಮತಿ ಕಾಲೇಜಿಗೆ ಹೊರಟಿದಾಳಲ್ಲ... ಬರುಲ್ಲ ಅಂತ ಕಾಣುತ್ತೆ'' ಹರೀಶ ಕೆಟ್ಟ ಮುಖ ಮಾಡಿದ... ಅವನು ವ್ಯಾನಿನ ಒಳಗೆ ಕುಳಿತಾಗ ಸಂಕೇತ ಗೇಲಿ ಮಾಡಿದ.

''ನೀನೂ ಸುಮತೀನ ಸರಿಯಾಗಿ ಕರೆಯಲಿಲ್ವಾ !''

''ಸುಮತಿ ಬರುಲ್ಲ ಅಂತ, ನಿಮ್ಮ ತಾಯೀನೇ ಹೇಳಿದ್ರು...''

''ಅಮ್ಮನ ಕಾಲಿನಲ್ಲಿ ನೋವು ಇನ್ನು ಇದೆ. ಯಾರಾದ್ರೂ ಒಬ್ಬರು ಜೊತೆಗಿರಲೇಬೇಕು. ಅದಕ್ಕೇ ಸುಮತಿ ಬರುಲ್ಲ ಅಂತ ಅಂದಿರಬಹುದು.''

''ಒಟ್ನಲ್ಲಿ ಒಂದು ಪ್ರೆಟ್ಟೀ ಕಂಪೆನಿ ಮಿಸ್ ಆಯಿತು.'' ಹರೀಶ ನಿಟ್ಟುಸಿರು ಬಿಟ್ಟಾಗ, ಗೋಪಾಲ ಅವನ ಬೆನ್ನ ಮೇಲೆ ಗುದ್ದಿದ ನಾವುಗಳೆಲ್ಲರೂ 'ಪ್ರೆಟ್ಟೀ' ಕಂಪೆನಿಗೆ ಸೇರಿದವರೇ... ಸಂಕೇತ ಮುಜುಗರಗೊಂಡಿದ್ದ. ಹರೀಶನ ಅತಿರೇಕ ಇಷ್ಟವಾಗಿರಲಿಲ್ಲ.'' ವ್ಯಾನು ಹೊರಟಿತು.

''ಸಂಕೇತ ಒತ್ತಾಯ ಮಾಡಿ ಕರೆದಿಲ್ಲ, ಕರೆದಿದ್ರೆ ಖಂಡಿತಾ ಬಂದಿರುತ್ತಿದ್ದರು'' ಹರೀಶ ಮತ್ತೆ ಮತ್ತೆ ನುಡಿದಾಗ, ವಿಠ್ಠಲ ಬೇಸರಗೊಂಡಿದ್ದ.

''ಅವರೇನು ಸಂಕೇತನ ತಂಗಿಯಲ್ಲ; ಇವನ್ಯಾಕೆ ಕರೀತಾನೆ ?''

''ನೀನ್ಯಾಕೆ ಅವನ ಪರ ವಹಿಸಿ ಮಾತನಾಡ್ತೀಯ ? ಒಂದೇ ಮನೆಯಲ್ಲಿ ಇದ್ದ ಮೇಲೆ ಏನೋ ಒಂದು ಸಂಬಂಧವಿದ್ದೇ ಇರುತ್ತೆ. ಕಾಲೇಜಿನಲ್ಲಿ ಲೆಕ್ಚರರ್ ಆಗಿದಾರೆ. ಫ್ರೀಯಾಗಿ ಎಲ್ಲರೊಡನೆ ಮಿಕ್ಸ್ ಆಗ್ತಾರೆ. ಬರದೇ ಇರುವುದಕ್ಕೆ ಬೇರೆ ಏನೋ ಕಾರಣವಿರುತ್ತದೆ. ?''

''ನಮ್ಮ ಮಮ್ಮೀನೂ ಬಂದಿದ್ರೆ ಅವಳೂ ಬಂದಿರೋಳು...''ಸಂಕೇತ ಬೇಕೂಂತ ನುಡಿದ. ಹರೀಶ 'ಎಸ್' ಎನ್ನುತ್ತಾ ತಲೆಯಾಡಿಸಿದ.

''ಮಮ್ಮೀ... ಡ್ಯಾಡೀ... ಗಳು ಬಂದ್ರೆ ಅದು ತೀರ್ಥಯಾತ್ರೆ ಆಗುತ್ತೆ ಸಿಗರೇಟು ಸೇದುವ ಹಾಗಿಲ್ಲ, ಡ್ರಿಂಕ್ಸ್ ತಗೊಳ್ಳುವ ಹಾಗಿಲ್ಲ, ಜೋಕ್ಸ್ ಕಟ್ ಮಾಡುವ ಹಾಗಿಲ್ಲ, ಅಂಥ ಟ್ರಿಪ್ ಏನೂ ಚೆನ್ನ ಅಂತ ನೀನೇ ಹೇಳ್ತಿದ್ದೆ...'' ಸಂಕೇತ ಮತ್ತೆ ನುಡಿದ.

''ನಿನ್ನನ್ನ ಚುಡಾಯಿಸ್ತಾ ಇದಾನೆ ಕಣೋ...'' ಗೋಪಾಲ ನುಡಿದ.

''ಚುಡಾಯಿಸ್ತಾ ಇದಾನೋ, ಬದಲಾಗಿದಾನೋ... ಸಂಕೇತ ಬದಲಾಗಿದಾನೆ ಅಂತ ನೀನೇ ಹೇಳಿದೆ'' ಹರೀಶನೂ ತಿರುಗಿ ನುಡಿದ.

''ಹೌದು... ಸಂಕೇತ ಬದಲಾಗಿದಾನೆ. ಅವನ ಮುಖದ ಕಳೆಯೇ ಬದಲಾಗಿ ಹೋಗಿದೆ. ಮೊದಲಿನ ಹಾಗೆ ಫ್ರೆಂಡ್ಸ್ ಮೇಲೆ ಪ್ರೀತೀನೇ ಇಲ್ಲ''

''ಷಟಪ್'' ಸಂಕೇತ ರೇಗಿದಾಗ ಎಲ್ಲರೂ ನಕ್ಕರು.

''ನೋಡಿದ್ಯಾ ? ಮಾತು ಮಾತಿಗೂ ರೇಗ್ತೀಯ ಏನಾಗಿದೆ ನಿನಗೆ ?''

''ನನಗೆ ಏನಾಗಿದೆ ? ಏನೂ ಇಲ್ಲವಲ್ಲ...''

''ಕನ್ನಡೀಲಿ ಮುಖ ನೋಡ್ಕೋ... ಏನಾಗಿದೆ ಅಂತ ಗೊತ್ತಾಗುತ್ತೆ...'' ಮೊದಲಿನ ಕಳೆಯೇ ನಿನ್ನ ಮುಖದಲ್ಲಿ ಇಲ್ಲ''

''ಕಳೆ, ಕೊಳೆ ಎಲ್ಲಾ ನಿನಗೆ... ನಿನ್ನ ನೋಟ ಬದಲಾಗಿದೆ ಅಷ್ಟೇ... ನಿಮ್ಮ ನಡೆ ನುಡಿ ಬದಲಾಗಿದೆ.''

''ನೋಡಿದ್ಯೇನೋ ಒಂದೆರಡು ವರ್ಷ ಅಮೆರಿಕಾದಲ್ಲಿದ್ದು ಬದಲಾಗಿರುವವನು ಇವನು... ನಮ್ಮನ್ನು ಬದಲಾಗಿದೀರಿ ಅಂತಾನಲ್ಲ, ನಮಗೂ ಅಮೆರಿಕಾಕ್ಕೆ ಹೋಗೋ ಛಾನ್ಸ್ ಸಿಕ್ಕಿದ್ದರೆ, ನಾವೂ ಇವನಂತೆಯೇ ಆಗಿರುತ್ತಿದ್ದೆವು. ಅದೇ ಸೇಮ್ ಓಲ್ಡ್ ಇಂಡಿಯಾದಲ್ಲಿ ನಾವು ಬದಲಾಗಲು ಸಾಧ್ಯಾನ ? ಹೇಗೆ ಮಾತಾಡ್ತಾನೆ ನೋಡು'' ಹರೀಶ ಮೂತಿ ಸೊಟ್ಟಗೆ ಮಾಡಿದ.

''ಪ್ಲೀಸ್ ಹರೀಶ್... ಈಗ ಏನೇನೋ ಅರ್ಥವಿಲ್ಲದ ಮಾತುಗಳೇಕೆ ? ನಾನು ತಿಂಡಿ ಸಹ ತಿಂದಿಲ್ಲ, ಹೊಟ್ಟೆ ಹಸಿಯುತ್ತಿದೆ. ಏನಾದ್ರೂ ತಿಂಡಿ ಇದೆಯಾ ?''

''ಅಮ್ಮ ಅವರೇ ಕಾಳು ಉಪ್ಪಿಟ್ಟು ಮಾಡಿಕೊಟ್ಟಿದ್ದಾಳೆ... ದೀಪಾ, ಎಲ್ಲರಿಗೂ ತಿಂಡಿ ಹಾಕಿಕೊಡೇ...'' ದಿನೇಶ ತಂಗಿಗೆ ಆರ್ಡರ್ ಕೊಟ್ಟ. ರಸ್ತೆಯ ಬದಿಯಲ್ಲಿ ವ್ಯಾನನ್ನು ನಿಲ್ಲಿಸಿದರು. ಎಲ್ಲರೂ ತಿಂಡಿ ತಿಂದರು. ಫ್ಲಾಸ್ಕಿನಲ್ಲಿದ್ದ ಕಾಫಿಯನ್ನು ಕುಡಿದರು. ಮತ್ತೆ ವ್ಯಾನು ಹೊರಟಿತು. ಸಂಕೇತ ಹಿಂದಿನ ಸೀಟಿನಲ್ಲಿ ಕುಳಿತು ಕಣ್ಣು ಮುಚ್ಚಿದ. ಮುಚ್ಚಿದ ಕಣ್ಣುಗಳ ಮುಂದೆ ಸುಮತಿ ಬಂದು ನಿಲ್ಲುತ್ತಿದ್ದಳು. ಅವಳ ಆಲೋಚನೆಯಲ್ಲೇ ನಿದ್ದೆಯನ್ನು ನಟಿಸಿದ.

ಮೈಸೂರು ಹಾಗೂ ಸುತ್ತಮುತ್ತಲಿನ ಪ್ರೇಕ್ಷಣೀಯ ಸ್ಥಳಗಳು ಅವರುಗಳಿಗೆ ಹೊಸದೇನಲ್ಲ. ಆದರೂ ಒಟ್ಟಾಗಿ ಸಮಯ ಕಳೆಯಲು ಹತ್ತಿರದ ಜಾಗವೇ ಸರಿ ಎನಿಸಿದ್ದರಿಂದ ದೂರದ ಸ್ಥಳಗಳಿಗೆ ಟ್ರಿಪ್ ಹಾಕ್ಕೊಂಡಿರಲಿಲ್ಲ. ಸಂಕೇತನಿಗೆ ಮೊದಲಿನಂತೆ, ಉತ್ಸಾಹದಿಂದ ಅವರೊಡನೆ ಬೆರೆತು ಓಡಾಡಲಾಗಿರಲಿಲ್ಲ. ಹರೀಶನ ಕೆಣಕುವ ಮಾತುಗಳು ಏನೋ ಹೊಸ ಅಲೆಯನ್ನು ಎಬ್ಬಿಸುತ್ತಿದ್ದವು. ಆಗೆಲ್ಲಾ ಸುಮತಿಯ ಮುಖ ಮತ್ತೆ ಮತ್ತೆ ಕಂಡು ಬರುತ್ತಿತ್ತು. ಎಲ್ಲರೂ ತಿರುಗಾಡಿದ ಸ್ಥಳವೇ. ಆದುದರಿಂದ, ಸಂಕೇತ ಮೌನದಿಂದ ಅವರುಗಳ ಜೊತೆ ತನ್ನ ಹೆಜ್ಜೆಯನ್ನು ಹಾಕುತ್ತಿದ್ದ. ಆಗಾಗ್ಗೆ ಹರೀಶನ ಕಡೆ ನೋಡುತ್ತಿದ್ದ. ಅವನು ದಿನೇಶನ ತಂಗಿಯೊಡನೆ ಏನೋ ಮಾತನಾಡಿ ನಗುತ್ತಿದ್ದ. ಸುಮತಿ ಬಂದಿದ್ರೆ, ಅವಳ ಜೊತೆ ಹೀಗೇ ಮಾತನಾಡುತ್ತಿದ್ದನೇನೋ ಅಂತಂದುಕೊಂಡಾಗ ಆ ಅನಿಸಿಕೆ ಮನಸ್ಸಿಗೆ ಹಿತವಾಗಿರಲಿಲ್ಲ. ಅವಳು ನಮ್ಮ ಜೊತೆಯಲ್ಲಿ ಬರದೇ ಇದ್ದುದೇ ಒಳ್ಳೆಯದಾಯಿತು ಅಂತಂದುಕೊಂಡ.

ಆ ರಾತ್ರಿ, ನಂಜನ ಗೂಡಿನಲ್ಲಿದ್ದ, ಗೋಪಾಲನ ಸೋದರ ಮಾವನ ಮನೆಯಲ್ಲಿ ಉಳಿದುಕೊಂಡರು. ಹಳೇಕಾಲದ ದೊಡ್ಡ ಮನೆ, ಮಹಡಿಯ ಮೇಲಿನ ವಿಶಾಲವಾದ ಹಜಾರದಲ್ಲಿ ಎಲ್ಲರಿಗೂ ಸ್ಥಳ ಸಾಕಾಗುವಷ್ಟಿತ್ತು. ದೊಡ್ಡ ಕುಟುಂಬದ ಸ್ನೇಹಪರರಾದ, ಅವರ ಮನೆಯವರು, ಅತಿಥಿಗಳನ್ನು ಬಹಳ ಆದರಿಂದ ಸತ್ಕರಿಸಿದರು.

ಬಿಸಿ ಬಿಸಿ, ಔತಣದ ಅಡಿಗೆ ಮಾಡಿಸಿದ್ದರು. ಎಲ್ಲರಿಗೂ ಬಾಳೆಯ ಎಲೆಯನ್ನು ಹಾಕಿ ಊಟಕ್ಕೆ ಬಡಿಸಿದರು. ಅವರೇ ಕಾಳಿನ ಮೇಲೋಗರ, ಹಪ್ಪಳ, ಸಂಡಿಗೆ, ಬಿಸಿಬಿಸಿಯಾದ ಗಸಗಸೆ ಪಾಯಸ, ಗರಿಗರಿ ಆಂಬೊಡೆ, ಒಂದಕ್ಕಿಂತ ಒಂದು ರುಚಿಯಾಗಿತ್ತು. ಮಲಗಲು ಎಲ್ಲರಿಗೂ ಹಾಸಿಗೆ, ಹೊದ್ದಿಕೆಗಳನ್ನು ಒದಗಿಸಿದ್ದರು. ಯಾರೋ ಪರಿಚಯವಿಲ್ಲದವರ ಮನೆ, ಸಂಕೇತನಿಗೆ ನಿದ್ದೆ ಬಂದಿರಲಿಲ್ಲ, ಅವನ ಪಕ್ಕದಲ್ಲಿ ಮಲಗಿದ್ದ ಹರೀಶನೂ ಹೊರಳಾಡುತ್ತಿದ್ದ.

"ಯಾಕೋ ನಿದ್ದೇನೇ ಬರ್ತಿಲ್ಲ... ಚಳಿ ಬೇರೆ... ಸ್ಮೋಕ್ ಮಾಡೋಣ್ವಾ ?" ಹರೀಶ ಕೇಳಿದ.

"ಇಲ್ಲಿ ಬೇಡ. ವಾಸನೆ ಬರುತ್ತೆ. ಎಲ್ರೂ ಏನಂದುಕೊಳ್ತಾರೆ ?"

"ಹಾಗಾದ್ರೆ ಹೊರಗೆ ಎಲ್ಲಾದ್ರೂ ಹೋಗೋಣ್ವಾ ? ಡ್ರಿಂಕ್ಸ್ ತಂದಿದೀನಿ... ಸ್ವಲ್ಪ ತಗೋಳ್ಳೋಣ್ವಾ ?"

'ಬರೀ ನಾವು ನಾವೇ ಇದ್ದಿದ್ರೆ ತಗೋಬಹುದಾಗಿತ್ತು. ಹುಡುಗಿಯರು, ಚಿಕ್ಕವರೂ ಇದಾರೆ... ಬೇಡ ಬಿಡು" ಹರೀಶ ಕಿಸಕ್ಕನೆ ನಕ್ಕ.

"ಇದ್ಯಾವಾಗ ಇಷ್ಟು ಮಡಿ ಕಲಿತೆಯಪ್ಪಾ. ಇದೆಲ್ಲಾ ಆ ಚಿತ್ರಾಂಗದೆಯ ಪ್ರಭಾವವೇ ಇರಬೇಕು" ತಮಾಷೆ ಮಾಡಿದ.

"ಚಿತ್ರಾಂಗದೆಯೂ ಅಲ್ಲ, ಯಾವ ಗದೆಯೂ ಅಲ್ಲ. ನನಗ್ಯಾಕೋ ಮೂಡೇ ಇಲ್ಲ." ಬೇಸರದಿಂದ ನುಡಿದ.

"ಅದು ನಿನ್ನ ಬಿಹೇವಿಯರ್‌ನಲ್ಲೇ ಗೊತ್ತಾಗ್ತಿದೆ. ಏನಾಗ್ತಿಗೆ ನಿನಗೆ ?"

"ಏನೋ ಗೊತ್ತಿಲ್ಲ" ಅಂತ ಹೇಳಿದರೂ, ಏನೋ ಕಸಿವಿಸಿ ಸ್ಮೋಕ್, ಡ್ರಿಂಕ್ಸ್ ಯಾವುದೂ ಹೊಸದಲ್ಲ. ಈಗ ಅದಿಲ್ಲ ಅಂತ ಬೇಜಾರೇನೂ ಆಗ್ತಿಲ್ಲ. ಯಾಕೋ ಏನೋ ಈ ಟ್ರಿಪ್ಪು ಸಹ ತನಗೆ ಮುದವನ್ನು ನೀಡುತ್ತಿಲ್ಲ ಎಂದು ಅರಿವಾಗಿತ್ತು. ಇದಕ್ಕೆ ಕಾರಣ ಅಮೆರಿಕಾನೋ, ಅಥವಾ ಸುಮತಿಯೋ ಅಂತ ಕ್ಲಿಯರ್ ಆಗಿರಲಿಲ್ಲ. ಇವರುಗಳೆಲ್ಲ ಹೇಳುವುದು ನಿಜ. ತಾನು ಬದಲಾಗುತ್ತಿದ್ದೇನೆ... ಆದರೆ ಅದು ಸರಿಯೋ ತಪ್ಪೋ ಮತ್ತೆ ಗೊಂದಲದೊಳಕ್ಕೆ ಬಿದ್ದ. ಮೇಲ್ಚಾವಣಿಯನ್ನು ದಿಟ್ಟಿಸುತ್ತಾ ಮಲಗಿದ.

ಬೃಂದಾವನ ಗಾರ್ಡನ್ಸ್‌ನಲ್ಲಿ ಗೋವಿಂದನ ಅಣ್ಣ ಅತ್ತಿಗೆ, ಕೈ ಕೈ ಹಿಡಿದು, ಪಿಸುದನಿಯಲ್ಲಿ ಮಾತನಾಡುತ್ತಿದ್ದರು, ಕಿಸಕಿಸನೆ ನಗುತ್ತಿದ್ದರು. ಈಗ ಅವರಿಬ್ಬರೂ ಇಲ್ಲೇ ಎಲ್ಲೋ ಮಲಗಿದ್ದಾರೆ. ಅಂತಂದು ಕೊಂಡಾಗ ಸುಮತಿಯ ನೆನಪಾಗಿತ್ತು. ಈಗ ಅವಳೂ ಗಾಢ ನಿದ್ದೆಯಲ್ಲಿ ಮುಳುಗಿರಬಹುದು ಎಂದುಕೊಂಡ. ನನ್ನ ನಿದ್ದೆಯನ್ನು ಕೆಡಿಸಿ ತಾನು ಹಾಯಾಗಿ ಮಲಗಿದ್ದಾಳಲ್ಲ ಎಂದುಕೊಂಡಾಗ ಅಸೂಯೆಯ ಛಾಯೆ ಮೂಡಿತು.

ಬೆಳಿಗ್ಗೆ ನದಿಯಲ್ಲಿ ಸ್ನಾನ ಮಾಡುವವರು ಮಾಡಿದರು ಎಲ್ಲರೂ ನಂಜುಂಡೇಶ್ವರನ ದರ್ಶನ ಮಾಡಿದರು. ಇಳಿದುಕೊಂಡಿದ್ದವರ ಮನೆಯಲ್ಲಿಯೇ ತಿಂಡಿ ಕಾಫಿ ಮುಗಿಸಿ ಅಲ್ಲಿಂದ ಶ್ರವಣ ಬೆಳಗೊಳಕ್ಕೆ ಹೊರಟರು. ಬೆಟ್ಟವನ್ನು ಹತ್ತಿ ಬಾಹು ಬಲಿಯ ಬಳಿಗೆ ಬಂದರು. ಆ ಭವ್ಯ ಮೂರ್ತಿಯನ್ನು ನೋಡಿ, ಆಯಾಸವೆಲ್ಲಾ ಒಮ್ಮೆಗೇ ಮಾಯವಾದಂತಾಯಿತು. ತೀರ್ಥಂಕರರನ್ನು ನೋಡಿದ್ದಾಯ್ತು. ಬಸದಿಗಳನ್ನು ವೀಕ್ಷಿಸಿದ್ದಾಯ್ತು. ಅಲ್ಲಿಂದ ಹಳೇಬೀಡು ಬೇಲೂರುಗಳ ದಿಕ್ಕಿಗೆ ವ್ಯಾನು ಓಡಿತು. ದಾರಿಯಲ್ಲಿ ಅಲ್ಲಿ ಇಲ್ಲಿ ಹೊಟ್ಟೆ ತುಂಬಿಸಿಕೊಂಡು ಬೆಂಗಳೂರಿನ ದಾರಿ ಹಿಡಿದರು. ಮಧ್ಯರಾತ್ರಿಯ ಹೊತ್ತಿಗೆ ಬೆಂಗಳೂರನ್ನು ತಲುಪಿದರು. ಮೊದಲು ಹರೀಶನ ಮನೆಯ ಮುಂದೆ ವ್ಯಾನು ನಿಂತಾಗ, ಅವನು ಸಂಕೇತನನ್ನು ಕರೆದ.

"ಈ ರಾತ್ರಿ ಇಲ್ಲೇ ನಮ್ಮ ಮನೇಲೇ ಇದ್ದು ಬಿಡು. ಮಾತಾಡಿದ ಹಾಗೇ ಆಗಲಿಲ್ಲ ನಿನ್ನ ಹತ್ತಿರ."

"ಸಾರಿ ಫ್ರೆಂಡ್... ಈಗ ಮನೆಗೇ ಹೋಗ್ತೀನಿ. ಮಮ್ಮೀಗೂ ಹುಶಾರಿರಲಿಲ್ಲ... ಹೇಗಿದಾಳೋ ?" ಹರೀಶ ಬೆರಗಾಗಿ ಅವನನ್ನೇ ನೋಡಿದ.

"ಕೇರ್ ಟೇಕರ್ ಇದಾರಲ್ಲ... ನಿನಗೇನೋ ಚಿಂತೆ ?"

ಸುಮತಿಯನ್ನು ಕುರಿತು ಹೇಳುತ್ತಿದ್ದಾನೆಂದು ಅರ್ಥವಾಗಿತ್ತು. ಹೌದು ಅದು ನಿಜ

ಸುಮತಿ, ತನಗಿಂತ ಹೆಚ್ಚಾಗಿ ಅಮ್ಮನನ್ನು ನೋಡಿಕೊಳ್ಳುತ್ತಿದ್ದಾಳೆ... ಆ ಆತಂಕವಿಲ್ಲ. ಆದರೂ ಮನೆಯ ಕಡೆ ಮನಸ್ಸು ಸೆಳೆಯುತ್ತಿದೆ ಏಕೆ ? ಏನೂ ಮಾತನಾಡಲಿಲ್ಲ. ತನ್ನ ಮನೆಗೇ ಹೊರಟ.

ಸುಮತಿ ಬಂದು ಮುಂಬಾಗಿಲನ್ನು ತೆಗೆಯುವಳೇನೋ ಎಂದು ನಿರೀಕ್ಷಿಸಿದ್ದವನಿಗೆ ನಿರಾಸೆಯಾಗಿತ್ತು. ಬಾಗಿಲು ತೆರೆಗೆದವಳು ರಾಜಮ್ಮ. ಆಕಳಿಸುತ್ತಾ ನಿಂತವಳನ್ನು ಕಂಡು ಮುಖ ಸಿಂಡರಿಸಿದ.

"ನೀನೇನ್ಮಾಡ್ತಿದೀಯ ಇಲ್ಲಿ?" ಸಿಡುಕಿದ.

"ನೀವೂ ಊರ್ನಾಗಿರಲಿಲ್ಲವಲ್ಲ. ಇಲ್ಲೇ ಮನಕ್ಕೋ ಬಾ ಅಂತ ಅಮ್ನೋರು ಏಳಿದ್ರು... ಬಂದೆ"

"ಸರಿ ಸರಿ" ಎನ್ನುತ್ತಾ ಮೆಟ್ಟಿಲ ಬಳಿಗೆ ಬಂದ.

"ಊಟ ಮಾಡ್ತೀರಾ ಸಂಕಪ್ಪ?"

"ಏನೂ ಬೇಡ... " ಎನ್ನುತ್ತಾ ಮಹಡಿ ಏರಿದ... ಸುಮತಿಯ ರೂಮಿನ ಬಾಗಿಲನ್ನು ಹಾಕಿರಲಿಲ್ಲ. ಮಲಗಿದ್ದಾಳೋ ಏನೋ ಎಂದುಕೊಂಡು ಸದ್ದಾಗದಂತೆ ತನ್ನ ರೂಮಿಗೆ ಬಂದ. ಹಾಸಿಗೆಯ ಮೇಲೆ ಉರುಳಿಕೊಂಡರೂ, ಏನೋ ತಳಮಳ ಸುಮತಿಯನ್ನು ಎಬ್ಬಿಸಿ, ತಾನು ಟ್ರಿಪ್ ಹೋಗಿ ಬಂದುದರ ವರದಿ ಒಪ್ಪಿಸಿದರೇ ಎಂದುಕೊಂಡಾಗ, ಕಿರುನಗೆ ಬಂತು. ವಿವರವಾಗಿ ಹೇಳುವುದಕ್ಕೆ ತನಗೇನು ಗೊತ್ತಿದೆ... ಎಲ್ಲೆಲ್ಲಿ ತಿರುಗಿದರೋ, ಏನೇನು ನೋಡಿದರೋ... ಸುಮ್ಮನೇ ಅವರುಗಳ ಜೊತೆಯಲ್ಲಿ ತಿರುಗಾಡಿದ್ದ. ಶ್ರವಣ ಬೆಳಗೊಳದ ಗೊಮ್ಮಟೇಶ್ವರನನ್ನು ಕಣ್ತುಂಬಾ ನೋಡಿದ್ದು ಮಾತ್ರ ನೆನಪಿದೆ... ಅದನ್ನೇ ಅವಳಿಗೆ ಹೇಳ್ತೀನಿ ಅಂತಂದುಕೊಂಡು ಎದ್ದ. ಅವಳ ರೂಮಿನ ಬಾಗಿಲ ಬಳಿ ನಿಂತು ಮೆಲ್ಲಗೆ ಬಡಿದ.

ಯಾರು ? ಯಾರು ? ಎಂದು ರಾಜಮ್ಮ ಕೆಳಗಿನಿಂದ ಕೇಳಿದಾಗ, ಬೆದರಿ, ಸದ್ದಾಗದಂತೆ ಮತ್ತೆ ತನ್ನ ರೂಮಿಗೆ ಬಂದು ಮಲಗಿದ..." ಥೂ ಇವಳೊಬ್ಬಳು ನನ್ನ ಮೂಡ್‌ನೇ ಕೆಡಿಸಿಬಿಟ್ಟಳು ಎಂದು ಬೈದುಕೊಂಡು, ಮುಸುಕು ಬೀರಿ ಮಲಗಿದ. ಬೆಳಿಗ್ಗೆ ಎಚ್ಚರವಾದಾಗ ತುಂಬ ಹೊತ್ತಾಗಿತ್ತು. ಸೆಕೆ ಎನಿಸಿದಾಗ, ಹೊದೆದಿದ್ದ ರಗ್ಗನ್ನು ಝಾಡಿಸಿ ಎದ್ದ. ಎಷ್ಟು ಬೆಳಕಾಗಿದೆ, ಒಂಭತ್ತೋ ಹತ್ತೋ ಗಂಟೆ ಇರಬೇಕು ಎಂದುಕೊಂಡು ಕೆಳಗಿಳಿದು ಬಂದ.

ಡೈನಿಂಗ್ ಟೇಬಲ್ ಮೇಲೆ, ರಾಜಮ್ಮ ಹೋಟೆಲ್ಲಿನಿಂದ ತಂದ ತಂಡಿ ಘಮಗುಟ್ಟುತ್ತಿತ್ತು. ಅಡಿಗೆ ಮನೆಯಲ್ಲಿಜಾನಕಿ ಇದ್ದಳು.

"ಮಮ್ಮೀ ಹೇಗಿದೀಯ ! ಕಾಲು ನೋವು ಹೇಗಿದೆ ?" ವಿಚಾರಿಸಿದ. ಜಾನಕಿಗೆ ಆಶ್ಚರ್ಯವಾಗಿತ್ತು. "ಪರವಾಗಿಲ್ಲ" ಎನ್ನುತ್ತಾ ಕಾಫಿಯ ಬಟ್ಟಲನ್ನು ನೀಡಿದಳು.

ಹೇಗಿತ್ತು ಟ್ರಿಪ್ ಎಂದು ಜಾನಕಿಯೂ ಕೇಳಲಿಲ್ಲ. ಇವನೂ ಹೇಳಲಿಲ್ಲ. ಸುಮತಿಯೇ ಕಾಣುತ್ತಿಲ್ಲವಲ್ಲ ಕಾಲೇಜಿಗೆ ಹೋಗಿರಬಹುದೇನೋ ಎಂದುಕೊಂಡು ಅಲ್ಲಿದ್ದ ನ್ಯೂಸ್ ಪೇಪರನ್ನು ಕೈಗೆ ತೆಗೆದುಕೊಂಡ. ಓ ಇವತ್ತು ಭಾನುವಾರ... ತನಗೆ ಭಾನುವಾರ ಅಂತ ಸಹ ಗೊತ್ತಾಗಲಿಲ್ಲ... ಇವತ್ತು ಕಾಲೇಜಿಗೆ ರಜ... ಇಷ್ಟು ಬೆಳಿಗ್ಗೆಯೇ ಸುಮತಿ ಎಲ್ಲಿಗೆ ಹೋಗಿರಬಹುದು ? ಸುಚಿತ್ರಳ ಮನೆಗೆ ಹೋಗಿರಬಹುದೇ ? ಸುಮ್ಮನೆ ತಲೆಕೆಡಿಸಿಕೊಂಡ ಯಾಕೋ ಏನೋ ತಾಯಿಯನ್ನು ಕೇಳುವ ಮನಸ್ಸಾಗಲಿಲ್ಲ. ಎಲ್ಲಿಗಾದರೂ ಹೋಗಲಿ ? ತನಗೇಕೆ ಅಂತಂದುಕೊಂಡರೂ. ಅವಳಿಲ್ಲದ ಕೊರತೆ ಎದ್ದು ಕಾಣಿಸುತ್ತಿದೆ ಅಂತೆನ್ನಿಸಿತು. ವಿನಾಕಾರಣ ಅವಳ ಮೇಲೆ ಅಸಮಾಧಾನ ಮೂಡಿತ್ತು.

ಆ ದಿನ ಕಳೆಯಿತು. ಸ್ನೇಹಿತರು ಯಾರೂ ಬಂದಿರಲಿಲ್ಲ. ಎಲ್ಲರೂ ಆಯಾಸ ಗೊಂಡಿದ್ದರು. ಅವರವರ ಮನೆಯಲ್ಲಿ ರೆಸ್ಟ್ ತಗೊಂಡರು. ಸಂಕೇತ ತನ್ನ ರೂಮಿನಲ್ಲೇ ಕಾಲ ಕಳೆದ ಬೇಸರವನ್ನು ನೀಗಿಸಲು ಸಿಗರೇಟುಗಳನ್ನು ಒಂದರ ಮೇಲೊಂದು ಹತ್ತಿಸಿದ. ಬಾಲ್ಕನಿಯಲ್ಲಿ ಸುತ್ತಾಡಿದ. ಸಮಯವನ್ನು ಕಳೆಯುವುದು ಕಷ್ಟವೆನಿಸಿತ್ತು. ಕೈಯಲ್ಲಿ ನೆಪ ಮಾತ್ರಕ್ಕೆ ಒಂದು ಪುಸ್ತಕವನ್ನು ಹಿಡಿದರೂ, ನಾಲ್ಕು ಲೈನು ಓದುವಷ್ಟರಲ್ಲಿ ಬೇಸರ ಬಂದಿತ್ತು. ಇವಳೇಕೆ ತನ್ನನ್ನು ಹೀಗೆ ಕಾಡುತ್ತಿದ್ದಾಳೋ ಎಂದುಕೊಂಡು, ತಾನು ತಂದಿದ್ದ ಡ್ರಿಂಕ್ಸನ್ನು ಹೊರತೆಗೆದ.

ರಾತ್ರಿ ಡೈನಿಂಗ್ ಟೇಬಲ್ ಬಳಿ, ಜಾನಕಿ ಅವನ ಕೆಂಪಡರಿದ ಕಣ್ಣುಗಳನ್ನೇ ನೋಡಿದಳು. ಆಯಾಸ ಹೆಚ್ಚಾಗಿರಬಹುದೆಂದು ಕೊಂಡಳು ಮೇಲೆ ಹತ್ತಿಹೋಗಲು ಮನಸ್ಸಾಗದೇ ಅಲ್ಲೇ ಸೋಫಾದ ಮೇಲೆ ಕುಳಿತು, ಟಿ.ವಿ. ಆನ್ ಮಾಡಿದ. ಜಾನಕಿ ತನ್ನ ರೂಮಿನ ಬಾಗಿಲನ್ನು ಹಾಕಿಕೊಂಡಳು. ಯಾವುದೋ ಇಂಗ್ಲಿಷ್ ಮೂವಿ ಬರುತ್ತಿತ್ತು. ಯಾವುದೋ ಮ್ಯಾಚ್ ಬರುತ್ತಿತ್ತು. ಒಂದರ ಮೇಲೂ ಅವನ ಗಮನವಿಲ್ಲ. ಸುಮತಿ ಎಲ್ಲಿ ? ಸುಮತಿ ಎಲ್ಲಿ ? ಇದ್ದಕ್ಕಿದ್ದಂತೆ ಎಲ್ಲಿ ಮಾಯವಾದಳು ? ಸ್ನೇಹಿತೆಯ ಮನೆಗೆ ಹೋಗಿದ್ದರೂ, ಇಷ್ಟು ಹೊತ್ತಿಗೆ ಬರಬೇಕಿತ್ತಲ್ಲವೆ ? ಟಿ.ವಿ. ಪಾಡಿಗೆ ಟಿ.ವಿ. ಉರಿಯುತ್ತಿತ್ತು. ಇವನಿಗೆ ಯಾವಾಗಲೋ ನಿದ್ದೆ ಹತ್ತಿತ್ತು.

ಮನೆಯ ಬಳಿ ಆಟೋ ನಿಂತ ಸದ್ದು ಕೇಳಿದಾಗ ಎಚ್ಚರವಾಗಿತ್ತು. ಓಹ್ ತಾನು ಇಲ್ಲೇ ಮಲಗಿಬಿಟ್ಟಿದ್ದೆ ಎಂದುಕೊಳ್ಳುವಷ್ಟರಲ್ಲಿ ಗೇಟು ಸದ್ದಾಗಿತ್ತು. ರಾಜಮ್ಮ ಯಾಕೆ ಇಷ್ಟು ಬೇಗ ಬಂದಳು ಎಂದುಕೊಂಡು, ಕಿಟಕಿಯ ಪರದೆ ಸರಿಸಿ ನೋಡಿದ. ಸುಮತಿ ! ಕೈಯಲ್ಲಿ ಕಿಟ್‌ಬ್ಯಾಗ್ ಹಿಡಿದು, ಗೇಟಿನ ಬಳಿ ನಿಂತಿದಾಳೆ... ಅಸಹನೆ, ಕೋಪ, ಸಮಾಧಾನ, ಸಂತೋಷ ಎಲ್ಲಾ ಭಾವನೆಗಳೂ ಒಗ್ಗೂಡಿದವು. ಅವಳು ಬೆಲ್ ಮಾಡುವುದಕ್ಕೆ ಮೊದಲೇ ಬಾಗಿಲನ್ನು ತೆಗೆದ. ಅವಳು ಅವನನ್ನು ನಿರೀಕ್ಷಿಸಿರಲಿಲ್ಲವಾದುದರಿಂದ ಗಲಿಬಿಲಿಗೊಂಡಳು.

''ನಿಮ್ಮ ಹತ್ತಿರ ಐದು ರೂಪಾಯಿ ಛೇಂಜ್ ಇದೆಯಾ ? ಆಟೋದವನಿಗೆ ಕೊಡಬೇಕು'' ಎನ್ನುತ್ತಾ ಕಿಟ್‌ಬ್ಯಾಗನ್ನು ಕೆಳಗಿಟ್ಟಳು... ನೈಟ್‌ಸೂಟ್ ತೊಟ್ಟಿದ್ದನಾದ್ದರಿಂದ ಜೇಬಿನಲ್ಲಿ ಹಣವಿರಲಿಲ್ಲ. ಒಂದೇ ಏಟಿಗೆ ಮೆಟ್ಟಿಲುಗಳನ್ನೇರಿ, ಕೆಲವೇ ಸೆಕೆಂಡುಗಳಲ್ಲಿ ಪರ್ಸು ಹಿಡಿದು ಬಂದಿದ್ದ. ಐದು ರೂಪಾಯಿನ ಎರಡು ನೋಟುಗಳನ್ನು ಅವಳ ಮುಂದೆ ಹಿಡಿದ. ಅವಳು ಒಂದು ನೋಟನ್ನು ಮಾತ್ರ ತೆಗೆದುಕೊಂಡು ಆಟೋದವನಿಗೆ ಕೊಡಲೆಂದು ಹೋದಳು. ಇವನಿಗೆ ಏನನ್ನಿಸಿತೋ ಏನೋ ಅವಳ ಲಗೇಜನ್ನು ಮೇಲೆ ತೆಗೆದುಕೊಂಡು ಹೋಗಿ ಅವಳ ರೂಮಿನಲ್ಲಿಟ್ಟ ಸುಮತಿ ಒಳಗೆ ಬರುವಷ್ಟರಲ್ಲಿ ಜಾನಕಿಯೂ ಎದ್ದು ಬಂದಿದ್ದಳು. ಸುಮತಿ ಆಂಟಿಯೊಡನೆ ಮಾತನಾಡುತ್ತಾ ನಿಂತಳು. ಎಷ್ಟು ಹೊತ್ತಾದರೂ, ಸುಮತಿ ಮಹಡಿಗೆ ಬರದಿದ್ದಾಗ, ಸಂಕೇತ ಮತ್ತೆ ಕೆಳಗಿಳಿದ.

''ಮನೇಲಿ ಎಲ್ಲಾ ಚೆನ್ನಾಗಿದಾರಾ ? ಲಗ್ನ ಪತ್ರಿಕೆ ಸಮಾರಂಭ ಚೆನ್ನಾಗಿ ನಡೀತಾ ?'' ಜಾನಕಿ ಪ್ರಶ್ನಿಸುತ್ತಿದ್ದಳು ಸಂಕೇತ ಅಲ್ಲೇ ಮೆಟ್ಟಿಲ ಬಳಿ ನಿಂತ.

''ಹಾಗಾದ್ರೆ ಇವಳು ತನ್ನೂರಿಗೆ ಹೋಗಿದ್ದಳು ! ಎಂಗೇಜ್‌ಮೆಂಟ್ ಯಾರದ್ದು ? ಇವಳದ್ದೇ ಇರಬೇಕು ''ಅಂತಂದುಕೊಂಡಾಗ ಉತ್ಸಾಹವೆಲ್ಲಾ ಝುರ್‌ರನೆ ಇಳಿದಂತಾಗಿತ್ತು. ತಾನೆಂತಹ ಫೂಲ್... ಇವಳಿಗಾಗಿ ತಲೆಕೆಡಿಸಿಕೊಂಡೆನಲ್ಲ'' ಎಂದು ತನ್ನನ್ನು ತಾನೇ ಹಳಿದುಕೊಂಡ. ಹಾಗೇ ಮತ್ತೆ ತನ್ನ ರೂಮಿಗೆ ಹಿಂತಿರುಗಿದ.

''ಆಂಟೀ.... ಇಲ್ಲೇ ನನ್ನ ಕಿಟ್‌ಬ್ಯಾಗ್ ಇಟ್ಟಿದ್ದೆ. ಕಾಣ್ತಾ ಇಲ್ಲ..'' ಸುಮತಿ ತಡಕಾಡಿದಳು.

''ಅರೇ ! ಇಷ್ಟು ಬೇಗ ಎಲ್ಲಿ ಮಾಯವಾಯ್ತು ! ಜಗ್ಗೂ ಇನ್ನೂ ಎದ್ದೆ ಇಲ್ಲ.'' ಸುಮತಿ ಜಾನಕಿಯನ್ನೇ ನೋಡಿದಳು. ಆ ಮೊದಲ ದಿನ ನೆನಪಾಗಿತ್ತು.

''ಸಂಕೂ ಏನಾದ್ರೂ ತೆಗೆದಿಟ್ಟನೋ ಏನೋ ?'' ಗೊಣಗಿದಳು.

''ಅವನೇಕೆ ತೆಗೆದಿಡ್ತಾನೆ ? ನೋಡಿದ್ರೆ ಹಾಗೆಲ್ಲಾ ಸಹಾಯ ಮಾಡುವವನಂತೆ ಕಾಣಲಿಲ್ಲ ಅಂತಂದುಕೊಂಡರೂ, ನೋಡೋಣ ಅಂತಂದುಕೊಂಡಳು'' ಅದರಲ್ಲಿ ತಿಂಡಿಗಳಿದ್ದವು ಜಗ್ಗೂಗೆ ಅಂತ ತಂದಿದ್ದೆ.'' ಎನ್ನುತ್ತಾ ಮಹಡಿ ಹತ್ತಿದಳು.

''ಸರಿ ಹಾಗಾದ್ರೆ, ನನಗೆ ತಿಳಿಯದಂತೆ ಅವನೇ ಎದ್ದು ಬಂದು, ಕಿಟ್ ಬ್ಯಾಗ್‌ನ ತಗೊಂಡು ಹೋಗಿರಬಹುದು. ನೋಡ್ತೀನಿ ತಡಿ'' ಎಂದು ತನ್ನ ರೂಮಿಗೆ ಬಂದಳು. ಜಗ್ಗೂ ಇನ್ನೂ ಎದ್ದಿರಲಿಲ್ಲ. ಇವನಿನ್ನು ಮಲಗೇ ಇದಾನೆ... ಹೊಸಕಳ್ಳ ಯಾರಿರಬಹುದು ಎಂದುಕೊಂಡು ಹೊರಗೆ ಬಂದಳು ಸುಮತಿ ಅಲ್ಲಿ ಕಾಣಲಿಲ್ಲ.

ಸುಮತಿ ತನ್ನ ರೂಮಿನ ಬಾಗಿಲ ಬಳಿ ಇದ್ದ ಕಿಟ್‌ಬ್ಯಾಗ್‌ನ ಕಂಡಳು. ಆಶ್ಚರ್ಯವೆನಿಸಿತ್ತು

ಇದು ಸಂಕೇತನ ಕೆಲಸವೇ ಅಂತೆನಿಸಿತ್ತು.

ಬಾಗಿಲ ಬಳಿ ಹೆಜ್ಜೆ ಸದ್ದಾದಾಗ, ಸಂಕೇತ ತಿರುಗಿದ ಬಾಗಿಲಲ್ಲಿ ಸುಮತಿ ನಿಂತಿದ್ದಳು. ಕೂತಿದ್ದವನು ಎದ್ದು ನಿಂತ. ''ಥ್ಯಾಂಕ್ಸ್'' ಎಂದಳು. ಯಾಕೆ ಎನ್ನುವಂತೆ ನೋಡಿ ''ಪರವಾಗಿಲ್ಲ'' ಎಂದ ತನಗೇ ಕೇಳಿಸುವಂತೆ. ಅವನ ಮೂಡ್ ಕೆಟ್ಟಿದೆ ಎಂದು ಅನಿಸಿತ್ತು. ತಿಳಿಮಾಡಲೆಂದು ''ಹೇಗಿತ್ತು ಟ್ರಿಪ್'' ಕೇಳಿದಳು.

''ಏನೋ ಇತ್ತು. ನಿಮ್ಮ ಟ್ರಿಪ್ ಹೇಗಿತ್ತು ? ವ್ಯಂಗ್ಯವಾಗಿ ಕೇಳಿ, ಅವಳನ್ನೇ ನೋಡಿದ. ಅವಳು ನಕ್ಕು ಬಿಟ್ಟಳು.

''ನಗೋದ್ಯಾಕ್ರೀ ?'' ಏನು ಸ್ಪೆಷಲ್ ಅಂತ ಕೇಳಿದೆ ಅಷ್ಟೇ... ಹೇಳೋಕೆ ಇಷ್ಟವಿದ್ದರೆ ಹೇಳಿ, ಇಲ್ಲದಿದ್ದರೆ ಬಿಡಿ'' ಇದ್ದಕ್ಕಿದ್ದಂತೆ ಎತ್ತರದ ಧ್ವನಿಯಲ್ಲಿ ಹೇಳಿದಾಗ, ಅವಳು ಬೆಪ್ಪಾದಳು.

''ಯಾಕ್ರೀ ನನ್ನ ಮೇಲೆ ರೇಗ್ತೀರಿ ?'' ಅಸಹನೆಯಿಂದ ಕೇಳಿದಳು.

''ಹೌದು. ನಾನು ಹಾಗೇನೇ ಸಿಡುಕ'' ಸುಮತಿ ಹಿಂದಕ್ಕೆ ಸರಿದಳು. ಯಾಕೋ ಅಪ್ಸೆಟ್ ಆಗಿದಾನೆ. ತಾನೀಗ ಮಾತನಾಡದಿರುವುದೇ ಸರಿ ಎಂದುಕೊಂಡು, ತಾನು ತಂದಿದ್ದ ತಿಂಡಿಗಳನ್ನು ತೆಗೆದುಕೊಂಡು ಕೆಳಗಿಳಿದಳು ಡೈನಿಂಗ್ ಟೇಬಲ್ ಮೇಲಿಟ್ಟಳು. ಸುಮತಿ ಕಾಲೇಜಿಗೆ ಹೋದ ಮೇಲೇ ಇವನು ಕೆಳಗೆ ಇಳಿದು ಬಂದಿದ್ದು.

''ಅಕ್ಕಿ ರೊಟ್ಟಿ ಚಟ್ನಿ ಮಾಡಿದೀನಿ ಬಾ ತಿನ್ನು'' ಮಗನನ್ನು ಕರೆದಳು. ಮಾತಿಲ್ಲದೇ ಬಂದು ಕೂತ. ಎರಡು ರೊಟ್ಟಿ ತಿಂದು ಮುಗಿಸಿದ. ಜಾನಕಿ, ಮೈಸೂರು ಪಾಕಿನ ಒಂದು ದೊಡ್ಡ ಪೀಸನ್ನು ಅವನ ತಟ್ಟೆಗೆ ಹಾಕಿದಳು.

''ಇದೇನಿದು ನನಗೆ ಬೇಡ'' ತಟ್ಟೆಯನ್ನು ಅತ್ತ ಸರಿಸಿದ.

''ನಿನಗೆ ಮೈಸೂರು ಪಾಕು ಅಂತಂದ್ರೆ ತುಂಬಾ ಇಷ್ಟ ಅಂತ ಸುಮತಿಗೆ ಹೇಳಿದ್ದೆ. ಸುಮತಿ ನಿನಗೋಸ್ಕರ, ಮರೆಯದೇ ಎಷ್ಟು ತಂದಿದಾಳೆ ನೋಡು'' ಅಲ್ಲಿದ್ದ ಡಬ್ಬಿಯ ಮುಚ್ಚಳವನ್ನು ತೆಗೆದು ತೋರಿದಳು.

''ನಂಗೆ ಬೇಡ ಅಂದ್ನಲ್ಲ'' ರೇಗಿದ.

''ಈಗೇನಾಯ್ತು ನಿನಗೆ ! ಸಿಹೀನ ಬೇಡ ಅನ್ನಬಾರದು. ನೀನು ತಿನ್ನದಿದ್ದರೆ, ಸುಮತಿ ಏನಂದು ಕೊಳ್ತಾಳೆ ?''

''ಏನಾದ್ರೂ ಅಂದುಕೊಳ್ಳಲಿ ನನಗೇನು ?'' ಎಂದು ಸಿಡಾರನೆ ನುಡಿದು ಎದ್ದುಬಿಟ್ಟ..

ಸುಮತಿ ಇನ್ನು ಕಾಲೇಜಿನಿಂದ ವಾಪಸ್ಸಾಗಿರಲಿಲ್ಲ. ಅವಳ ಸ್ನೇಹಿತೆ ಸುಚಿತ್ರ ತನ್ನ ಮದುವೆಯ ಆಹ್ವಾನ ಪತ್ರಿಕೆಯನ್ನು ಕೊಡಲೆಂದು ಬಂದಿದ್ದಳು. ಸಂಕೇತನೂ ಅಲ್ಲಿಯೇ ಇದ್ದ.

''ಖಂಡಿತಾ ಎಲ್ಲರೂ ಮದುವೆಗೆ ಬರಬೇಕು... ನಾನು ಸುಮತಿ ಮನೆಗೆ ಬಂದಿರುತ್ತಾಳೆ ಅಂತಂದುಕೊಂಡೆ, ಊರ್ನಿಂದ ಬಂದಿಲ್ವಾ ?'' ಪ್ರಶ್ನಿಸಿದಳು.

''ಬೆಳಿಗ್ಗೇನೇ ವಾಪಸ್ಸು ಬಂದಳು ಕಾಲೇಜ್ನಿಂದ ಇನ್ನು ಬಂದಿಲ್ಲ. ಅಷ್ಟೇ''

''ಹೌದಾ ? ಹೇಗೆ ನಡೀತಂತೆ ಫಂಕ್ಷನ್ ? ಯಾವಾಗ ಮದುವೆ ?''

'ಮಾತನಾಡುಕ್ಕೆ ಬಿಡುವೇ ಆಗಲಿಲ್ಲ. ನನ್ನ ಅಕ್ಕನಿಗೆ ಇನ್ನೂ ಮದುವೆ ಗೊತ್ತಾಗಿಲ್ಲ ಅಂತ ಅದೇ ಚಿಂತೆಯಲ್ಲಿದ್ದಳು ಸಧ್ಯ ಗೊತ್ತಾಯಿತಲ್ಲ.'' ಜಾನಕಿ ನುಡಿದಾಗ, ಸಂಕೇತನ ಕಿವಿಗಳು ಚುರುಕಾದವು.

''ಹೇಮನ ಮದುವೆ ಆದಮೇಲೆ, ಅವಳ ಅಣ್ಣನ ಮದುವೆ... ಆಮೇಲೆ ಸುಮತಿ ಮದುವೆ ಯಾವಾಗಲೋ...?''

''ಅವಳ ಮದುವೆಗೇನು ತಡ ? ನೋಡೋಕೆ ಚೆನ್ನಾಗಿದಾಳೆ. ಓದಿದಾಳೆ. ಕೆಲಸದಲ್ಲಿದ್ದಾಳೆ ಯಾವೋನಾದರೂ ಬಂದು ಹಾರಿಸ್ಕೊಂಡು ಹೋಗ್ತಾನೆ... ಆದರೆ ನನಗೆ ಒಂದೇ ಚಿಂತೆ. ಸುಮತಿ ನಮ್ಮ ಮನೆಯಿಂದ ಹೊರಟು ಹೋಗ್ತಾಳಲ್ಲ ಅಂತ.''

''ಈಗಲಿಂದ ಯಾಕೆ ಚಿಂತೆ ಮಾಡ್ತೀರಿ ಆಂಟಿ ! ಆ ಕಾಲ ಬಂದಾಗ ನೋಡಿಕೊಂಡ್ರಾಯ್ತು. ಈಗ ಅವಳಿಗೇನು ಹಾಯಾಗಿದಾಳೆ. ಮದುವೆಗೆ ಅವಾಂತರವಿಲ್ಲ''

''ಇದೇನೇ ಸುಚಿತ್ರ ಹೀಗಂತೀಯ ? ನಿನ್ನ ಸ್ನೇಹಿತೆ ಅವಳು. ನಿನ್ನ ಮದುವೆಯಾಗಿ ಹೊರಟು ಹೋದರೆ... ಅವಳಿಗೂ ಬೇಸರವಾಗುತ್ತೆ. ಅವಳ ಮನಸ್ನಲ್ಲೂ ಆಸೆಗಳು ಮೂಡುತ್ತವೆ.''

''ಇಲ್ಲ, ಅವಳಿಗೆ ಸಧ್ಯಕ್ಕೆ ಮದುವೆಯಾಗುವ ಆಲೋಚನೆ ಇಲ್ಲ.. ತಂದೆ ರಿಟೈರ್ ಆಗ್ತಾ ಇದಾರೆ. ಅಣ್ಣ ಮದುವೆಯಾಗಿ ಮಾವನ ಮನೆಗೇ ಹೋಗ್ತಿದಾನೆ... ಏನೇನೋ ಪ್ರಾಬ್ಲಂ ಅವರ ಮನೆಯಲ್ಲೂ...'' ಈ ಮಾತುಗಳ ಮೇಲೆ ಸಂಕೇತನ ಗಮನವಿರಲಿಲ್ಲ, ತಿಳಿಯ ವಿಷಯ ಒಂದೇ... ಲಗ್ನ ಪತ್ರಿಕೆ ಸುಮತಿಯದಲ್ಲ, ಅವಳ ಅಕ್ಕನದು... ತಾನೇಕೆ ಅಷ್ಟು ತಲೆ ಕೆಡಿಸಿಕೊಂಡೆ ? ಈಗ ಗಾಳಿಯಲ್ಲಿ ತೇಲುತ್ತಿರುವ ಅನುಭವವಾಗುತ್ತಿದೆ' ಎಂದುಕೊಂಡು ತನ್ನಲ್ಲೇ ಮುಗುಳ್ನಕ್ಕ.

''ಯಾಕೋ ಸಂಕೇತ್ ನೀನು ಒಬ್ಬೊಬ್ಬನೇ ನಗ್ತಿದೀಯಾ ?'' ಸುಚಿತ್ರ ಚುಡಾಯಿಸಿದಳು.

''ಏನಿಲ್ಲಮ್ಮ... ಏನೋ ತಮಾಷೆಯ ಮಾತು ನೆನಪಿಗೆ ಬಂತು... ಮಮ್ಮೀ ಸುಚಿತ್ರಂಗೆ ಮೈಸೂರು ಪಾಕು ಕೊಡುಲ್ವಾ ?'' ಹಾಗೇ ನಂಗೂ ಎರಡು ಪೀಸು ಜಾನಕಿ ಸೋಜಿಗದಿಂದ ಕಣ್ಣರಳಿಸಿದಳು.

"ಏನಪ್ಪಾ. ಏನು ವಿಷಯ ? ಎಲ್ಲೀದು ಮೈಸೂರು ಪಾಕು ?"

"ನಾನು ಮೈಸೂರಿಗೆ ಟ್ರಿಪ್ ಹೋಗಿದ್ನಲ್ಲ. ಅಲ್ಲಿಂದ ತಂದಿದ್ದು" ನಕ್ಕ.

ಜಾನಕಿ ಒಂದು ಪ್ಲೇಟ್‌ನಲ್ಲಿ ನಾಲ್ಕಾರು ಪೀಸುಗಳನ್ನುಹಾಕಿಕೊಂಡು ತಂದಳು. "ಸುಮತಿ ತಂದಿದ್ದು. ಬೆಳಿಗ್ಗೆ ತಿನ್ನೋ ಅಂದರೆ ಬೈದು ಬಿಟ್ಟ. ಈಗ ಬೇಕು ಅಂತಾ ಇದಾನೆ"

"ನಾನು ಬರ್ತೀನಿ ಅಂತ ನನಗೋಸ್ಕರ ಕಾಯ್ತಾ ಇದ್ದೆ ಅಲ್ವಾ ಸಂಕೇತ್ ?"

"ಹೌದೂಂತ ಕಾಣುತ್ತೆ..." ಅಷ್ಟರಲ್ಲಿ ಸುಮತಿ ಬಂದಿದ್ದಳು. ಅವನ ಕಣ್ಣುಗಳು ಸಂತಸದಿಂದ ಅರಳಿದುದನ್ನು ಸುಚಿತ್ರ ಗಮನಿಸಿದಳು. ತಟ್ಟೆಯಲ್ಲಿದ್ದ ಒಂದು ದೊಡ್ಡ ಮೈಸೂರು ಪಾಕಿನ ಪೀಸನ್ನು ಕೈಗೆತ್ತಿಕೊಂಡ.. ಸುಮತಿಯ ಕಡೆ ನೋಡಿ ಮುಗುಳ್ನಕ್ಕ

"ಏನೇ ಸುಚಿತ್ರಾ... ಯಾವಾಗ್ಬಂದೆ ?"

"ಅರ್ಧ ಗಂಟೆ ಮೇಲಾಯ್ತು. ನೀನ್ಯಾಕೆ ಇಷ್ಟು ಲೇಟು ?"

"ಏನೋ ಫಂಕ್ಷನ್ ಇತ್ತು." ಎನ್ನುತ್ತಾ ಕುಳಿತಳು.

"ತಗೊಳ್ಳಿ ಮೇಡಂ" ಎನ್ನುತ್ತಾ ಸಂಕೇತ ಅವಳ ಮುಂದೆ ತಟ್ಟೆಹಿಡಿದ. ಸುಮತಿ ಅವನನ್ನೇ ವಿಚಿತ್ರವಾಗಿ ನೋಡಿದಳು.

"ತಗೊಳ್ಳೇ..." ಸುಚಿತ್ರ ಮೊಣಕೈ ತಿವಿದಳು.

"ಬೇಡಪ್ಪಾ... ನಾನು ಸಾಕಷ್ಟು ತಿಂದಾಗಿದೆ."

"ನಿಮಗೆ ಬೇಡವಾದರೆ ಬಿಡಿ. ನಾನೇ ತಿಂತೀನಿ" ಎನ್ನುತ್ತಾ ಇನ್ನೊಂದು ಪೀಸನ್ನು ಕೈಗೆತ್ತಿಕೊಂಡು. ತಿಂದ

"ಇನ್ವಿಟೇಷನ್ ಕೊಡೋಣ ಅಂತ ಬಂದಿದ್ದೆ... ಎನ್ನುತ್ತಾ ಸುಮತಿಯ ಕೈಗೆ ನಾಲ್ಕಾರು ಇನ್ವಿಟೇಷನ್ ಕಾರ್ಡ್ಸ್‌ಗಳನ್ನು ಕೊಟ್ಟಳು." ನಿನಗೆ ಇದು ಎನ್ನುತ್ತಾ ಅವಳ ಹೆಸರನ್ನು ಬರೆದ ಕಾರ್ಡನ್ನು ಪ್ರತ್ಯೇಕವಾಗಿ ಕೊಟ್ಟಳು. ಸುಮತಿ ಕವರನ್ನು ತೆರೆದು ವಿವರಗಳನ್ನು ಓದಿಕೊಂಡಳು. ಸಂಕೇತ ಮೈಸೂರು ಪಾಕಿನ ರುಚಿಯನ್ನು ಸವಿಯುತ್ತಾ ಅವಳನ್ನೇ ನೋಡುತ್ತಿದ್ದ.

ಸುಚಿತ್ರಳೊಡನೆ, ಗೇಟಿನ ತನಕ ಸುಮತಿ ಅವಳ ಜೊತೆ ನಡೆದಳು. ಸುಚಿತ್ರ ಸುಮತಿಯನ್ನು ಗೇಲಿ ಮಾಡಿದಳು.

"ಸುಮತೀ. ಸ್ವಲ್ಪ ಹುಷಾರಾಗಿರೇ... ಸಂಕೇತ ನಿನ್ನ ಮೇಲೆ ಕಣ್ಣುಹಾಕಿರುವ ಹಾಗಿದೆ." ಸುಮತಿ ಕೆಂಪಾದಳು. ಅದು ಅವಳ ಗಮನಕ್ಕೂ ಬಂದಿತ್ತು.

''ಅಯ್ಯೋ ಬಿಡೇ... ಇನ್ನೆರಡು ವಾರದ ನಂತರ ಊರಿಗೆ ಹೋಗ್ತಾನೆ.''

''ಈಗಲೂ ಅವನ ಸ್ನೇಹಿತರ ದಂಡು ಬಂದು ಧಾಳಿ ಮಾಡುತ್ತಾ ?''

''ನಂಗೆ ಹೆಚ್ಚಿಗೆ ಗೊತ್ತಿಲ್ಲ, ನಾನೇ ಮನೇಲಿರುಲ್ವಲ್ಲ.''

''ನಿಮ್ಮ ತಾಯಿ ಮನೆಗೂ ಇನ್ವಿಟೇಷನ್ಸ್ ಕಳಿಸಿಬಿಡು ಮರೀಬೇಡ'' ಎಂದು ಹೇಳಿ ಸುಚಿತ್ರ ಹೊರಟು ಹೋದಳು. ಸುಮತಿ ಒಳಗೆ ಬಂದಳು. ಸಂಕೇತ ಅಲ್ಲಿ ಕಾಣಲಿಲ್ಲ. ತನ್ನ ರೂಮಿನ ಬಳಿಗೆ ಬರುತ್ತಿದ್ದಂತೆಯೇ ಸಂಕೇತ ಅವಳನ್ನು ಸಮೀಪಿಸಿದ ''ಥ್ಯಾಂಕ್ಯೂ ಸುಮತೀ'' ಎಂದ ಅವಳಿಗೆ ಅರ್ಥವಾಗಿರಲಿಲ್ಲ.

''ಮೈಸೂರು ಪಾಕು ತುಂಬಾ ಚೆನ್ನಾಗಿತ್ತು. ನನಗೆ ತುಂಬಾ ಇಷ್ಟ''

ಸುಮತಿ ಸುಮ್ಮನೇ ನಕ್ಕಳು. ಇವನೊಬ್ಬ ವಿಚಿತ್ರ ವ್ಯಕ್ತಿ. ಬೆಳಿಗ್ಗೆ ಇದ್ದ ಹಾಗೆ ಸಾಯಂಕಾಲ ಇರುಲ್ಲ, ಸಾಯಂಕಾಲ ಇದ್ದ ಹಾಗೆ ರಾತ್ರಿ ಇರುಲ್ಲ...''

''ಯಾಕ್ರೀ ನಗ್ತಿದೀರಿ...'' ಅವಳನ್ನೇ ದಿಟ್ಟಿಸಿ ಕೇಳಿದ.

''ಒಂದು ಇನ್ಸಿಡೆಂಟ್ ನೆನಪಿಗೆ ಬಂತು.''

''ಏನದು ?''

''ನಾನು ಈ ಮನೆಗೆ ಬಂದ ಮೊದಲ ದಿನ ಏನಾಯ್ತು ಗೊತ್ತಾ ?'' ಎನ್ನುತ್ತಾ ಜಗ್ಗು ಮಾಡಿದ್ದ ಅವಾಂತರವನ್ನು ವಿವರಿಸಲು ಹೊರಟಳು. ಹಾ... ಹಾ... ಅವನು ತಡೆದ ''ಅವನ ವಿಚಾರವನ್ನು ನನ್ನೆದುರಿಗೆ ಆಡಿ, ನನ್ನ ಮೂಡ್ ಕೆಡಿಸಬೇಡಿ... ಪ್ಲೀಸ್'' ಸುಮತಿಯ ಮುಖ ಕಪ್ಪಾಯಿತು.

''ನನ್ನೊಡನೆ ಹೀಗೆ ಮಾತನಾಡಲು ನಿಮಗೆ ಯಾವ ಹಕ್ಕೂ ಇಲ್ಲ'' ಎನ್ನುತ್ತಾ ತನ್ನ ರೂಮಿನೊಳಕ್ಕೆ ಬಂದು ಬಿಟ್ಟಳು ಅವಮಾನವಾದಂತಾಗಿತ್ತು, ಅವಳಿಗೆ. ಸಂಕೇತ ಪೆಚ್ಚಾದ. ಆ ಕ್ಷಣವೇ ಹೋಗಿ ಸಾರಿ ಕೇಳಬೇಕೆಂದುಕೊಂಡರೂ ಮನಸ್ಸು ಹಿಂಜರಿಯಿತು. ಮತ್ತೆ ಸಿಕ್ಕೇ ಸಿಗ್ತಾಳೆ ಸಿಗದೇ ಎಲ್ಲಿಗೆ ಹೋಗ್ತಾಳೆ ಎಂತಂದುಕೊಂಡು ಸುಮ್ಮನಾದ. ಅಲ್ಲೇ ಇದ್ದ ಸುಚಿತ್ರಳ ಮದುವೆಯ ಕಾರ್ಡನ್ನು ಮತ್ತೆ ಮತ್ತೆ ಓದಿದ. ಇದ್ದಕ್ಕಿದ್ದಂತೆ ಏನೋ ಅನ್ನಿಸಿ, ಪೆನ್ನಿನಿಂದ ಗೀಚಿದ. ಆದರೂ ಸಮಾಧಾನ ವಾಗಿರಲಿಲ್ಲ.

ಏನಾಗಿದೆ ನನಗೆ ? ಈ ಹಿಂದೆ ಊರಿಗೆ ಬಂದಿದ್ದಾಗ, ನನಗೆ ಹೀಗೆ ನಾನಾ ಭಾವನೆಗಳು ಕಾಡುತ್ತಿರಲಿಲ್ಲ, ಸ್ನೇಹಿತರೊಡನೆ ಮುಕ್ತವಾಗಿ ಬೆರೆಯುತ್ತಿದ್ದ. ಈ ಸಾರಿ, ಯಾಕೋ ಮುಂಚಿನಂತೆ ಇರಲು ಆಗುತ್ತಲೇ ಇಲ್ಲ. ಇದಕ್ಕೆ ಕಾರಣ ಅಮೆರಿಕಾದ ಜೀವನದ ರೀತಿ ನೀತಿಗಳು ಸರಿ ಎನ್ನಿಸುತ್ತಿದೆಯೆ ? ಹಾಗೇನೂ ಇಲ್ಲ. ನನಗೆ ಇಂಡಿಯಾ ದೇಶ ಅಂತಂದ್ರೆ ಅಭಿಮಾನವಿದೆ.

ಇಂಡಿಯನ್ಸ್ ಅಂತಂದ್ರೆ ನಮ್ಮವರು ಅನ್ನೋ ಗೌರವ ಇದೆ. ಇಂಡಿಯನ್ನರ ಅಡಿಗೆ ಊಟ, ಉಡುಗೆ ತೊಡುಗೆ, ನಮ್ಮವರ ಭಾಷೆ ಸಾಹಿತ್ಯ ಎಲ್ಲವೂ ನನಗೆ ಪ್ರಿಯವೇ... ಆದರೆ ನನಗೆ ನಮ್ಮ ಮನೆಯ ಪರಿಸರ ಮಾತ್ರ ಹಿಡಿಸುಲ್ಲ, ಇದಕ್ಕೆ ಕಾರಣ ಜಗ್ಗು!

ಸುಮತಿ ಸುಮಾರು ಎರಡು ಮೂರು ತಿಂಗಳುಗಳಿಂದ ಇಲ್ಲಿ ಇರತೊಡಗಿರಬಹುದು. ಅಮ್ಮನ ಒಲವನ್ನು ಗಳಿಸಿದ್ದಾಳೆ. ಜಗ್ಗುವಿನ ಹಿತೈಷಿಯಾಗಿದ್ದಾಳೆ. ನನ್ನ ಬಗ್ಗೆ ಅವಳ ಮನಸ್ಸಿನಲ್ಲಿ ಏನಿರಬಹುದು ? ಅವಳು ಪೇಯಿಂಗ್ ಗೆಸ್ಟ್ ಆದರೆ, ನಾನೂ ಒಂದು ತರಹ ಗೆಸ್ಟೇ ಈ ಮನೆಯಲ್ಲಿ... ನಾಲ್ಕು ವಾರಗಳ ನಂತರ ಎಲ್ಲಿಂದ ವಾಪಸ್ಸು ಹೋಗುವವನು... ಗೆಸ್ಟ್ ತರಹ ಇದ್ದು ಗೆಸ್ಟ್ ತರಹ ಹೋಗುವುದೇ ವಾಸಿ ಅಂತಂದುಕೊಂಡರೂ ಮನಸ್ಸು ಅದಕ್ಕೆ ಒಡಂಬಡಲಿಲ್ಲ, ಕಡಿವಾಣ ಕಿತ್ತ ಕುದುರೆಯಂತೆ ಓಡುತ್ತಿತ್ತು.

☆ ☆ ☆

ಹೇಮಳ ಮದುವೆ ನಿಶ್ಚಯವಾಗಿತ್ತು. ಆದರೆ ಅವಳು ಖುಷಿಯಾಗಿರಲಿಲ್ಲವೆಂದು ಅವಳ ಮುಖವೇ ಹೇಳಿತ್ತು. ಬಲವಂತ ಮಾಡಿ ಕೇಳಿದಾಗ, ಅತ್ತು ಬಿಟ್ಟಳು ನನಗೆ ಈ ಮದುವೆ ಇಷ್ಟವಾಗುತ್ತಿಲ್ಲ, ಅಂದಳು.

"ಯಾಕೇ ಅಕ್ಕ ಏನಾಯ್ತೆ ?" ಸುಮತಿ ಭುಜ ಅಲುಗಿಸಿದಳು.

"ವರದಕ್ಷಿಣೆ ಕೊಡಬೇಕಂತೆ. ಅಪ್ಪ ಎಲ್ಲಿಂದ ಹಣ ತರ್ತಾರೆ ?"

"ಸೂರಿ ಕೊಡಬಹುದು, ಅಂತ ಅಮ್ಮ ಹೇಳಿದ್ದಲ್ಲ."

"ಈಗ ಅವನು ಏನೂ ಸಹಾಯ ಮಾಡುಲ್ಲವಂತೆ"

"ನಾನು ಸಹಾಯ ಮಾಡ್ತೀನಿ" ಹಾಗೆ ಹೇಳಿದ್ದರೂ ಅದು ಸರಿ ಎನಿಸಿರಲಿಲ್ಲ, ವರದಕ್ಷಿಣೆ ಕೊಡುವುದೂ ಅಪರಾಧವೇ. ಆದರೆ ವರದಕ್ಷಿಣೆ ಕೊಡದಿದ್ದರೆ, ಹೇಮಳ ಮದುವೆ ಮುಂದೆ ಹೋಗಬಹುದು ಈಗ ಈ ವಿಷಯವನ್ನು ಯಾರೊಂದಿಗೆ ಹೇಳಿಕೊಳ್ಳುವುದು ? ಸುಚಿತ್ರ ತನ್ನ ಮದುವೆಯ ಸಂಭ್ರಮದಲ್ಲಿದ್ದಾಳೆ. ಆಂಟಿಯ ಹತ್ತಿರ ಹೇಳುವುದು ಸರಿಯೋ ತಪ್ಪೋ ? ತನಗೆ ಯಾರದ್ದಾದರೂ ಸಲಹೆ ಬೇಕೇ ಬೇಕು... ತಟ್ಟೆಯಲ್ಲಿ ಬೆರಳು ಓಡಾಡುತ್ತಿದ್ದರೂ, ಮನ ಬೇರೆಲ್ಲೋ ಇತ್ತು. ಜಾನಕಿ ಎಚ್ಚರಿಸಿದಳು.

"ಸುಮತೀ, ಏನು ಯೋಚಿಸ್ತಿದೀಯಾ ? ಬೇಗ ಬೇಗ ಊಟ ಮಾಡು. ಅನ್ನ ಆರಿ ಹೋಗ್ತಿದೆ." ಸುಮತಿ ಬೆಚ್ಚಿಬಿದ್ದುಸಂಕೇತನ ಕಡೆಗೆ ನೋಡಿದಳು. ಅವನು ನಕ್ಕ.

''ಏನ್ರೀ... ಏನು ಕನಸು ಕಾಣ್ತಾ ಇದೀರಿ ?'' ಗೇಲಿ ಮಾಡಿದ.

''ಏನೂ ಇಲ್ಲ.'' ಸರಸರನೆ ಊಟ ಮುಗಿಸಿದಳು. ಅವಳ ಮೂಡ್ ಸರಿಯಾಗಿಲ್ಲ ವೆನ್ನುವುದನ್ನು ಸಂಕೇತ ಗಮನಿಸಿದ. ಅವಳ ರೂಮಿನ ಬಳಿಗೆ ಬಂದು ಬಾಗಿಲನ್ನು ಬಡಿದ... ಸುಮತಿ ಬೇಸರದಿಂದ ಎದ್ದು ಬಂದಳು.

''ಸಾರಿ ಮೇಡಂ, ಡಿಸ್ಟರ್ಬ್ ಮಾಡಿದ್ನಾ?''

''ಪರವಾಗಿಲ್ಲ, ಏನು ಬೇಕಾಗಿತ್ತು ?''

''ಫ್ರೀಯಾಗಿದ್ದರೆ ಬಾಲ್ಕನಿಯಲ್ಲಿ ಕೂತು ಮಾತನಾಡೋಣ್ವಾ ?''

''ನಾಳೆ ದಿನದ ಕ್ಲಾಸಿಗೆ, ನೋಟ್ಸ್ ಪ್ರಿಪೇರ್ ಮಾಡಬೇಕಾಗಿತ್ತು.''

''ನಾಳೆ ದಿನ ನೀವು ಕಾಲೇಜಿಗೆ ಹೋಗಲೇಬೇಕಾ ?''

''ಹೂಂ. ಯಾಕೆ ? ಯಾಕೆ ಹೀಗೆ ಕೇಳ್ತಿದೀರಿ ?''

''ಸುಚಿತ್ರ ನನಗೆ ಚಿಕ್ಕವಯಸ್ಸಿನಿಂದಲೂ ಫ್ರೆಂಡ್... ಅವಳಿಗೇನಾದ್ರೂ ಬೆಲೆ ಬಾಳುವ ಪ್ರೆಸೆಂಟ್ ಕೊಡೋಣ ಅಂತ.. ಏನು ಕೊಡಬಹುದು ಅಂತ ಸಜೆಸ್ಟ್ ಮಾಡ್ತೀರಾ ಪ್ಲೀಸ್...''

''ನೆಕ್ಲೇಸ್ ಕೊಡಿಸಬಹುದು. ಭಾರಿ ರೇಶಿಮೆ ಸೀರೆ... ಸೆಟ್ ಒಡವೆ ಮುತ್ತಿನದು, ಹವಳದ್ದು ಯಾವುದಾದ್ರೂ ಸರಿ...''

''ನನಗೆ ಅದರಲ್ಲೆಲ್ಲಾ ನಾಲೆಡ್ಜ್ ಕಡಿಮೆ. ನಾಳೆ ನನ್ನ ಜೊತೆ ಷಾಪಿಂಗ್‌ಗೆ ಬರ್ತೀರಾ ?''

''ಅದಕ್ಕೆ ಕಾಲೇಜಿಗೆ ರಜ ಯಾಕೆ ಹಾಕಬೇಕು ? ಸಾಯಂಕಾಲ ಹೋಗಿ ಬರಬಹುದಲ್ಲ...''

''ಸರಿ ಹಾಗಾದ್ರೆ... ನಾಳೆ ಸಾಯಂಕಾಲ ಎಷ್ಟು ಹೊತ್ತಿಗೆ ಹೋಗೋಣ.''

''ಒಂದ್ಮಾತು ಸುಚಿತ್ರಳನ್ನೇ ಯಾಕೆ ಕರೆದುಕಂಡು ಹೋಗಬಾರದು ? ಅವಳಿಗೆ ಇಷ್ಟವಾದುದನ್ನು ಅವಳೇ ಸೆಲೆಕ್ಟ್ ಮಾಡುತ್ತಾಳೆ.''

''ಬೇಡ ಅವಳಿಗೆ ಗೊತ್ತಾಗಬಾರದು...''

''ಓ.ಕೇ. ಆದರೆ ನನ್ನ ಸೆಲೆಕ್ಷನ್ ಅವಳಿಗೆ ಇಷ್ಟವಾಗದಿದ್ದರೆ...?''

''ಯಾಕೆ ಇಷ್ಟವಾಗುಲ್ಲ! ನೀವು ಅವಳ ಫ್ರೆಂಡ್.''

''ಫ್ರೆಂಡ್ ಆದ ಮಾತ್ರಕ್ಕೆ, ಟೇಸ್ಟ್ ಎಲ್ಲಾ ಒಂದೇ ತರಹ ಇರುಲ್ಲ...'' ನಾನು ಅವಳಿಗೆ ಹೇಳ್ತೀನಿ ಅವಳೂ ಬರಲಿ''

"ಬೇಡ... ಬೇಡ..." ಇದ್ದಕ್ಕಿದ್ದಂತೆ ಅವನು ಅವಳ ಕೈ ಹಿಡಿದಾಗ ಅವಳು ಕೊಸರಿಕೊಂಡಳು. 'ಸಾರಿ' ಎಂದ ಪಿಸುದನಿಯಲ್ಲಿ ಅವಳು ಹಾಗೇ ಹಿಂದಕ್ಕೆ ಸರಿದಳು. ಇವನು ಒಂದುಗಳಿಗೆ ಅಲ್ಲೇ ನಿಂತಿದ್ದು ತನ್ನ ರೂಮಿಗೆ ಬಂದ. ಸುಮತಿಯ ಗಲಿಬಿಲಿಗೊಂಡ ಮುಖವನ್ನೇ ಮತ್ತೆ ಮತ್ತೆ ನೆನೆಸಿಕೊಂಡ. ಸುಮತಿಯ ಕೈಯ ಬಿಸಿ, ಅವನ ಅಂಗಾಂಗದೊಳಗೆ ಹರಿದಾಡುತ್ತಿದೆಯೆಂದೆನಿಸಿಮೈ ಪುಳಕಗೊಂಡಿತು. ತಾನು ವಿದೇಶದಲ್ಲಿದ್ದವನು, ಅಲ್ಲಿ ಎಷ್ಟೋ ಜನ ಗರ್ಲ್‌ಫ್ರೆಂಡ್ಸ್ ಇದ್ದರು. ಸ್ನೇಹದಿಂದ ಅವರುಗಳ ಕೈ ಕುಲುಕಿದ್ದ. ಆದರೆ ಈ ಮುಂಚೆ ಎಂದೂ ಇಂತಹ ಅನುಭವವಾಗಿರಲಿಲ್ಲವೆಂದೆನಿಸಿತ್ತು. ಸುಮತಿಗೆ ಏನೆನ್ನಿಸಿರಬಹುದು ಎಂದು ತಿಳಿದುಕೊಳ್ಳುವ ಬಯಕೆಯಾಗಿತ್ತು.

ಸುಮತಿ ಏನೂ ಹಳ್ಳಿ ಹುಡುಗಿಯಲ್ಲ. ಓದಿದಾಳೆ ಲೆಕ್ಚರರ್ ಆಗಿದಾಳೆ. ಸ್ಮಾರ್ಟ್ ಆಗಿದಾಳೆ. ಕಲೀಗ್ಸ್ ಜೊತೆ ಬೆರೆಯುತ್ತಾಳೆ. ಎಲ್ಲರೊಡನೆ ಫ್ರೀಯಾಗಿ ಮಾತನಾಡ್ತಾಳೆ. ಅವಳಿಗೆ ಏನೂ ಅನ್ನಿಸದಿರಬಹುದುಅಂತನ್ನಿಸಿದಾಗ ಆ ಅನಿಸಿಕೆ ಹಿತವಾಗಿರಲಿಲ್ಲ.

ಮಾರನೇ ದಿನ ಸುಮತಿ ಕಾಲೇಜಿನಿಂದ ವಾಪಸ್ಸು ಬಂದಾಗ ಸಂಕೇತ ಮನೆಯಲ್ಲಿರಲಿಲ್ಲ. ಮಧ್ಯಾಹ್ನ ಊಟಕ್ಕೆ ಮೊದಲೇ ಮನೆಯಿಂದ ಹೊರಗೆ ಹೋದವನು ಇನ್ನೂ ವಾಪಸ್ಸು ಬಂದಿರಲಿಲ್ಲ. ಮರೆತು ಬಿಟ್ಟನೇನೋ ಅಂತಂದುಕೊಂಡು ಸುಮ್ಮನಾದಳು. ಎಷ್ಟು ಹೊತ್ತಾದರೂ ಅವನು ಬಾರದ್ದಿದಾಗ ಜಾನಕಿಯೂ ಆತಂಕಗೊಂಡಿದ್ದಳು..." ಎಲ್ಲಿಗೆ ಹೋಗ್ತೀನಿ, ಯಾವಾಗ ಬರ್ತೀನಿ ಅಂತ ಒಂದನ್ನು ಹೇಳುಲ್ಲ. ನಾವೇನಂದುಕೊಳ್ಳಬೇಕು... ಫೋನಾದ್ರೂ ಮಾಡಬಾರದಾ ? ... ಯಾವ ನೈಟ್ ಕ್ಲಬ್‌ಗೆ ಹೋಗಿದಾನೋ ? ಎಷ್ಟು ಹೊತ್ತಿಗೆ ಬರ್ತಾನೋ ?" ಬೇಸರಿಸಿಕೊಂಡಿದ್ದಳು.

"ಆಂಟೀ... ನೀವು ಹೋಗಿ ಮಲಗಿ. ನಾನು ಇಲ್ಲೇ ಕೂತುಕೊಂಡಿರ್ತೀನಿ"

"ಬೇಡಮ್ಮ ನಿನಗ್ಯಾಕೆ ತೊಂದರೆ ? ಇನ್ನೊಬ್ಬರಿಗೆ ಎಷ್ಟು ತೊಂದರೆಯಾಗುತ್ತೆ ಅಂತ ಅಷ್ಟಾದರೂ ತಿಳಿಯಬೇಡವಾ ಅವನಿಗೆ ! ಪಾಪ, ಅಪರೂಪಕ್ಕೆ ಬಂದಿದಾನೆ ಅಂತಸುಮ್ಮನಿದ್ರೆ ಹೀಗೇ ನೋಡು. "ಹಾಗೆ ಹೇಳಿದರೂ, ನಿದ್ದೆ ತಡೆಯಲಾರದೇ ಜಾನಕಿ ಹೋಗಿ ಮಲಗಿದಳು. ಸುಮತಿ ಕೈಯಲ್ಲಿ ಒಂದು ಪುಸ್ತಕ ಹಿಡಿದಳು ಅವಳ ಕಣ್ಣುಗಳೂ ಎಳೆ ಎಳೆದುಕೊಂಡು ಹೋಗುತ್ತಿದ್ದವು.

ಗೇಟು ಕಿರ್ರನೆ ಸದ್ದು ಮಾಡಿದ್ದು ಕೇಳಿಸಿತು. ಬಂದಿದ್ದವನು ಸಂಕೇತ, ಅವನು ಮೆಲ್ಲನೆ ಬಾಗಿಲು ಬಡಿದ. ಬೆಲ್ ಮಾಡಲಿಲ್ಲ. ಸುಮತಿ ಸಂದೇಹದಿಂದ ಕಿಟಕಿಯ ಬಳಿ ಪರದೆ ಸರಿಸಿ ಹೊರಕ್ಕೆ ನೋಡಿದಳು.

"ನಾನು... ನಾನು... ಬಾಗಿಲು ತೆಗೀರಿ" ಅಂತಂದ ಕೆಳದನಿಯಲ್ಲಿ ಸುಮತಿ ಬಾಗಿಲು ತೆಗೆದೊಡನೆ, ಸರ್ರನೆ ಒಳ ಬಂದು ಬಾಗಿಲನ್ನು ಭದ್ರಪಡಿಸಿದ" ಮಮ್ಮೀಗೆ ನಿದ್ದೆ ಬಂದಿದೆಯಾ ?"

ಪಿಸುದನಿಯಲ್ಲಿ ಕೇಳಿದ ಯಾಕೆ ಹೀಗೆ ಕೇಳ್ತಿದಾನೋ ಅಂತಂದುಕೊಂಡು, ''ಹುಂ ಮಲಗಿದಾರೆ... ಎಬ್ಬಿಸ್ಲಾ?'' ಅಂತ ಕೇಳಿದಳು.

''ಬೇಡಾ... ಬೇಡಾ...'' ಎಂದವನು, ಇವತ್ತು ಏನಾಗಿ ಹೋಯ್ತು ಗೊತ್ತಾ ? ಅವನ ದನಿ ನಡುಗಿತ್ತು... ಸುಮತಿಗೂ ಗಾಬರಿಯಾಗಿತ್ತು.

''ಏನಾಯ್ತು ? ಆಕ್ಸಿಡೆಂಟ್ ಏನಾದ್ರೂ...''

''ಇಲ್ಲ.. ಇಲ್ಲ...'' ಉಗುಳು ನುಂಗಿದ.

''ಮತ್ತೆ ಯಾಕೆ ಇಷ್ಟು ಲೇಟಾಯಿತು ?''

'' ಇಲ್ಲಿ ಬೇಡ ಮಹಡಿಗೆ ಬನ್ನಿ ಹೇಳ್ತೀನಿ...'' ಎನ್ನುತ್ತಾ ಅವಳ ಕೈ ಹಿಡಿದ. ಅವಳಿಗೆ ಮತ್ತೂ ಗಾಬರಿಯಾಗಿತ್ತು.

''ಕೈ ಬಿಡಿ... ನಾನು ಬರ್ತೀನಿ'' ಎಂದು ಹೇಳಿ. ಕೈ ಬಿಡಿಸಿಕೊಂಡಳು.

''ಸಾರಿ...'' ಎನ್ನುತ್ತಾ ಅವನು ಮುಂದಾಗಿ ಹತ್ತಿದ. ಇವಳು ನಿಧಾನಿಸಿದಳು. ಅವನು ಹಿಂತಿರುಗಿ ನೋಡಿ... ಬನ್ನೀ...'' ಎಂದ ವಿಧಿ ಇಲ್ಲದೇ ಇವಳೂ ಅವನ ಹಿಂದೆ ಮಹಡಿ ಏರಿದಳು. ಅವಳು ಸಮೀಪಿಸಿದೊಡನೆ, ಅವಳ ಭುಜಕ್ಕೆ ಒರಗಿ ಅಳಲಾರಂಭಿಸಿದ. ಅವಳಿಗೆ ಹೇಗೆ ಹೇಗೋ ಆಯಿತು... ಅವನನ್ನು ಹಿಂದಕ್ಕೆ ತಳ್ಳಿದಳು...''

''ಏನಾಯ್ತು ! ಯಾಕೆ ಹೀಗೆ ಅಳ್ತಿದೀರಿ...?'' ಸಿಡುಕಿನಿಂದ ಕೇಳಿದಳು.

''ನಾನು... ನಾನು... ಮತ್ತೊಮ್ಮೆ ಅನಾಥನಾಗಿ ಬಿಟ್ಟೆ ಸುಮತೀ'' ಬಿಕ್ಕಳಿಸಿ ಅಳುತ್ತಿದ್ದವನನ್ನು ಹೇಗೆ ಸಮಾಧಾನಗೊಳಿಸಬೇಕೆಂದು ತಿಳಿಯಲಿಲ್ಲ.

''ಏನಾಯ್ತು ? ಯಾರಿಗೆ ಏನಾಯ್ತು ?''

''ನನ್ನ ಸ್ನೇಹಿತ ದಿನೇಶ ಇದಾನಲ್ಲ.. ಅವನ ತಾಯಿ... ನನಗೆ ತಾಯಿಗಿಂತ ಹೆಚ್ಚಾಗಿದ್ದರು...'' ಮತ್ತೆ ಬಿಕ್ಕಿದ.

''ಏನಾಯ್ತು ಅವರಿಗೆ...''

''ಅವರು... ಅವರು... ಸತ್ತು ಹೋದ್ರು...'' ಸುಮತಿ ಬಿಟ್ಟ ಬಾಯಿ ಬಿಟ್ಟ ಕಣ್ಣುಗಳಿಂದ ಅವನನ್ನೇ ನೋಡಿದಳು... ಅವನ ವರ್ತನೆ ಸ್ವಲ್ಪ ಅತಿರೇಕವಾಗಿ ಕಂಡಿತ್ತು. ಸ್ನೇಹಿತನ ತಾಯಿಯ ಸಾವಿಗಾಗಿ, ಹೀಗೆ ಇವನು ಬಿಕ್ಕಿ ಬಿಕ್ಕಿ ಅಳುವುದೆಂದರೇ ಇವನಿಗೆ ಏನು ಸಮಾಧಾನ ಹೇಳುವುದು ? ಬೆಪ್ಪಳಂತೆ ಸುಮ್ಮನೇ ನಿಂತಳು. ಅವಳ ನಿದ್ದೆ ಹಾರಿಹೋಗಿತ್ತು...''

''ನನ್ನ ಡ್ಯಾಡಿ ಸತ್ತು ಹೋದಾಗ, ನಾನು ಅನಾಥನಾಗಿ ಬಿಟ್ಟಿದ್ದೆ... ಸುಮತೀ ಆಗ ನನಗೆ

ಸಮಾಧಾನ ಹೇಳಿ ನನ್ನನ್ನು ಸರಿ ಮಾಡಿದವರು ಅವರೇ... ಆಸಕ್ತಿಯನ್ನು ಕಳೆದುಕೊಂಡಿದ್ದವನಿಗೆ, ಧೈರ್ಯ ತುಂಬಿದವರು ಅವರೇ... ಮಂಕುತನವನ್ನು ಹೋಗಿಸಿ, ಉತ್ಸಾಹ ತುಂಬಿಸಿದವರು ಅವರೇ... ಆಕೆ ನನ್ನಲ್ಲಿ ಮತ್ತೆ ಚೈತನ್ಯವನ್ನು ತುಂಬದೇ ಇದ್ದಿದ್ದರೆ... ನಾನೂ ಈ ದಿನ ಜಗ್ಗು ತರಹ ಕೊಳೆತ ವೆಜಿಟೆಬಲ್ ಆಗಿರುತ್ತಿದ್ದೆ.. ಅಂತಹ ತಾಯಿಯನ್ನು ನಾನು ಈ ದಿನ ಕಳೆದುಕೊಂಡು ಬಿಟ್ಟೆ.. ನಾನು ಪಾಪಿ... ನಾನು ಪಾಪಿ...'' ಎಂದು ಮುಖ ಮುಚ್ಚಿ ಅಳತೊಡಗಿದಾಗ ಅವಳಿಗೆ ವ್ಯಥೆಯಾಗಿತ್ತು...

ಸ್ನೇಹಿತನ ತಾಯಿ ಸತ್ತಿರುವುದು ದುಃಖದ ಸಂಗತಿಯೇ... ಆದರೆ ಇವನ ಗೋಳಾಟ ಸ್ವಲ್ಪ ಹೆಚ್ಚು ಅಂತಲೇ ಅನ್ನಿಸ್ತಿದೆ... ಸ್ವಂತ ತಾಯಿಯ ದುಗುಡ ಇವನಿಗೆ ಅರ್ಥವಾಗುವುದಿಲ್ಲ, ಅವಳಿಗಾಗಿ ಮರುಗುವುದಿಲ್ಲ, ಈಗ ಸ್ನೇಹಿತನ ತಾಯಿಗಾಗಿ ಹೀಗೆ ರೋಧಿಸುವುದೆಂದರೇ ...? ಆದರೂ ಈಗ ಇವನಿಗೆ ಸಮಾಧಾನದ ಮಾತುಗಳನ್ನು ಹೇಳದಿದ್ದರೆ, ಇವನ ರೋಧನ ನಿಲ್ಲುವುದಿಲ್ಲ ಎಂದುಕೊಂಡು ಅವನ ಭುಜದ ಮೇಲೆ ಕೈ ಇಟ್ಟಳು.

''ಸಮಾಧಾನ ಮಾಡ್ಕೊಳ್ಳಿ... ನೀವೇ ಹೀಗೆ ದುಃಖಿಸಿದರೆ, ನಿಮ್ಮ ಸ್ನೇಹಿತನಿಗೆ ಯಾರು ಸಮಾಧಾನ ಹೇಳ್ತಾರೆ...?''

''ಅವರು ದಿನೇಶನ ತಾಯಿಗಿಂತ, ನನಗೆ ತಾಯಿಯಾಗಿದ್ದರು. ಅವರು ನನ್ನನ್ನು ತಮ್ಮ ಸ್ವಂತ ಮಗನಂತೆ ಪ್ರೀತಿಸುತ್ತಿದ್ದರು. ನನ್ನ ತಾಯಿ ಸಹ ನನ್ನನ್ನು ಎಂದೂ ಅಷ್ಟು ಪ್ರೀತಿಸಲಿಲ್ಲ.''

ಸುಮತಿ ಚಕಿತಳಾದಳು. ಇವನ ಮನದಲ್ಲಿ ಏನಿದೆ ಅನ್ನುವುದು ಹೊರಬೀಳುತ್ತಿದೆ ಎಂದು ಅರ್ಥವಾಗುತ್ತಿತ್ತು.

''ನನ್ನ ಮಮ್ಮೀಗಂತೂ ಸದಾ ಜಗ್ಗೂ... ಜಗ್ಗೂನ ಬಿಟ್ಟರೆ ಬೇರೆ ಪ್ರಪಂಚವೇ ಇಲ್ಲ ಅವಳಿಗೆ. ಅವನು ಹುಟ್ಟಿ ಮಮ್ಮಿಯನ್ನು ನನ್ನಿಂದ ಕಸಿದುಕೊಂಡ... ಅದಕ್ಕೆ ನಾನು ಅವನನ್ನು ಹೇಟ್ ಮಾಡುವುದು...'' ಮನದ ಕಹಿಯನ್ನೆಲ್ಲ ಒದರುವವನಂತೆ ಮಾತನಾಡುತ್ತಿದ್ದ.

''ಆಕೆ ತುಂಬಾ ಪ್ರೆಟ್ಟಿಯಾಗಿದ್ದರು... ಆಕ್ಸಿಡೆಂಟ್‌ನಲ್ಲಿ ಅವರ ತಲೆ ಜಜ್ಜಿ ಹೋಗಿ ವಿಕಾರವಾಗಿತ್ತಂತೆ... ನನಗೆ ಎಷ್ಟು ದುಃಖವಾಗ್ತಿದೆ ಗೊತ್ತಾ ? ನಾನು ಈ ಊರಿಗೆ ಬರದೇ ಇದ್ದಿದ್ದರೆ ಚೆನ್ನಾಗಿತ್ತು. ಈ ಟ್ರಾಜಿಡಿಯನ್ನು ನನ್ನಿಂದ ಸಹಿಸಿಕೊಳ್ಳೋಕೇ ಆಗ್ತಿಲ್ಲ'' ಮತ್ತೆ ಮತ್ತೆ ಬಿಕ್ಕಿದ.

ಒಬ್ಬ ಗಂಡಸು, ತಾಯಿಯನ್ನು ಸತಾಯಿಸುವವನು, ಹೀಗೆ ದುಃಖಿಸಬಹುದೆಂದು ಕೊಂಡಿರಲಿಲ್ಲ, ಅವಳು

''ನಾನು ಸ್ಪಾನ್ಸರ್ ಮಾಡ್ತೀನಿ... ನಿನ್ನ ತಾಯಿಯನ್ನು ಅಮೆರಿಕಾಕ್ಕೆ ಕರೆದುಕೊಂಡು ಬಾ ಅಂತ ಎಷ್ಟು ಸಲ ಹೇಳಿದ್ನೋ... ದಿನೇಶ ಕರೆದುಕೊಂಡು ಬರಲೇ ಇಲ್ಲ, ನನಗೆಷ್ಟು ವ್ಯಥೆಯಾಗ್ತಿದೆ ಗೊತ್ತಾ !'' ಕಣ್ಣು ಮೂಗುಗಳನ್ನು ಒರೆಸಿಕೊಂಡ.

"ಅದಕ್ಕೇ ಹಣೇಬರಹ ಅನ್ನೋದು. ನಾವು ಅಂದುಕೊಂಡಂತೆ ಎಲ್ಲಾ ನಡೆಯುವುದಿಲ್ಲ... ನಿಮಗೆ ತಿಳುವಳಿಕೆ ಇದೆ... ಈಗ ನೀವು ಹೀಗೆ ಅತ್ತರೆ ಏನು ಪ್ರಯೋಜನ ? ನಿಮ್ಮ ಸ್ನೇಹಿತನಿಗೆ, ಅವರ ಮನೆಯವರಿಗೆ ಸಮಾಧಾನವನ್ನು ನೀವೇ ಹೇಳಬೇಕು..."ಸುಮತಿ ಹೇಳಿದಳು.

"ನನ್ನ ಕೈಲಿ ಆಗುಲ್ಲ ಸುಮತೀ... ನಾನೇ ಅಪರಾಧಿ ಅನ್ನೋ ತರಹ ಅನ್ನಿಸ್ತಿದೆ. ಅವನ ತಂಗಿಯಂತೂ ಅತ್ತು ಅತ್ತು ಸುಸ್ತಾಗಿ ಬಿಟ್ಟಿದಾಳೆ..." ಅಲ್ಲಿ ನನಗೆ ಅವರುಗಳ ಎದುರಿನಲ್ಲಿ ಅಳುವೇ ಬರಲಿಲ್ಲ. ಈಗ ನಿಮ್ಮೊಡನೆ ಹೇಳುವಾಗ ಯಾಕೋ ತಡೆಯೋಕೇ ಆಗ್ತಿಲ್ಲ... ಇದನ್ನೆಲ್ಲ ಅಮ್ಮನಿಗೆ ಹೇಳುಕ್ಕಾಗುಲ್ಲ. ಅವಳಿಗೆ ಏನೂ ಅನ್ನಿಸೋದೇ ಇಲ್ಲ. ಇನ್‌ಫ್ಯಾಕ್ಟ್ ಮಮ್ಮೀಗೆ ಖುಷಿಯಾಗುತ್ತೆ"

ಅವನ ಮಾತುಗಳು ಸರಿ ಎನಿಸಲಿಲ್ಲ. "ಛೆ... ಛೆ ಹಾಗ್ಯಾಕೆ ಹೇಳ್ತೀರಿ ! ಇಂಥ ವಿಷಯಗಳಿಗೆ ಯಾರಾದ್ರೂ ಖುಷಿ ಪಡ್ತಾರಾ ?... ನಿಮ್ಮ ಮಮ್ಮಿ ಏನೂ ಅಷ್ಟು ಕೆಟ್ಟವರಲ್ಲ." ಅವಳಿಗ್ಯಾಕೋ ಮಾತನ್ನು ಮುಂದುವರೆಸುವುದು ಬೇಡವೆನ್ನಿಸಿತ್ತು. ಅವನನ್ನು ಅಲ್ಲಿಯೇ ಬಿಟ್ಟು ತನ್ನ ರೂಮಿಗೆ ಬಂದಳು. ಒಂದುಗಳಿಗೆ ಹಾಗೇ ನಿಂತಿದ್ದವನು ಮತ್ತೆ ಏನೋ ನೆನಪಾದವನಂತೆ, ಅವಳ ಹಿಂದೆ ಬಂದು ಬಾಗಿಲ ಬಳಿಯೇ ನಿಂತು ಕೇಳಿದ.

"ನಾನು ಸ್ನಾನವನ್ನೇ ಮಾಡಿಲ್ಲ. ಈಗ ಮಾಡಲೋ ? ಬೆಳಿಗ್ಗೆ ಮಾಡಿದರೂ ಆಗುತ್ತೋ..." ಅವಳಿಗೆ ನಗು ಬರುವಂತಾಗಿತ್ತು.

"ನಿಮಗೆ ಇದರಲ್ಲೆಲ್ಲ ನಂಬಿಕೆ ಇದ್ದರೆ ಈಗಲೇ ಮಾಡಿ... ಇಲ್ಲದಿದ್ದರೆ ನಿಮ್ಮಿಷ್ಟ" ಇವನೇನು ಮುಗ್ಧನೋ, ಅವಿವೇಕಿಯೋ ಎಂದುಕೊಂಡಳು.

"ನನಗೆ ಏನೂ ಗೊತ್ತಾಗ್ತಿಲ್ಲ ಸುಮತೀ... ನೀವು ಹೇಗೆ ಹೇಳಿದ್ರೆ ಹಾಗೆ."

"ನೀವೂ ಸ್ಮಶಾನಕ್ಕೆ ಹೋಗಿದ್ದರೆ, ಈಗಲೇ ಮಾಡಿಬಿಡಿ... ಅದೇ ಸರಿ"

"ಹಾಗಾದ್ರೆ ಈಗಲೇ ಮಾಡಿ ಬಿಡ್ತೀನಿ..." ಎಂದಾಗ ಅವಳಿಗೆ ಕಸಿವಿಸಿಯಾಗಿತ್ತು.

"ನನ್ನ ಬಾತ್‌ರೂಂನಲ್ಲಿ ಗೀಸರ್ ಇಲ್ಲ. ಇಫ್ ಯೂ ಡೋಂಟ್ ಮೈಂಡ್... ನಾನು ನಿಮ್ಮ ಬಾತ್‌ರೂಂನಲ್ಲಿ ಸ್ನಾನ ಮಾಡ್ಲಾ?"

ಸುಮತಿಗೆ ಪೇಚಿಗೆ ಸಿಕ್ಕಿ ಬಿದ್ದಂತಾಯಿತು. ಉಹೂಂ ಎನ್ನುವಂತಿಲ್ಲ, ಉಹೂಂ ಎನ್ನುವಂತಿಲ್ಲ, ಗೀಸರ್ ಸ್ವಿಚ್ ಆನ್ ಮಾಡಿ ಬಂದಳು. ಅವನು ಅಲ್ಲೇ ಬಾಗಿಲ ಹೊರಗೇ ನಿಂತಿದ್ದ. ಈಗ ಅವಳಿಗೂ ಸ್ನಾನ ಮಾಡಬೇಕೆನ್ನಿಸಿತ್ತು. ಏನೋ ಮುಜುಗರವಾಗಿತ್ತು.

"ನೀವು ಸ್ನಾನ ಮಾಡಿ... ನಾನು ನಿಮಗೋಸ್ಕರ ಬಿಸಿಯಾಗಿ ಕಾಫಿ ಮಾಡಿಕೊಂಡು ಬರ್ತೀನಿ"

"ಥ್ಯಾಂಕ್ಯೂ ನಾನೇ ಹೇಳೋಣ ಅಂತಿದ್ದೆ. ಮೊದಲೇ ಚಳಿಗಾಲ... ಬಿಸಿ ಬಿಸಿಯಾಗಿ ಏನಾದ್ರೂ ಬೇಕೇ ಬೇಕು" ಸುಮತಿ ಕೆಳಗಿಳಿದು ಬಂದು ಸ್ನಾನ ಮಾಡಿದಳು. ಬಾಯ್ಲರ್‌ನಲ್ಲಿ ಬಿಸಿನೀರಿತ್ತು. ಅವನು ಸ್ನಾನ ಮುಗಿಸಿ ಬರುವವರೆಗೂ ಕಾದಿದ್ದು ಕಾಫಿಯನ್ನು ತೆಗೆದುಕೊಂಡು ಬಂದಳು. ಒದ್ದೆ ಟವೆಲನ್ನು ಸುತ್ತಿಕೊಂಡು, ತಲೆಬಾಚಿಕೊಳ್ಳುತ್ತಿದ್ದವನನ್ನೇ ಗಮನಿಸಿದಳು ಸಣ್ಣಗೆ ಕೆಮ್ಮಿದಳು. ಹೊರಬಂದು ಕಾಫಿಯ ಬಟ್ಟಲನ್ನು ತೆಗೆದುಕೊಂಡ.

"ನಿಮಗೇ..." ಬಿಸಿ ಕಾಫಿಯನ್ನು ಗುಟುಕರಿಸಿದ.

"ಈಗ ಮಧ್ಯರಾತ್ರಿ ಆಗಿದೆ... ಈಗ ಕಾಫಿ ಕುಡಿದರೆ ನಿದ್ದೆ ಬರುಲ್ಲ..."

"ನನಗೂ ನಿದ್ದೆ ಬರುಲ್ಲ... ಬೆಳಗ್ಗಿಂದ ಏನನ್ನೂ ತಿಂದಿಲ್ಲ... ಅಲ್ಲದೇ ಅದೇ ನೆನಪುಗಳು..."

"ತಿನ್ನುಕ್ಕೆ ಏನಾದ್ರೂ ಬೇಕಾ ?"

"ಏನಿದೆ ?"

"ಏನಾದ್ರೂ ತರ್ತೀನಿ"

"ಏನಾದ್ರೂ ತರೋಕೆ, ಕೆಳಕ್ಕೆ ಯಾಕೆ ಇಳಿದು ಹೋಗ್ತೀರಾ ? ಬೇಡಬಿಡಿ... ಬ್ಯಾಗ್‌ನಲ್ಲಿ ಏನಾದ್ರೂ ಇದ್ದರೆ ಕೊಡಿ..."

"ನನ್ನ ಹ್ಯಾಂಡ್ ಬ್ಯಾಗ್‌ನಲ್ಲಾ... ನಾನು ಹಾಗೆಲ್ಲಾ ಏನೂ ಇಟ್ಟುಕೊಳ್ಳೋಲ್ಲ. ನೀವು ಕೊಟ್ಟ ಚಾಕ್ಲೇಟ್ ಕೂಡಾ ಇಲ್ಲ, ಎಲ್ಲಾ ಮುಗಿದು ಹೋಗಿದೆ."

"ಚೆನ್ನಾಗಿತ್ತಾ ! ನಿಮಗೆ ಇಷ್ಟವಾಯಿತಾ ?"

"ನಾನು ರುಚಿ ಕೂಡಾ ನೋಡಲಿಲ್ಲ. ಎಲ್ಲಾ ಜಗ್ಗೂನೇ ತಿಂದ" ಎಂದು ಬಿಟ್ಟಳು. ಅವನು ತಕ್ಷಣವೇ ಕೆರಳಿದ.

"ನಿಮಗೆ ಕೊಟ್ಟ ಚಾಕ್ಲೇಟ್ಸ್‌ನ ಅವನಿಗೇಕೆ ಕೊಟ್ರಿ ?"

"ನಾನು ಕೊಡಲಿಲ್ಲ, ಅವನೇ ಅವನೇ ತಿಂದು ಬಿಟ್ಟಿದಾನೆ" ಈಗ ಅವಳಿಗೆ ತಾನು ಈ ಮಾತನ್ನು ಹೇಳಬಾರದಿಗಿತ್ತೆನಿಸಿತ್ತು.

"ಅದಕ್ಕೇ... ಅದಕ್ಕೇ... ನಾನು ಅವನನ್ನು ಹೇಟ್ ಮಾಡೋದು... ನೀವು ಅವನಿಗೆ ಬಹಳ ಸಲುಗೆ ಕೊಟ್ಟುಬಿಟ್ಟಿದೀರಿ..." ಮತ್ತೆ ರೇಗಿದ.

"ಹಾಗೇನಿಲ್ಲ, ಹೋಗಲಿ ಬಿಡಿ ನೀವೇಕೆ ಅಪ್ಸೆಟ್ ಆಗ್ತೀರಾ ?"

"ಯಾಕಾಗಬಾರದು ? ಮೊದಲ್ನಿಂದಲೂ ಅಷ್ಟೇ... ನನ್ನ ಲೈಫ್‌ನೇ ಕೆಡಿಸಿ ಬಿಟ್ಟ

ಅವನು... ಅವನಂತೂ ದಡ್ಡ ಅಂತಂದ್ರೆ ನಿಮಗಾದ್ರೂ ಬುದ್ಧಿ ಬೇಡವಾ ? ಅವನಿಗೆ ಕಾಣದಂತೆ ಮುಚ್ಚಿಡಬೇಕಾಗಿತ್ತು.'' ಆಕ್ಷೇಪಣೆ ಮಾಡಿದ.

''ಹೌದು. ನನಗೆ ಬುದ್ಧಿ ಇಲ್ಲ. ಆದರೆ ನೀವೂ ತಿಳುವಳಿಕೆಯುಳ್ಳವರು... ನೀವು ಏಕೆ ಅವನಿಗೆ ಚಾಕ್ಲೆಟ್ಸ್ ಕೊಡಲಿಲ್ಲ'' ನೀವೇ ಕೊಟ್ಟಿದ್ದರೆ, ಹೀಗೆ ಹಗರಣವೇ ಆಗ್ತಿರಲಿಲ್ಲ..''

''ಇಂಪಾಸಿಬಲ್... ನಾನು ಅವನಿಗೆ ಏನನ್ನೂ ಕೊಡುಲ್ಲ. ನನ್ನ ಹ್ಯಾಪಿನೆಸ್‌ನೆಲ್ಲಾ ಕಿತ್ತುಕೊಂಡವನಿಗೆ ನಾನು ಏನನ್ನೂ ಕೊಡುಲ್ಲ'' ಅವನು ಜೋರಾಗಿ ಮಾತನಾಡಿದಾಗ, ಸುಮತಿ ತಡೆದಳು.

''ಮೆಲ್ಲಗೆ ಮಾತ್ನಾಡಿ. ಅರ್ಧರಾತ್ರಿಯಾಗಿದೆ. ಅಕ್ಕಪಕ್ಕದವರಿಗೆ ಕೇಳಿಸಿದ್ರೆ ಏನಂದುಕೊಳ್ತಾರೆ ! ನಿಮ್ಮ ಮಮ್ಮಿ ಬಂದು ಕೇಳಿದ್ರೆ ಏನು ಹೇಳ್ತೀರಿ ?''

''ನಾನು ಯಾರಿಗೂ ಕೇರ್ ಮಾಡುಲ್ಲ...''

''ಸರಿ. ನಿಮ್ಮಿಷ್ಟ ಏನು ಬೇಕಾದ್ರು ಮಾಡ್ಕೊಳ್ಳಿ... ನಾನು ಹೋಗ್ತೀನಿ''

''ನಿಂತ್ಕೊಳ್ರೀ... ಅವಳ ಕೈ ಹಿಡಿದ... ನನಗೆ ಕೋಪ ಬರಿಸಿದವರು ನೀವು... ಈಗ ನನ್ನ ಮಾತು ಬೇಡ ಅಲ್ವಾ ?''

''ನೀವು ಸಮಾಧಾನವಾಗಿ ಮಾತನಾಡೋದಾದ್ರೆ ನಾನು ಕೇಳಿಸಿಕೊಳ್ತೀನಿ...''

''ಜಗ್ಗು ವಿಷಯ ಬಂದರೆ, ಏನೇನೋ ಆಗುತ್ತೆ ನನಗೆ... ಅದಕ್ಕೆ ಏನೇನೋ ಆಡಿ ಬಿಡ್ತೀನಿ... ಅವನ ಹೆಸರನ್ನೇ ಎತ್ತಬೇಡಿ ನನ್ನ ಮುಂದೆ.''

''ಹೋಗಲಿ ಬಿಡಿ. ಸಾಕಷ್ಟು ಹೊತ್ತಾಗಿದೆ. ಮಲಕ್ಕೊಳ್ಳಿ... ''

''ನನಗೆ ನಿದ್ದೆ ಖಂಡಿತಾ ಬರುಲ್ಲ. ನಿಮ್ಮ ಹತ್ತಿರ ಸ್ಲೀಪಿಂಗ್ ಪಿಲ್ಸ್ ಇದ್ದರೆ ಎರಡು ಕೊಡಿ''

''ನನ್ನ ಹತ್ತಿರ ಇಲ್ಲ.... ಆಂಟಿ ಹತ್ತಿರ ಇರಬಹುದು...''

''ಮಮ್ಮೀ ಪಿಲ್ಸ್ ತಗೋತಾಳಾ !''

''ಅಲ್ಲ... ಜಗ್ಗೂಗೋಸ್ಕರ...''

''ಮತ್ತೆ ಜಗ್ಗು ! ನನ್ನ ತಲೆ ಸಿಡಿದು ಹೋಗ್ತಿದೆ.. ಹೊಟ್ಟೆಗಿಲ್ಲ, ನಿದ್ದೆ ಇಲ್ಲ... ತುಥ್...'' ಅವಳು ಮೃದುವಾಗಿ ನಕ್ಕಳು.

''ನೀವು ಇಲ್ಲೇ ಇರಿ. ನಾನು ಈಗಲೇ ಕೆಳಗೆ ಹೋಗಿ ಏನನ್ನಾದ್ರೂ ತಿನ್ನುಕ್ಕೆ ತರ್ತೀನಿ. ಆಗ ನಿಮ್ಮ ಹೊಟ್ಟೆಯೂ ತುಂಬುತ್ತೆ. ನಿದ್ದೇನೂ ಬರುತ್ತೆ.'' ಎನ್ನುತ್ತಾ ಕೆಳಗಿಳಿದು ಬಂದಳು. ಒಂದಿಷ್ಟು ಬ್ರೆಡ್ಡು, ಬಾಳೆ ಹಣ್ಣುಗಳನ್ನು, ಜ್ಯಾಮ್ ಬಾಟಲಿಯನ್ನು ತಂದಳು. ಸಂಕೇತ ತೃಪ್ತಿಯಿಂದ

ಅವಳನ್ನೇ ನೋಡಿದ. "ಥ್ಯಾಂಕ್‌ಯು ಸುಮತಿ, ನೀವೊಬ್ರೇ ನನ್ನನ್ನು ಅರ್ಥಮಾಡಿಕೊಂಡಿರೋರು" ಮೆಚ್ಚುಗೆಯಿಂದ ಹೊಗಳಿದ.

ಅವನು ಬ್ರೆಡ್ಡು ಬಾಳೆಹಣ್ಣುಗಳನ್ನು ತಿಂದು ಹೊಟ್ಟೆ ತುಂಬಿಸಿಕೊಳ್ಳುವವರೆಗೂ ಅವಳನ್ನು ಅಲ್ಲಿಯೇ ಇರಿಸಿಕೊಂಡ. ಜಠರಾಸುರ ಶಾಂತನಾದ ಮೇಲೆ, ಅವನ ಮುಖದಲ್ಲಿ ಮುಗುಳ್ನಗೆ ಮೂಡಿತು.

"ಥ್ಯಾಂಕ್‌ಯೂ ಸುಮತಿ... ನಡು ರಾತ್ರೀಲಿ ನಿಮಗೆ ತೊಂದರೆ ಕೊಟ್ಟೆ... ಸಾರಿ ನೀವುಹೋಗಿ ಮಲಕ್ಕೊಳ್ಳಿ" ಎಂದ.

"ಓ.ಕೇ. ಗುಡ್‌ನೈಟ್... ಏನಾದ್ರೂ ಬೇಕಾಗಿದ್ರೆ ಈಗಲೇ ಹೇಳಿಬಿಡಿ. ಆಮೇಲೆ ಮತ್ತೆ ಎಬ್ಬಿಸಬೇಡಿ. ನಾಳೆ ಬೆಳಿಗ್ಗೆ ಫಸ್ಟ್ ಪಿರಿಯಡ್ ನನಗೆ ಲೆಕ್ಚರ್ ಕ್ಲಾಸಿದೆ."

"ಇಲ್ಲ ಮತ್ತೆ ಡಿಸ್ಟರ್ಬ್ ಮಾಡುಲ್ಲ... ಪ್ರಾಮಿಸ್" ಎಂದು ಕತ್ತನ್ನು ಮುಟ್ಟಿಕೊಂಡು ಮಂದಹಾಸ ಬೀರಿ ಗುಡ್‌ನೈಟ್ ಎಂದ. ಬದುಕಿದೆಯಾ ಬಡಜೀವವೇ ಎಂದುಕೊಂಡು, ಸುಮತಿ ರೂಮಿನ ಬಾಗಿಲನ್ನು ಭದ್ರಪಡಿಸಿ ಮಲಗಿದಳು. ದೂರದಲ್ಲೆಲ್ಲೋ ಎರಡು ಗಂಟೆ ಹೊಡೆದ ಸದ್ದು ಕೇಳಿಸಿತ್ತು. ಆತಂಕದಿಂದ ಕುರಿಯನ್ನು ಎಣಿಸಲು ಪ್ರಾರಂಭಿಸಿದಳು. ನಿಧಾನವಾಗಿ ನಿದ್ದೆ ಸೆಳೆಯಿತು.



"ಹರೀಶ ಬಂದಿದ್ದ... ಸಂಕೇತನ್ನ ಎಬ್ಬಿಸಿಕೊಂಡು ಎಳೆದುಕೊಂಡು ಹೋದ... ಕೇಳಿದ್ರೆ ಇಬ್ಬರೂ ಸರಿಯಾಗಿ ಹೇಳಲಿಲ್ಲ... ನಂಗ್ಯಾಕೋ ಗಾಬರಿ ಆಗ್ತಿದೆ. ಏನಾದ್ರೂ ಪ್ರಾಬ್ಲಂ ಮಾಡಿಕೊಂಡಿದಾನಾ ಅಂತ..." ಜಾನಕಿ ನುಡಿದಾಗ, ಸುಮತಿ ಗಂಭೀರವಾದಳು.

"ಅವರ ಫ್ರೆಂಡ್ ತಾಯಿಗೆ ಆಕ್ಸಿಡೆಂಟ್ ಆಯ್ತಂತೆ..." ರಾತ್ರಿ ಸಂಕೇತ ಹೇಳಿದುದನ್ನೆಲ್ಲಾ ಹೇಳಿದಳು.

ಜಾನಕಿಯ ಕಣ್ಣುಗಳಲ್ಲಿ ವ್ಯಥೆ ತುಳುಕಿತು.

"ನೋಡಿದ್ಯಾ ನನಗೊಂದೂ ವಿಷಯವನ್ನು ಹೇಳುವುದಿಲ್ಲ, ಪಾಪ...ಯಾಕೆ ಹೀಗೆಲ್ಲಾ ಆಗುತ್ತೋ, ದಿನೇಶನೂ ಚಿಕ್ಕವನು..." ಸುಮತಿ ಏನನ್ನೂ ಹೇಳಲಿಲ್ಲ.

"ನನಗೊಂದು ಮಾತು ಹೇಳಿದ್ರೆ ನಾನೂ ಹೋಗಿ ಬರ್ತಿದ್ದೆ, ನಾನೇನು ಅವನ ವೈರಿಯೆ ! ನೀನಾದ್ರೂ ನನ್ನನ್ನು ಎಬ್ಬಿಸಬೇಕಾಗಿತ್ತು, ರಾತ್ರಿ ಅವನು ಬಂದಾಗ..."

"ನಿಮ್ಮನ್ನೇನೂ ಎಬ್ಬಿಸೋದು ಬೇಡ ಅಂದ್ರು... ಅದಕ್ಕೇ..."

''ನನಗೆ ತಿಳಿಸುಕ್ಕೆ ಇಷ್ಟವಿರಲಿಲ್ಲ. ಅವನಿಗೆ, ನನಗಿಂತ ಆಕೆ ಒಳ್ಳೆಯವಳು, ಅವನು ಅವರ ಹೊಟ್ಟೇಲಿ ಹುಟ್ಟಬೇಕಾಗಿತ್ತು. ದಿನೇಶನಿಗಿಂತ ಇವನನ್ನೇ ಹೆಚ್ಚಾಗಿ ಪ್ರೀತಿಸ್ತಿದ್ರು... ಇದೇ ಮಾತುಗಳನ್ನು ಹೇಳಿ ಹೇಳಿ, ನನ್ನನ್ನು ಕೆರಳಿಸಿದಾನೆ. ಒಂದು ದಿನ ನನಗೂ ವಿಪರೀತ ಕೋಪ ಬಂದು, ''ಹೋಗು ಅವರ ಮನೇಲೇ ಬಿದ್ದಿರು' ಅಂತ ಚೆನ್ನಾಗಿ ಬೈದು ಕಳಿಸಿದ್ದೆ. ಜಾನಕಿ ನೆನೆಸಿಕೊಂಡಳು.

ಚೆನ್ನಾಗಿದೆ ಈ ತಾಯಿ ಮಗನ ಕದನ ಎಂದುಕೊಂಡಳು.

''ಅದೇ ಕೋಪ ಇವನಿಗೆ. ಇವನೇ ಸರಿಯಿಲ್ಲ, ಆಕೆಯದೇನೂ ತಪ್ಪಿಲ್ಲ. ದಿನೇಶನ ತಂದೆಯೂ, ನಮ್ಮವರ ಕಂಪೆನಿಯಲ್ಲಿ ಕೆಲಸದಲ್ಲಿದ್ದುದು. ನಮಗೆ ಯಾವುದೋ ದೂರದ ಸಂಬಂಧ ಬೇರೆ. ದಿನೇಶನ ತಂದೆ ಅನುಕೂಲಸ್ಥರಲ್ಲ. ದೊಡ್ಡ ಸಂಸಾರ... ಅವರಿಗೆ ನಮ್ಮವರು ಬೇಕಾದಷ್ಟು ಸಹಾಯ ಮಾಡಿದಾರೆ. ದಿನೇಶ ಇಂಜನಿಯರ್ ಆಗಿ, ಒಂದು ಒಳ್ಳೆ ಪೊಸಿಷನ್‌ನಲ್ಲಿರುವುದಕ್ಕೆ ನಾವೇ ಕಾರಣ. ಆಕೃತಜ್ಞತೆ ಆಕೆಯಲ್ಲಿತ್ತು. ಆದ್ದರಿಂದಲೇ ಆಕೆಗೆ ಸಂಕೇತನ್ನ ಕಂಡರೆ ವಿಪರೀತ ಮರ್ಯಾದೆ. ಅದನ್ನು ಇವನು ಪ್ರೀತಿ ಅಂತ ತಿಳಿದುಕೊಂಡ. ಅಲ್ಲದೇ ಆಕೆಯ ಮನೆಯಲ್ಲಿ ಬೇರೆ ಸಮಸ್ಯೆಗಳಿರಲಿಲ್ಲ. ಎಲ್ಲಾ ಹುಡುಗ್ರನ್ನು ಸೇರಿಸ್ಕೊಂಡು ಕೈತುತ್ತು ಹಾಕೋದು. ಬೇಕಾದ ತಿಂಡಿಗಳನ್ನು ಮಾಡಿಕೊಡೋದು. ಅದೆಲ್ಲ ಸ್ವಲ್ಪ ಅತಿ ಅತಿ ಎನ್ನಿಸುವಂತೆ ಮಾಡುತ್ತಿದ್ದಳು. ಇವರುಗಳೆಲ್ಲಾ ಹೊಗಳಿದ್ದೇ ಹೊಗಳಿದ್ದು. ಪುಣ್ಯಾತ್ಗಿತ್ತಿ ! ಎಲ್ಲರ ಕೈಲೂ ಒಳ್ಳೆಯವಳು ಅನ್ನೋ ಬಿರುದು ಪಡೆದ್ಲು... ದಿನೇಶನ ಅತ್ತಿಗೆ ಸಂಬಂಧದ್ದೇ ಹುಡುಗಿ... ಪಾಪ ದಿನೇಶನ ತಂಗಿ ಇನ್ನು ಚಿಕ್ಕದು... ಮದುವೆಯಾದ್ರೂ ಆಗಿದ್ದಿದ್ರೆ ಚೆನ್ನಾಗಿರ್ತಿತ್ತು'' ಜಾನಕಿ ಕನಿಕರದಿಂದ ಲೊಚಗುಟ್ಟಿದಳು.

''ಆಕ್ಸಿಡೆಂಟ್ ಹೇಗಾಯ್ತಂತೆ! ಬಾಡೀನ ಬೇಗ ಕೊಟ್ರಂತಾ ?''

''ಏನೋ ನಾನು ಕೇಳಲಿಲ್ಲ; ಅವರೂ ಹೇಳಲಿಲ್ಲ.'' ಹಿಂದಿನಿಂದ ಬಂದು ನಿಂತಿದ್ದ ಜಗ್ಗು ಅವಳ ಸೀರೆಯ ಸೆರಗನ್ನು ಹಿಡಿದೆಳೆದ. ಹಿಂತಿರುಗಿದಳು.

''ಏನೋ ಜಗ್ಗು ? ಎಷ್ಟು ದಿನಗಳಾದವಲ್ಲೋ... ನಿನ್ನ ಹತ್ತಿರ ಮಾತನಾಡಿ. ಯಾವಾಗ ನೋಡಿದರೂ ರೂಮಿನೊಳಗೇ ಇರ್ತೀಯ ? ಸಾಯಂಕಾಲ ಬರುವಾಗ ಚಾಕ್ಲೇಟು ತರ್ತೀನಿ. ಹಾಗೇ ಯಾವುದಾದ್ರೂ ಪುಸ್ತಕ ತರ್ತೀನಿ'' ಎಂದು ಹೇಳಿ ಅವನ ತಲೆಯ ಮೇಲೆ ಕೈಯಾಡಿಸಿದಳು. ಅವನು ಹಲ್ಲು ಬಿಟ್ಟ.

''ನೋಡು ಸುಮತಿ, ಚಾಕ್ಲೇಟು ಅನ್ನುತ್ತಲೇ ನೆನಪಿಗೆ ಬಂತು. ಫ್ರೆಂಡ್ಸ್‌ಗಳಿಗೆಲ್ಲ ಚಾಕ್ಲೇಟ್ಸ್ ಕೊಟ್ಟಿರ್ತಾನೆ... ಜಗ್ಗೂಗೆ ಮಾತ್ರ ಕೊಡಲಿಲ್ಲ. ಒಳ್ಳೆ ಶತ್ರು ತರಹ ನೋಡ್ತಾನೆ. ತಮ್ಮ ಅನ್ನೋ ಪ್ರೀತೀನೇ ಇಲ್ಲ.'' ಸುಮತಿ ಉತ್ತರಿಸಲಿಲ್ಲ ಅಷ್ಟರಲ್ಲಿ ಫೋನು ರಿಂಗಾಗಿತ್ತು. ಸಂಕೇತ ಫೋನು ಮಾಡಿದ್ದ.

"ಯಾರು ? ಸುಮತೀನ ?... ನಾನು ಇಲ್ಲಿ ನರ್ಸಿಂಗ್ ಹೋಂನಿಂದ ಮಾತಾಡ್ತಾ ಇದೀನಿ... ದಿನೇಶನ ತಂಗಿ, ಸ್ಲೀಪಿಂಗ್ ಪಿಲ್ಸ್ ನುಂಗಿ ಬಿಟ್ಟಿದಾಳೆ... ಅವಳನ್ನು ಅಡ್ಮಿಟ್ ಮಾಡಿದಾರೆ..."

"ಹೌದಾ ? ಯಾವ ನರ್ಸಿಂಗ್ ಹೋಂ..."

"ನೀವು ಬರ್ತೀರಾ ?"

"ಇಲ್ಲ, ನಾನು ಕಾಲೇಜಿಗೆ ಹೋಗಬೇಕು. ಆದರೆ ಆಮೇಲೆ ಬರ್ತೀವಿ.

"ಸದಾ ಕಾಲೇಜು... ಕಾಲೇಜು. ನಿಮಗೆ ಅದೇ ಮುಖ್ಯ. ನಮ್ಮ ವ್ಯಥೆ ಬಗ್ಗೆ ಚಿಂತೇನೇ ಇಲ್ಲ" ಫೋನು ಇಟ್ಟು ಬಿಟ್ಟ

'ಅವಳಿಗೂ ಬೇಸರವಾಯ್ತು' ನನ್ನ ಮೇಲೇಕೆ ಹೀಗೆ ರೇಗಾಡ್ತಾನೆ ! ನಾನೇನು ಇವನ ಹೆಂಡತೀನಾ ?' ಹಾಗೆಂದುಕೊಂಡಾಗ, ಏನೋ ಒಂದು ರೀತಿಯೆನಿಸಿತು. ಇವನಿಗೇಕೆ ಕೇರ್ ಮಾಡಬೇಕು ಎಂದುಕೊಂಡಳು.

"ಏನಂತೆ ?" ಜಾನಕಿ ಬಳಿಗೆ ಬಂದು ನಿಂತಿದ್ದಳು.

"ದಿನೇಶನ ತಂಗಿ, ನಿದ್ದೆಯ ಮಾತ್ರೆಗಳನ್ನು ನುಂಗಿ ಬಿಟ್ಟಿದಾಳಂತೆ."

"ಅಯ್ಯೋ ಹೌದಾ ? ಇನ್ನೇನು ಗತಿ ದೇವರೇ...?

"ನರ್ಸಿಂಗ್ ಹೋಂಗೆ ಅಡ್ಮಿಟ್ ಮಾಡಿದಾರಂತೆ. ಸಂಕೇತ ಅಲ್ಲೇ ಇದಾರಂತೆ.

"ಅದಕ್ಕೇ ಅಂತ ಕಾಣುತ್ತೆ ಹೋದದ್ದು ನನಗೊಂದು ಮಾತು ಹೇಳಬಾರದಾಗಿತ್ತಾ ? ಅವನಂತೂ ಹೊರಗಿನೋನು ಇವನಾದ್ರೂ ಹೇಳಬಾರದಾಗಿತ್ತಾ ?"

"ಆಂಟೀ ನಾನು ಕಾಲೇಜಿಗೆ ಹೋಗಿ ಬರ್ತೀನಿ... ಹೊತ್ತಾಯ್ತು" ಅಂತ ಹೇಳಿ ಹೊರಟೇ ಬಿಟ್ಟಳು... ಸಾಯಂಕಾಲ ಕಾಲೇಜಿನಿಂದ ಬರುವಾಗ ಚಾಕ್ಲೇಟುಗಳನ್ನು ತಂದಿದ್ದಳು. ಜಗ್ಗು ಖುಷಿಯಿಂದ ತಿನ್ನುತ್ತಿದ್ದ. ಸುಮತಿ ಜಾನಕಿ ಅಲ್ಲೇ ಕುಳಿತು ಮಾತನಾಡುತ್ತಿದ್ದರು. ಸಂಕೇತ ಒಳಗೆ ಬಂದುದು ಅವರಿಬ್ಬರ ಗಮನಕ್ಕೆ ಬರಲಿಲ್ಲ, ಜಗ್ಗು ಕೈ ನೆಕ್ಕುತ್ತಾ ಕುಳಿತುದುದನ್ನು ಕಂಡು ಅವನ ಹೊಟ್ಟೆ ಉರಿದು ಹೋಯಿತು.

'ಏನು ಎಲ್ರೂ ಎಲ್ಲಿ ಅಂದ್ರೆ ಅಲ್ಲಿ ಹೀಗೆ ಕೂತಿದೀರಲ್ಲ, ರೂಮ್ನಲ್ಲಿ ಕೂತ್ಕೋಬಾರದಾ ! ಏಯ್ ಎದ್ದುಹೋಗೋ..." ಸುಮತಿ, ಜಾನಕಿ, ಮಾತು ನಿಲ್ಲಿಸಿ ಅವನ ಕಡೆ ತಿರುಗಿದರು. ಕೆಂಪಡರಿದ ಕಣ್ಣುಗಳಿಂದ ಅವನು ಜಗ್ಗುವನ್ನೇ ಕೆಕ್ಕರಿಸಿ ನೋಡುತ್ತಿದ್ದ. ಜಾನಕಿ, ಸರ್ರನೆ ಜಗ್ಗುವಿನ ಕೈ ಹಿಡಿದು ಅವನನ್ನು ರೂಮಿಗೆ ಎಳೆದುಕೊಂಡು ಹೋಗಿದ್ದಳು. ಅವನು ಬೆ ಬೆ ... ಎಂದು ವಿಕಾರ ಧ್ವನಿ ಮಾಡಿದ.

''ನಿಮಗೆ ಬೇರೆ ಕೆಲಸವಿಲ್ವಾ ಸುಮತಿ ? ಈ ಪೆದ್ದನ ಜೊತೆ ಕೂತಿರ್ತೀರಲ್ಲ.''

''ಕಾಲೇಜು ಮುಗಿಯಿತು. ಆರಾಮವಾಗಿದ್ದೆ ಕುಳಿತಿದ್ದೆ... ಜಗ್ಗು ಪೆದ್ದ ಆದರೇನಂತೆ. ಮನೆಯವನೇ... ಅವನಿಗೂ ನಮ್ಮ ಜೊತೆ ಕೂತ್ಕೊಳ್ಳೋಕೆ ಹಕ್ಕಿದೆ.''

''ಹಕ್ಕಿನ ವಿಷಯ ಹೇಳ್ತಿಲ್ಲ ನಾನು... ನರ್ಸಿಗ್ ಹೋಂಗೆ ಬನ್ನಿ ಅಂದ್ರೆ ಕಾಲೇಜು ಅಂತಂದ್ರಿ... ಸೀದಾ ನರ್ಸಿಂಗ್ ಹೋಂಗೆ ಬರಬಹುದಾಗಿತ್ತು. ಅದು ಬಿಟ್ಟು ಈ ಪೆದ್ದನಿಗೆ ಕಂಪೆನಿ ಕೊಡ್ತಿದೀರಲ್ಲ. ನಿಮಗೆ ಇದೇ ಇಷ್ಟ ಅಂತ ಕಾಣುತ್ತೆ'' ಎಂದು ನುಡಿದು ಮಹಡಿ ಏರಿದ್ದ. ಸುಮತಿ ಗಲಿಬಿಲಿಗೊಂಡಿದ್ದಳು. ಸಂಕೇತನ ಸಣ್ಣತನಕ್ಕೆ ಮರುಗಿದ್ದಳು. ಜಗ್ಗೂನ ಇಷ್ಟು ದ್ವೇಷಿಸುವವನು, ಬೇರೆಯವರನ್ನು ಪ್ರೀತಿಸಲು ಸಾಧ್ಯವೇ ? ಇವನು ಬರುವ ಮೊದಲು ಎಲ್ಲಾ ಸರಿಯಾಗಿತ್ತು. ಸುಚಿತ್ರಳ ಮದುವೆ ನೆರವೇರಿ ಬಿಟ್ಟಿದ್ದರೆ ತಾನು ಅಲ್ಲಿಯೇ ಹೋಗಿರಬಹುದಾಗಿತ್ತು. ಈಗ ಇಲ್ಲಿ ಬಂದು ಸಿಕ್ಕಿಕೊಂಡಂತಾಗಿದೆ. ಇವನೆಂದಿಗೆ ವಾಪಸ್ಸು ಹೋಗುವನೋ ಎಂದು ಚಿಂತಿಸಿದಳು.

ಜಾನಕಿಯೂ ತನ್ನ ರೂಮಿಗೆ ಹೊರಟು ಹೋಗಿದ್ದಳು. ಬಹುಶಃ ಸಂಕೇತನ ಮೇಲಿನ ಕೋಪಕ್ಕೆ ಜಗ್ಗೂಗೆ ಹೊಡೆಯಲೂಬಹುದು. ಈಗ ತಾನು ಮಧ್ಯೆ ಬಾಯಿ ಹಾಕಿದರೆ, ಮಾತು ಮತ್ತೆ ಎಲ್ಲಿಂದೆಲ್ಲಿಗೋ ಹೋಗುತ್ತದೆ. ಈಗ ಸುಮ್ಮನಿರುವುದೇ ವಾಸಿ ಎಂದುಕೊಂಡು ತನ್ನ ರೂಮಿಗೆ ಬಂದಳು. ಅಲ್ಲೇ ಟೇಬಲ್ ಮೇಲಿದ್ದ ಸುಚಿತ್ರಳ ವೆಡ್ಡಿಂಗ್ ಕಾರ್ಡ್ ಕಣ್ಣಿಗೆ ಬಿತ್ತು. ಅವಳ ಮದುವೆಗೆ ಕೇವಲ ನಾಲ್ಕು ದಿನಗಳು ಬಾಕಿ ಇವೆ... ಮದುವೆಗೆ ಎರಡು ದಿನ ಮುಂಚಿತವಾಗಿಯೇ ಬಾ ಅಂತ ಹೇಳಿದ್ದಳು. ಆದರೆ ಹೇಗೆ ಹೋಗುವುದು ? ಕಾಲೇಜಿಗೆ ರಜವಿಲ್ಲ. ಹಿಂದಿನ ದಿನ ಅವರುಗಳೆಲ್ಲ ಛತ್ರಕ್ಕೆ ಹೋಗುವ ದಿನ ಹೋದರಾಯ್ತು ಅಂತಂದುಕೊಂಡಳು. ಅವಳಿಗೇನಾದರೂ, ಇಷ್ಟವಾಗುವಂತಹ ಉಡುಗೊರೆ ತರಬೇಕು... ಆಗ ತಕ್ಷಣಕ್ಕೆ ಸಂಕೇತ ಉಡುಗೊರೆಯ ಬಗ್ಗೆ ಹೇಳಿದ್ದು ನೆನಪಾಗಿತ್ತು. ಆದರೆ ತಾನೇಕೆ ಅವನಿಗೆ ನೆನಪಿಸಬೇಕು. ಅವನ ಮೂಡ್ ಹೇಗಿದೆಯೋ ಹಾಗೇ ಮಾಡಿಕೊಳ್ಳಲಿ ಎಂದು ಸುಮ್ಮನಾದಳು. ಹಾಗೇ ಟೇಬಲ್ಲಿನ ಮುಂದೆ ಕುಳಿತವಳಿಗೆ ತೂಕಡಿಗೆ ಬಂದಿತ್ತು. ಕುರ್ಚಿಗೆ ಒರಗಿ ಕಣ್ಣು ಮುಚ್ಚಿದಳು.

ಬಿಸಿ ಕೈಯ ಸ್ಪರ್ಶದ ಅನುಭವವಾದಾಗ ಕಣ್ಣು ಬಿಟ್ಟಳು. ಅವಳಿಗೆ ಅತಿ ಸಮೀಪದಲ್ಲಿ ಸಂಕೇತ ನಿಂತು, ಅವಳ ಹಣೆಯ ಮೇಲೆ ಕೈ ಇಟ್ಟಿದಾನೆ. ಗಾಬರಿಯಿಂದ ಗಡಬಡಿಸಿ ಎದ್ದಳು...

''ನೀವಾ ? ಏನು ಬೇಕಾಗಿತ್ತು ?...'' ಖಾರವಾಗಿ ಕೇಳಿದಳು.

''ಬಾಗಿಲ ಬಳಿ ನಿಂತು ನಿಮ್ಮನ್ನು ಕರೆದೆ... ನಿಮಗೆ ಕೇಳಿಸಲಿಲ್ಲವೇನೋ ಅಂತ ಒಳಗೆ ಬಂದೆ, ಕಣ್ಣು ಮುಚ್ಚಿ ಹೀಗೆ ಕುಳಿತುದುದನ್ನು ಕಂಡು ಗಾಬರಿಯಾಯ್ತು.''

''ನಾನೂ ಎಲ್ಲಿ ಸ್ಲೀಪಿಂಗ್ ಡೋಸ್ ತಗೊಂಡು ಬಿಟ್ಟಿದೀನೋ ಅಂತ ಹೆದರಿದ್ರಾ ? ನಾನು ಆ ಅಭ್ಯಾಸ ಮಾಡಿಕೊಂಡಿಲ್ಲ.''

''ಹಾಗಲ್ಲ, ಜ್ವರ ಬಂದಿರಬಹುದೇನೋ ಅಂತ ಹಣೆ ಮುಟ್ಟಿನೋಡಿದೆ.''

''ನಿಮ್ಮ ಮಾತಿಗೆಲ್ಲ ಹೆದರಿ, ಜ್ವರ ಬರಿಸಿಕೊಳ್ಳುವಷ್ಟು ವೀಕ್ ನಾನಲ್ಲ... ಎನಿವೇ... ಏನು ಬಂದಿದ್ದು ಹೇಳಿ.''

''ಸಾರಿ. ಕೇಳೋಣ ಅಂತ ಬಂದೆ.''

''ಎಷ್ಟು ಸಾರಿ ಸಾರಿ ಕೇಳ್ತೀರಿ... ಯಾವ ಯಾವ ವಿಷಯಕ್ಕೆ ಸೇರಿ ಕೇಳ್ತೀರಿ... ಪರವಾಗಿಲ್ಲ ಹೋಗಿ...'' ಅವನನ್ನು ಕಳಿಸಲು ನೋಡಿದಳು.

''ಹಾಗಲ್ಲ ಅವನನ್ನ ನೋಡಿದ ಕೂಡಲೇ ನನಗೆ ಏನೇನೋ ಆಗಿಬಿಡುತ್ತೆ. ರೇಗಿ ಬಿಡ್ತೀನಿ.''

''ಅದು ನಿಮ್ಮ ಪ್ರಾಬ್ಲಂ. ಅದಕ್ಕೆ ನಾನೇನು ಮಾಡಲಿ ? ಹೋಗಿ ನಿಮ್ಮ ತಾಯೀನ ಸಾರಿ ಕೇಳಿಕೊಳ್ಳಿ... ನಿಮ್ಮ ತಾಯಿ ಹತ್ತಿರ ಮಾತನಾಡಿ.''

''ಅದು ಮಾತ್ರ ನನ್ನ ಕೈಲಿ ಆಗುಲ್ಲ, ಅವನು ಇರುವ ಕಡೆ ನಾನು ಇಣುಕಿ ಸಹ ನೋಡುಲ್ಲ.''

''ನೀವು ನೋಡದಿದ್ದರೆ ಬೇಡ... ಆದರೆ ಬೇರೆಯವರಿಗೆ ಯಾಕೆ ರೆಸ್ಟ್ರಿಕ್ಷನ್ ಹಾಕ್ತೀರಿ...''

''ನಂಗೊತ್ತಿಲ್ಲ ಸುಮತೀ... ನಂಗೇ ಗೊತ್ತಿಲ್ಲ, ನನಗೇನಾಗ್ತಿದೆ ಅಂತ.'' ಇದ್ದಕ್ಕಿದ್ದಂತೆ ಸುಮತಿಯನ್ನು ತಬ್ಬಿಕೊಂಡು ಅಳಲು ಪ್ರಾರಂಭಿಸಿಬಿಟ್ಟ, ಅವಳು ಭಯದಿಂದ ನಡುಗಿ ಬಿಟ್ಟಳು. ಅವನನ್ನು ತಳ್ಳಿದಳು.

''ಏನ್ಮಾಡ್ತಿದೀರಾ ನೀವು.... ಬಿಹೇವ್ ಯುವರ್ ಸೆಲ್ಫ್... ಇದು ಅಮೆರಿಕಾ ಅಲ್ಲ, ಇಂಡಿಯಾ... ನಾನು ನಿಮ್ಮ ಫ್ರೆಂಡೂ ಅಲ್ಲ.''

''ನೀವು ನನ್ನ ಫ್ರೆಂಡ್ ಅಲ್ಲ ಅಂತ ಯಾರು ಹೇಳಿದ್ರು... ನೆನ್ನೆ ರಾತ್ರಿ ನೀವು ಮಾರಲ್ ಸಪೋರ್ಟ್ ಕೊಡದೇ ಇದ್ದಿದ್ದರೆ, ಹುಚ್ಚನಾಗಿ ಬಿಡುತ್ತಿದ್ದೆ.''

''ಈಗ ನೀನು ಯಾವ ಹುಚ್ಚನಿಗಿಂತ ಕಡಿಮೆ ಇಲ್ಲ'' ಎಂದುಕೊಂಡು ತಾನೇ ರೂಮಿನಿಂದ ಹೊರಗೆ ಬಂದು ಬಾಲ್ಕನಿಯಲ್ಲಿ ನಿಂತಳು.

''ಸಾರಿ... ಸುಮತಿ... ನನ್ನಿಂದ ತೊಂದರೆಯಾಯ್ತು... ನಾನು ಹೆದರಿಸಿಬಿಟ್ಟೆ...''

''ಪರವಾಗಿಲ್ಲ ಬಿಡಿ... ಆದರೆ ಇನ್ನೆಂದೂ ಹೀಗೆ ಅನಿರೀಕ್ಷಿತವಾಗಿ ನನ್ನ ರೂಮಿಗೆ ಬರಬಾರದು. ನನ್ನ ಪ್ಪಣೆ ಇಲ್ಲದೇ ಬರಬಾರದು... ಹಾಗೇನಾದ್ರೂ ಮಾಡಿದ್ರೆ ನಾನು ಅವತ್ತೇ ಸುಚಿತ್ರಳ ಮನೆಗೆ ಹೊರಟು ಹೋಗ್ತೀನಿ. ಅವಳಿಗೆ ನೀವು ಎಂತಹವರು ಅಂತ ಹೇಳಿಬಿಡ್ತೀನಿ.''

''ನಾನು ಎಂಥೋನು ಅಂತ ಅವಳಿಗೂ ಗೊತ್ತು. ನಿಮ್ಮ ಮಾತನ್ನು ನಂಬುಲ್ಲ. ನಾನು ಅವಳ ಸ್ನೇಹಿತೆ. ಸುಳ್ಳು ಹೇಳುವವಳಲ್ಲ ಅಂತ ಅವಳಿಗೂ ಗೊತ್ತು. ಅವಳ ಮದುವೆ ವಿಷಯ ಇಲ್ಲದೇ ಇದ್ದಿದ್ರೆ, ನೀವು ಬಂದ ದಿನವೇ ನಾನು ಅಲ್ಲಿಗೆ ಹೊರಟು ಹೋಗಿರುತ್ತಿದ್ದೆ...''

''ಹ್ಲಾಂ... ಹ್ಲಾಂ... ಸುಚಿಗೆ ಮದುವೆ...! ಅವಳಿಗೆ ಉಡುಗೊರೆ ತರಲೇ ಇಲ್ಲ. ಏನೇನೋ ಆಗಿಹೋಯ್ತು. ನಾಳೆ ಷಾಪಿಂಗ್ ಹೋಗೋಣ ಬರ್ತೀರಾ ?'' ಅವನು ವಿಷಯವನ್ನು ಬದಲಾಯಿಸಿದಾಗ, ಅವಳಿಗೆ ಹಾಯೆನ್ನಿಸಿತ್ತು. ಸುಮ್ಮನಿದ್ದಳು.

''ನನಗೆ ಬರುಕ್ಕಾಗುಲ್ಲ ಕಾಲೇಜಿದೆ ಅಂತ ಸುಳ್ಳು ಬಿಡಬೇಡಿ... ಬೆಳಿಗ್ಗೆ ಬೇಡ ಸಾಯಂಕಾಲ ಹೋಗೋಣ...''

''ನನಗೆ ನಿಮ್ಮ ಜೊತೆ ಬರುಕ್ಕೆ ಇಷ್ಟವಿಲ್ಲ ಅಂತ ಹೇಳಬೇಕೆಂದು ಕೊಂಡರೂ ಹೇಳಲಾಗದೇ ಸುಮ್ಮನಾದಳು. ಆ ವಿಷಯವೇ ಬೇಡ ಎನ್ನುವಂತೆ,'' ಈಗ ನಿಮ್ಮ ಸ್ನೇಹಿತನ ತಂಗಿ ಹೇಗಿದಾಳೆ ? ವಿಚಾರಿಸಿದಳು.

''ಷೀ ಈಸ್ ಔಟ್ ಆಫ್ ಡೇಂಜರ್ ನೌ... ಆದರೂ ವೀಕ್ ಆಗಿದಾಳೆ. ಇವತ್ತು ರಾತ್ರಿ ಅಲ್ಲೇ ಇರ್ತಾಳೆ...''

''ಆಂಟಿ ಬಹಳ ಬೇಜಾರು ಮಾಡಿಕೊಂಡ್ರು... ಅವರನ್ನು ನರ್ಸಿಂಗ್ ಹೋಂಗೆ ಕರೆದುಕೊಂಡು ಹೋಗಿ ಬನ್ನಿ. ಅವಳನ್ನು ನೋಡಿ ಮಾತನಾಡಿಸಬೇಕೂಂತ ಅಂತಿದ್ರು...''

''ನೀವೂ ಬನ್ನಿ...'' ತನ್ನ ಮನದಲ್ಲಿದ್ದುದನ್ನು ಹೇಳಿದ.

''ನಾನು ಮನೇಲಿರ್ತೀನಿ... ಜಗ್ಗೂ ಒಬ್ಬನೇ ಹೇಗಿರ್ತಾನೆ...?''

''ಓಹ್ ಮತ್ತೆ ಜಗ್ಗು... ಜಗ್ಗೂ ಜಗ್ಗೂ ಇವನಿಂದ ನನಗೆ ಬಿಡುಗಡೆಯೇ ಇಲ್ಲವೆ ?'' ಕಣ್ಣುಗಳನ್ನು ಮುಚ್ಚಿ ಹಣೆ ಹಣೆ ಚಚ್ಚಿಕೊಂಡ.

''ಯಾಕೆ ಹೀಗೆ ಅಪ್ಸೆಟ್ ಆಗ್ತೀರಾ ಸಂಕೇತ್... ಇನ್ನೊಂದೆರಡು ವಾರ ಕಳೆದ ಮೇಲೆ ಹೇಗೂ ವಾಪಸ್ಸು ಹೊರಟು ಹೋಗ್ತೀರಿ...''

''ಇಲ್ಲಿಗೆ ಬಂದಾಗ ನೆಮ್ಮದಿ ಇಲ್ಲವಲ್ಲ... ಈ ಸಾರಿಯಂತೂ ಯಾಕಾದ್ರೂ ಬಂದೆನೋ ಅಂತ ಅನ್ನಿಸ್ತಿದೆ.''

''ನಿಮ್ಮ ಮನೆಯೇ ನಿಮಗೆ ಸರಿ ಹೋಗದಿರುವಾಗ, ನಿಮಗೆ ಎಲ್ಲಿಯೂ ಸರಿ ಹೋಗುವುದಿಲ್ಲ. ಅದಕ್ಕೆ ಅನೇಕ ಕಾರಣಗಳಿವೆ.''

''ನಿಮಗೆ ಹೇಗೆ ಗೊತ್ತು ?''

"ಅಲ್ಪಸ್ವಲ್ಪ ಸೈಕಾಲಜಿಯನ್ನು ನಾನೂ ಓದಿದೀನಿ..."

"ನಿಮ್ಮ ಸೈಕಾಲಜಿ, ನನ್ನ ಬಗ್ಗೆ ಏನೂ ಹೇಳುತ್ತೆ ?" ತಮಾಷೆ ಮಾಡಿದ

"ನಿಮ್ಮಲ್ಲಿ ಬಹಳ ತಪ್ಪುಗಳಿವೆ... ಆ ತಪ್ಪುಗಳು ಯಾವುವು ಅಂತ ನೀವೇ ಹುಡುಕಿಕೊಳ್ಳಿ. ಆಗ ಪರಿಹಾರ ತಾನೇ ತಾನಾಗಿ ಸಿಗುತ್ತದೆ."

"ನಾನು ಸ್ವಲ್ಪ ದಡ್ಡ... ನನ್ನ ತಪ್ಪುಗಳು ಯಾವುವು ಅಂತ ನೀವೇ ಹೇಳಿ ಬಿಡಿ ಮೇಡಂ" ತಮಾಷೆಯಾಗಿ ನಕ್ಕ.

"ಹು... ಹುಂ... ಹೇಳುವುದಿಲ್ಲ, ನಿಮಗೆ ಬಹಳ ಬೇಗ ಕೋಪ ಬರುತ್ತೆ."

"ಕೋಪ ಮಾಡ್ಕೊಳ್ಳುಲ್ಲ-ಪ್ಲೀಸ್ ಹೇಳಿ. ನಾನು ಒಬ್ಬ ಸ್ಟೂಡೆಂಟ್ ಅಂತ ತಿಳಿದುಕೊಳ್ಳಿ..."

"ನನ್ನ ಸ್ಟೂಡೆಂಟ್ಸ್ ಯಾರೂ ಹೀಗೆ ಮಿಸ್ ಬಿಹೇವ್ ಮಾಡುಲ್ಲ..."

"ನಾನೆಲ್ಲಿ ಮಿಸ್ ಬಿಹೇವ್ ಮಾಡಿದೆ ಮೇಡಂ ?"

"ನನ್ನ ಹಣೆ ಮುಟ್ಟಿ ಎಬ್ಬಿಸುವ ಧೈರ್ಯ ಯಾವ ಸ್ಟೂಡೆಂಟ್‌ಗೂ ಇಲ್ಲ, ತಿಳೀತಾ ?" ಅವನು ಪೆಚ್ಚಾದ.

"ಸಾರಿ ಮೇಡಂ, ಅಮೆರಿಕಾಕ್ಕೆ ಹೋದ ಮೇಲೆ, ಸ್ವಲ್ಪ ಅಲ್ಲಿಯವನಾಗಿ ಬಿಟ್ಟಿದೀನಿ. ಆದರೆ ನನ್ನಲ್ಲಿ ಯಾವ ಕೆಟ್ಟ ಭಾವನೆಗಳೂ ಇಲ್ಲ... ನಿಜವಾಗಿಯೂ..."

"ಸರಿ ಹಾಗಾದ್ರೆ... ಈಗ ನನಗೆ ಜಾಗ ಬಿಡಿ. ನಾನು ನೋಟ್ಸ್ ಪ್ರಿಪೇರ್ ಮಾಡಬೇಕು..."

"ಓ...ಕೇ... ಜಾಗ ಬಿಡ್ತೀನಿ. ಆದರೆ ಒಂದು ಮಾತು ಹೇಳಿ ಬಿಡ್ತೀನಿ"

"ಏನದು ?"

"ಐ ಲವ್‌ಯೂ ಸುಮತೀ... ಐ ಲವ್‌ಯೂ ವೆರಿಮಚ್..." ಸುಮತಿ ದಂಗಾದಳು. ಇವನಿಗೆಷ್ಟು ಧೈರ್ಯ...?" ಕೆನ್ನೆಗಳು ಕೆಂಪಾದವು. ಕಿವಿಗಳು ಬಿಸಿಯಾದವು.

"ಲವ್ ಅಟ್ ಫರ್ಸ್ಟ್ ಸೈಟ್ ಅಂತ್ಲಾದ್ರೂ ತಿಳಕೊಳ್ಳಿ.... ಸೆಕೆಂಡ್ ಸೈಟ್ ಅಂತ್ಲಾದ್ರೂ ತಿಳಕೊಳ್ಳಿ... ಆದರೆ ನಾನು ಲವ್ ಮಾಡ್ತಾ ಇರೋದು ಮಾತ್ರ ನಿಜ."

ಸುಮತಿಯ ಶರೀರದಲ್ಲಿ ಏನೋ ಹೊಸ ಅನುಭವ ಸಂಚಾರವಾದಂತಾಯಿತು. ಇದುವರೆಗೂ ಯಾರೂ ಅವಳನ್ನು ಪ್ರೀತಿಸ್ತೀನಿ ಅಂತ ಹೇಳಿರಲಿಲ್ಲ, ಆದರೂ ಅವನ ಮಾತನ್ನು

ಗಣನೆಗೆ ತೆಗೆದುಕೊಳ್ಳಲಿಲ್ಲ. ಏನೋ ಮನಸ್ಸಿಗೆ ಅನ್ನಿಸಿದನ್ನು ಆಡಿದ್ದಾನೆ ಅಂತ ಹಗುರವಾಗಿ ತೆಗೆದುಕೊಂಡಳು.

''ನಿಮಗೆ ನನ್ನ ಮಾತಿನ ಮೇಲೆ ನಂಬಿಕೆ ಇಲ್ಲ ಅಲ್ವಾ ? ರಿಯಲಿ ಐ ಮೀನ್ ಇಟ್... ನಾನು ಇದುವರೆಗೂ ಯಾರಿಗೂ ಐ ಲವ್‌ಯೂ ಅಂತ ಹೇಳಿಲ್ಲ... ನಿಮಗೇ ಮೊದಲು ಹೇಳ್ತಾ ಇರೋದು... ಗಾಡ್ ಪ್ರಾಮಿಸ್...'' ಕತ್ತಿಗೆ ಕೈಯನ್ನು ತಗುಲಿಸಿದ.

''ನೀವು ನನ್ನನ್ನು ಲವ್ ಮಾಡ್ತಿರಬಹುದು. ಆದರೆ ನಾನು ನಿಮ್ಮನ್ನೇನೂ ಪ್ರೀತಿಸ್ತಿಲ್ಲವಲ್ಲ...'' ಅವಳು ನೇರವಾಗಿ ಹೇಳಿದಳು.

''ನಾನೇನೂ ನಿಮಗೆ ಹೇಳಲೇ ಇಲ್ಲ ನೀವೂ ಪ್ರೀತಿಸಿ ಅಂತ. ನನ್ನ ವಿಷಯ ಹೇಳಿದೆ. ಈ ಹುಚ್ಚನ್ನ ಯಾರಾದ್ರೂ ಪ್ರೀತಿಸ್ತಾರಾ ?'' ಸುಮತಿ ಅವನನ್ನೇ ವಿಚಿತ್ರವಾಗಿ ನೋಡಿದಳು.

''ದಿಸ್ ಫೂಲ್ ಡೋಂಟ್ ಡಿಸರ್ವ್ ಎನಿಬಡೀಸ್ ಲವ್... ಐ ನೋ ದಟ್...'' ತನಗೆ ತಾನೇ ಹೇಳಿಕೊಂಡು ತನ್ನ ರೂಮಿಗೆ ಹೊರಟು ಹೋದ. ಸುಮತಿ ಪೆಚ್ಚಾದಳು. ಆಮೇಲಂತೂ ಅವಳ ತಲೆಯೇ ಕೆಟ್ಟು ಹೋದಂತಾಗಿತ್ತು. ಪದೇ ಪದೇ ಅವನಾಡಿದ ನುಡಿಗಳೇ ಕಿವಿಯಲ್ಲಿ ಗುಂಯ್ ಗುಟ್ಟುತ್ತಿದ್ದವು. ಒಮ್ಮೆ ಅವನು ತಮಾಷೆಗೆ ಹಾಗೆ ಹೇಳಿರಬಹುದು ಅಂತೆನಿಸಿದರೆ, ಮತ್ತೊಮ್ಮೆ ತನ್ನನ್ನು ಪರೀಕ್ಷಿಸಲು ಹಾಗೆ ಹೇಳಿರಬಹುದೇ ಅಂತೆನ್ನಿಸುತ್ತಿತ್ತು. ನಿಜವಾಗಿಯೂ ಅವನು ತನ್ನನ್ನು ಪ್ರೀತಿಸುತ್ತಿರಬಹುದೇ ಅಂತೆನ್ನಿಸಿದಾಗ ದೇಹದ ಶಾಖ ಹೆಚ್ಚುತ್ತಿದೆಯೆಂದೆನಿಸುತ್ತಿತ್ತು. ಅವನ ಕೈಯ ಬಿಸಿ, ತನ್ನ ಹಣೆಯನ್ನು ಬೆಚ್ಚಗೆ ಮಾಡುತ್ತಿದೆಯೇನೋ ಅಂತೆನ್ನಿಸುತ್ತಿತ್ತು. ಅವನು ಏಕಾಂಗಿ, ಅವನಿಗೆ ಸಂಗಾತಿಯ ಅಗತ್ಯವಿದೆ ಅಂತೆನ್ನಿಸಿದಾಗ, ತಾನೇ ಯಾಕೆ ಅವನ ಸಂಗಾತಿಯಾಗಬರದು ಅಂತೆನ್ನಿಸಿದಾಗ ಬೆಚ್ಚಿಬಿದ್ದಳು. ತನ್ನ ಆಲೋಚನಾ ಲಹರಿ ಎಲ್ಲಿಂದ ಎಲ್ಲಿಗೋ ಹರಿಯುತ್ತಿದೆ... ತಾನೆಲ್ಲಿ ಇವನೆಲ್ಲಿ? ನಮ್ಮಿಬ್ಬರಲ್ಲಿ ಎಲ್ಲಾ ವಿಷಯಗಳಲ್ಲೂ ಸಾಕಷ್ಟು ಅಂತರವಿದೆ. ನನ್ನ ಅವನ ಸ್ವಭಾವವಂತೂ ಖಂಡಿತಾ ಹೊಂದುವುದಿಲ್ಲ... ಆ ವಿಷಯ ಅವನಿಗೂ ಗೊತ್ತಿದೆ... ಆದರೂ ಲವ್ ಮಾಡುತ್ತೀನಿ ಅಂತ ಹೇಗೆ ಹೇಳಿದ ?... ನನ್ನಲ್ಲಿ ಯಾವ ವಿಶೇಷತೆಯನ್ನು ಕಂಡಿದಾನೆ ? ಅಥವಾ ಬರೀ ಬಾಯಿ ಮಾತೋ ? ಅವನ ವರ್ತನೆಯಂತೂ ಕ್ಷಣ ಕ್ಷಣಕ್ಕೂ ಬದಲಾಗುತ್ತಿರುತ್ತದೆ... ಹಾಗೇ ಈ ಅನಿಸಿಕೆಯೂ ಬದಲಾಗುತ್ತದೆ. ಹಾಗೆ ಹೇಳಿಕೊಂಡು ತನ್ನ ಪಾಡಿಗೆ ತಾನು ಏನೂ ಅರಿಯದವಳಂತೆ ಇರಬೇಕೆಂದುಕೊಂಡಳು. ಆದರೆ ಹಾಗೆ ಇರಲಾಗಿರಲಿಲ್ಲ. ಆ ಗಳಿಗೆಯಿಂದ ಅವಳೂ ಅವನ ಬಗ್ಗೆಯೇ ಆಗಾಗ್ಗೆ ಯೋಚಿಸುತ್ತಿದಳು. ಅವಳಿಗೇ ಅರಿವಿಲ್ಲದಂತೆ ಅವಳೂ ಅವನನ್ನು ಪ್ರೀತಿಸತೊಡಗಿದ್ದಳು.

ಸಾಯಂಕಾಲ, ಸುಮತಿ ಬರುವುದನ್ನೇ ಕಾಯುತ್ತಾ ಇದ್ದ ಸಂಕೇತ. ತಾನೇ ಅವಳಿಗೆ ಬಿಸಿ ಬಿಸಿ ಕಾಫಿಯನ್ನು ತಂದುಕೊಟ್ಟ ''ರಿಫ್ರೆಷ್ ಆಗಿ ಬನ್ನಿ ಷಾಪಿಂಗ್ ಹೋಗೋಣ'' ಎಂದ ಅವಳು ಷಾಪಿಂಗ್ ವಿಷಯವನ್ನೇ ಮರೆತುಬಿಟ್ಟಿದ್ದಳು. ವಿಧಿ ಇಲ್ಲದೇ ಹೊರಟಳು. ಆಂಟಿ ಏನಂದುಕೊಳ್ಳುವಳೋ ಎಂಬ ಅನುಮಾನವಿದ್ದೇ ಇತ್ತು.

"ನೀವೇ ನಿಮ್ಮ ಮಮ್ಮಿಗೆ ಹೇಳಬೇಕು. ಇಲ್ಲದಿದ್ದರೆ ಏನಂದುಕೊಳ್ತಾರೋ"

"ಇಬ್ಬರೂ ಒಟ್ಟಿಗೇ ಹೋಗುವುದೇ ಬೇಡ. ನಿಮ್ಮ ಪಾಡಿಗೆ ನೀವು ಹೊರಡಿ. ನಾನು ಆಮೇಲೆ ಬಂದು ಜಾಯಿನ್ ಆಗ್ತೀನಿ."

"ಏನೂ ಬೇಡ... ಆಮೇಲೆ ಆಂಟಿಗೆ ಗೊತ್ತಾದ್ರೆ...?"

"ಹೇಗೆ ಗೊತ್ತಾಗುತ್ತೆ. ಹಾಗಾದ್ರೆ ನಾನೇ ಮೊದಲು ಹೊರಡ್ತೀನಿ. ನಾನು ಅಲ್ಲಿ ಬಸ್‌ಸ್ಟಾಪ್ ಹತ್ತಿರ ಕಾಯ್ತಾ ಇರ್ತೀನಿ. ಆಮೇಲೆ ನೀವೇ ಬನ್ನಿ..."

"ಬೇಡ ಬೇಡ..."

"ಏನು ಎಲ್ಲಾದಕ್ಕೂ ಬೇಡ ಬೇಡ ಅಂತೀರಲ್ಲ, ನಿಮಗೆ ಹೇಗೆ ಬೇಕೋ ಹಾಗೆ ಮಾಡ್ಕೊಳ್ಳಿ... ನಾನು ದಿನೇಶನ ಮನೆಗೆ ಹೋಗ್ತೀನಿ."

"ಅಂದ್ಹಾಗೇ ಅವರ ತಂಗಿ ಈಗ ಹೇಗಿದಾರೆ ? ನಿಮ್ಮ ತಾಯೀನ ಕರೆದುಕೊಂಡು ಹೋಗಿದ್ರಾ ?"

"ಇಲ್ಲ, ಈಗ ನೀವು ಬರೋದಾದ್ರೆ ಬನ್ನಿ ಕರೆದುಕೊಂಡು ಹೋಗ್ತೀನಿ."

"ಸರಿ. ನೀವು ಹೊರಡಿ. ನಾನು ಆಂಟಿಗೆ ಹೇಳಿ ಬರ್ತೀನಿ" ಅವಳು ಆಂಟಿಗೆ ಏನು ಹೇಳಿದಳೆಂದು ಕೇಳಲಿಲ್ಲ, ಅವಳೂ ಹೇಳಲಿಲ್ಲ. ಬಸ್ ಸ್ಟಾಪ್‌ನಲ್ಲಿ ನಿಂತಿದ್ದ ಸಂಕೇತ. ಒಂದು ರಿಕ್ಷಾ ನಿಲ್ಲಿಸಿದ. ಇಬ್ಬರೂ ಮೊದಲಿಗೆ ನರ್ಸಿಂಗ್ ಹೋಂಗೆ ಬಂದಿದ್ದರು. ಅಲ್ಲಿ ದಿನೇಶನೂ ಇದ್ದ. ಅವನು ಈ ಮೊದಲೇ ಸುಮತಿಯನ್ನು ನೋಡಿದ್ದನಾದ್ದರಿಂದ ಪರಿಚಯದ ಅವಶ್ಯಕತೆ ಇರಲಿಲ್ಲ.

"ಈಗ ನಿಮ್ಮ ತಂಗಿ ಹೇಗಿದಾರೆ ?"

"ಹುಶಾರಾಗಿದಾಳೆ. ನಾಳೆ ಡಿಸ್ಚಾರ್ಜ್ ಮಾಡ್ತಾರಂತೆ."

"ವೆರಿ ಸಾರಿ. ದಿನೇಶ್... ನಿಮ್ಮ ತಾಯಿ ವಿಷಯ ಕೇಳಿ ತುಂಬಾ ದುಃಖವಾಯ್ತು..." ಸುಮತಿ ಸಂತಾಪ ವ್ಯಕ್ತಪಡಿಸಿದಳು. ದಿನೇಶ ಹೆಚ್ಚು ಮಾತಾಡಲಿಲ್ಲ. ಸುಮತಿ, ದಿನೇಶಳ ತಂಗಿ ದೀಪಾಳಿಗೆ ಧೈರ್ಯ ಹೇಳಿದಳು. ಸಂಕೇತ ಸುಮತಿಯನ್ನೇ ಗಮನಿಸುತ್ತಿದ್ದ. ಅಲ್ಲಿಂದ ಹೊರಟು, ಮತ್ತೆ ರಿಕ್ಷಾದಲ್ಲಿ ಕುಳಿತಾಗ, ಅವನು ಸುಮತಿಯ ಕೈ ಹಿಡಿದು 'ಥ್ಯಾಂಕ್ಸ್' ಎಂದ.

"ಈಗ್ಯಾಕೆ ಥ್ಯಾಂಕ್ಸ್...?"

"ದಿನೇಶನ ತಂಗಿಗೆ ನೀವು ಧೈರ್ಯ ಹೇಳಿದಿರಿ..."

"ಅದಕ್ಕೆ ಥ್ಯಾಂಕ್ಸ್ ಯಾಕೆ ? ಅದು ನನ್ನ ಧರ್ಮ."

''ಆದರೂ...''

''ಆದರೂ ಗೀದರೂ ಏನಿಲ್ಲ. ದಿನೇಶ, ಅವನ ತಂಗಿ, ನಿಮಗೆ ಹೇಗೆ ಸ್ನೇಹಿತರೋ ನನಗೂ ಹಾಗೇ ಸ್ನೇಹಿತರೇ...''

''ಮಮ್ಮೀ ಒಂದು ಮಾತು ಕೇಳಲಿಲ್ಲ. ನನಗೆಷ್ಟು ವ್ಯಥೆಯಾಯ್ತು ಗೊತ್ತಾ ?''

''ನೀವೇ ಹೇಳಬಹುದಾಗಿತ್ತಲ್ಲ...''

''ನೀವು ಹೇಳಲಿಲ್ವಾ ?''

''ನಾನು ಹೇಳುವುದಕ್ಕೂ, ನೀವು ಹೇಳುವುದಕ್ಕೂ ವ್ಯತ್ಯಾಸವಿರುತ್ತದೆ. ಎಷ್ಟಾಗಲೀ ನೀವು ಮಗ... ನೀವೇ ಹೇಳಲಿ ಅಂತ ಅಪೇಕ್ಷೆ ಪಡುತ್ತಾರೆ.''

''ಮಮ್ಮಿಗೆ, ದಿನೇಶನ ತಾಯಿಯನ್ನು ಕಂಡರೆ ಆಗುತ್ತಿರಲಿಲ್ಲ.''

''ಹಾಗಂತ ನೀವು ತಪ್ಪು ತಿಳಿದುಕೊಂಡಿದ್ದೀರಿ... ಎಷ್ಟೇ ಮನಸ್ತಾಪವಿರಲಿ, ಇಂತಹ ಸಮಯದಲ್ಲಿ ಯಾರೂ ದ್ವೇಷ ಸಾಧಿಸುವುದಿಲ್ಲ...''

''ಇಲ್ಲ ಸುಮತಿ, ನಿಮಗೆ ನಮ್ಮ ಮನೆಯ ಮೈನ್ ಪ್ರಾಬ್ಲಂ ಏನೂಂತ ಗೊತ್ತಿಲ್ಲ.''

''ಗೊತ್ತು. ನನಗೆ ಎಲ್ಲಾ ಗೊತ್ತು. ನಿಮ್ಮ ನಿಮ್ಮಲ್ಲಿ ತಪ್ಪು ಕಲ್ಪನೆಗಳಿವೆ. ಮೊದಲು ಅದು ಕಡಿಮೆಯಾಗಬೇಕು. ಆಮೇಲೆ ಎಲ್ಲಾ ಸರಿ ಹೋಗುತ್ತೋ ಏನೋ ?''

''ಸರಿ ಹೋಗಲಿ ಬಿಡಲಿ, ನನಗೇನು ? ನಾನೇನು ಸದಾ ಕಾಲಕ್ಕೂ ಇಲ್ಲಿರುವವನಲ್ಲ. ಬಂದಾಗಲಾದರೂ, ಮಮ್ಮಿ ನನ್ನ ಜೊತೆ ಆದಷ್ಟು ಟೈಂ ಇರಲಿ ಅನ್ನೋ ಆಸೆ, ಆಸೆಯಾಗಿಯೇ ಉಳಿದಿದೆ. ಜಗ್ಗೂ ಇರೋವರೆಗೂ, ಮಮ್ಮಿ ನನ್ನಿಂದ ದೂರ ದೂರವೇ ಇರ್ತಾಳೆ... ನನಗೆ ಗೊತ್ತು. ನನಗೂ ಈ ಒಂಟಿ ಜೀವನ ಬೇಸರ ತಂದಿದೆ. ನನಗೂ ಸಂಗಾತಿ ಬೇಕು ಸುಮತಿ... ನಾನೀಗ ನನ್ನ ಸಂಗಾತಿಯನ್ನು ಆರಿಸಿಕೊಂಡಿದ್ದೇನೆ. ಆದರೆ ಅನ್‌ಫಾರ್ಚ್ಯುನೇಟ್ಲೀ. ಅವರು ತಮ್ಮ ಮನಸ್ಸಿನಲ್ಲಿ ಏನಿದೆ ಅಂತ ನನಗೆ ಇದುವರೆಗೂ ಹೇಳಿಲ್ಲ.'' ಸಂಕೇತ ಅವಳನ್ನು ಓರೆಗಣ್ಣಿನಿಂದ ನೋಡಿದ. ಅವಳು ಮನದಲ್ಲೇ ನಕ್ಕಳು.

ಅಲ್ಲಿಂದ ಇಬ್ಬರೂ, ಒಂದು ಜ್ಯುವೆಲರಿ ಷಾಪಿಗೆ ಬಂದರು. ''ನೀವು ಯಾವುದೇ ಸೆಟ್‌ನ ಸೆಲೆಕ್ಟ್ ಮಾಡಿದರೂ, ಅದೇ ನನಗೂ ಇಷ್ಟ' ಎಂದು ಹೇಳಿಬಿಟ್ಟಿದ್ದನಾದುದರಿಂದ, ಸುಮತಿ ತಾನೇ ಒಂದು ಮುತ್ತಿನ ಸೆಟ್ ಒಡವೆಯನ್ನು ಆಯ್ಕೆ ಮಾಡಿದಳು. ಆ ಸೆಟ್ ಸಂಕೇತನಿಗೂ ಇಷ್ಟವಾಗಿತ್ತು. ಸುಮತಿ, ಸುಚಿತ್ರಳಿಗೆಂದು ಬೆಳ್ಳಿಯ ಅರಿಶಿನ ಕುಂಕುಮದ ಬಟ್ಟಲುಗಳನ್ನು ಖರೀದಿಸಿದಳು. ಅವಳು ಬೇಡ ಬೇಡವೆಂದರೂ, ಸಂಕೇತನೇ ಬಿಲ್ ಪೇ ಮಾಡಿದ. ಅಲ್ಲಿಂದ ಹಿಂದಿರುಗುವಾಗ ಸಂಕೇತ ರಿಕ್ವೆಸ್ಟ್ ಮಾಡಿಕೊಂಡ ಈಗಲೇ ಮಮ್ಮಿಗೆ ಯಾವುದನ್ನು ಹೇಳಬೇಡಿ.

ಅವಳ ಮನಸ್ಸಿಗೆ ಬೇಜಾರು ಮಾಡಬೇಕೆಂಬ ಆಸೆ ನನಗೂ ಇಲ್ಲ’’ ಎಂದ.

‘‘ಇದರ ಬದಲು, ಎದುರು ಬದುರು ಕೂತು ಮಾತನಾಡಿದರೆ, ಏನೇ ಬೇಸರವಿದ್ದರೂ ಎಲ್ಲಾ ಕ್ಲಿಯರ್ ಆಗುತ್ತೆ ಅಲ್ವಾ ಸಂಕೇತ್.’’

‘‘ಆಗಲಿ ಪ್ರಯತ್ನ ಪಡ್ತೀನಿ. ಪ್ರಾಮಿಸ್ ಮಾಡುಲ್ಲ’’

‘‘ಆಲ್ ದಿ ಬೆಸ್ಟ್ ಸಂಕೇತ್...’’

‘‘ನಾನು ನಿಮಗೋಸ್ಕರ ಈ ಪ್ರಯತ್ನಕ್ಕೆ ಒಪ್ಪಿಕೊಂಡಿದೀನಿ ಮೇಡಂ, ಬಿಕಾಸ್ ಐ ಲವ್‌ಯೂ ವೆರಿಮಚ್’’ ಎಂದು ಹೇಳಿ ಅವಳ ಭುಜವನ್ನು ಬಳಸಿದ. ಅವಳು ಸಂಕೋಚಗೊಂಡಳು.

‘‘ಇದು ಪಬ್ಲಿಕ್... ನೆನಪಿರಲಿ’’ ಎಂದು ನಕ್ಕಳು.

‘‘ನೀವು ಇನ್ನು ನನ್ನ ಪ್ರಶ್ನೆಗೆ ಉತ್ತರವನ್ನು ಕೊಟ್ಟಿಲ್ಲ, ನೆನಪಿರಲಿ’ ಅವನೂ ನಕ್ಕ. ಬಸ್‌ಸ್ಟಾಪ್ ಬಳಿ, ಇಳಿದು ಇಬ್ಬರೂ ಬೇರೆ ಬೇರೆಯಾಗಿ ಮನೆಗೆ ಹಿಂತಿರುಗಿದರು ಸುಮತಿಯನ್ನು ಅಳುಕು ಕಾಡಿತ್ತು. ಆದರೂ ಎದೆಯೊಳಗೆ ಏನೋ ಹರ್ಷ ಹರಿದಾಡಿತ್ತು.



ಸುಚಿತ್ರಳ ಮದುವೆಗೆ ಹೊರಡಲೆಂದು ಸುಮತಿ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದಳು ಸಂಕೇತ ಅವಳನ್ನೇ ಗಮನಿಸುತ್ತಿದ್ದ. ಜಾನಕಿ ಬಲವಂತದಿಂದ ತನ್ನ ಬಳಿ ಇದ್ದ ಒಡವೆಯ ಸೆಟ್‌ಗಳನ್ನು ಸುಮತಿಗೆ ಕೊಟ್ಟಿದ್ದಳು. ಸುಮತಿ ನಿರಾಕರಿಸಿದಳು.

‘‘ಹಾಗೆನ್ನ ಬೇಡ ಸುಮತಿ... ಎಷ್ಟೋ ವರ್ಷಗಳಾದವು, ಇವುಗಳನ್ನು ಹೊರ ತೆಗೆದು, ಈಗ ಇವುಗಳಿಗೆ ಅವಕಾಶ ಸಿಕ್ಕಿದೆ. ಈ ಮುತ್ತಿನ ಸೆಟ್ ನಿನಗೆ ಚೆನ್ನಾಗಿ ಒಪ್ಪುತ್ತೆ... ನಮ್ಮ ಸಂಕೇತ ಹುಟ್ಟುವ ಮೊದಲು, ನಮ್ಮ ಯಜಮಾನರು ಮಾಡಿಸಿ ಕೊಟ್ಟಿದ್ದು’’ ಸುಮತಿಗೆ ಒಡವೆಗಳು ಭಾರಿ ಎನಿಸಿದ್ದವು.

‘‘ಇದು ಬೇಡದಿದ್ದರೆ, ಇದನ್ನು ಹಾಕ್ಕೋ... ಎನ್ನುತ್ತಾ ಚಿನ್ನದ ನೆಕ್ಲೆಸ್ ಹಾಗೂ ಬಳೆಗಳನ್ನು ಕೊಟ್ಟಳು. ಅದನ್ನೂ ಬೇಡ ಎಂದರೆ, ಇನ್ನೇನು ತೆಗೆದುಕೊಡುವಳೋ ಅಂತಂದುಕೊಟ್ಟು ‘ಇದೇ ಇರಲಿ ಸಾಕು’ ಎಂದಳು.

‘‘ಸುಚಿತ್ರಳ ತಾಯಿ ಮನೆಯವರು, ಬೇಕಾದಷ್ಟು ಒಡವೆ ಮಾಡಿಸಿರುತ್ತಾರೆ. ನೀನು ಹೀಗೆ ಮಾತ್ರ ಹೋಗಕೂಡದು. ಹತ್ತಾರು ಕಣ್ಣುಗಳು ನಿನ್ನ ಮೇಲಿರುತ್ತದೆ.’’

ಸುಮತಿಗೆ ನಗು ಬಂತು. ನೋಡುವವರ ಕಣ್ಣುಗಳು, ನನ್ನ ಮೇಲಿರುತ್ತದೋ ನನ್ನ

ಮೈಮೇಲಿನ ಒಡವೆಯ ಮೇಲಿರುತ್ತದೋ ಎಂದು ಕೊಂಡಳು.

''ಯಾಕೆ ನಗ್ತಿದೀಯ ...? ನಾನು ಹೇಳೋ ಮಾತು ನಿಜ. ನಿಮ್ಮ ತಾಯಿಯೇ ಆಗಿದ್ದರೂ, ನಿನಗೆ ಒಡವೆಗಳನ್ನು ಕೊಡುತ್ತಿರಲಿಲ್ಲವೆ ? ಹಾಗೇ ಅಂತ ತಿಳಕೋ.''

''ಅದಕ್ಕಲ್ಲ. ಇನ್ನೇನೋ ನೆನಪಿಗೆ ಬಂತು. ಅಷ್ಟೇ...''

''ಬೀರುವಿನಲ್ಲಿ ಹತ್ತಾರು ರೇಶಿಮೆ ಸೀರೆಗಳಿವೆ. ನಿನಗೆ ಯಾವುದೋ ಬೇಕೋ ಅದನ್ನು ಉಟ್ಟುಕೋ. ಯಾವುದಾದರೂ ಒಂದೆರಡಕ್ಕಾದ್ರೂ ಮ್ಯಾಚಿಂಗ್ ಬ್ಲೌಸ್ ಇರಬಹುದು ನಿನ್ನ ಹತ್ತಿರ.'' ಜಾನಕಿಯ ಬಲವಂತಕ್ಕೆ ಸುಮತಿ ಎರಡು ಸೀರೆಗಳನ್ನು ಆರಿಸಿದಳು.

''ಈ ಕಲರ್ ನಿನ್ನ ಮೈ ಬಣ್ಣಕ್ಕೆ ಚೆನ್ನಾಗಿ ಒಪ್ಪುತ್ತೆ ಸುಮತಿ.'' ಜಾನಕಿ ಪ್ರೀತಿಯಿಂದ ಸೀರೆಯನ್ನು ಬಿಡಿಸಿ. ಹೆಗಲ ಮೇಲೆ ಹಾಕಿ ನುಡಿದಳು. ಸುಮತಿ ಮಂದಹಾಸ ಬೀರಿದಳು.

ಈ ಆಂಟಿಗೆ ಇರುವಷ್ಟು ಆಸಕ್ತಿ, ಸೀರೆ, ಒಡವೆ, ಅಲಂಕಾರಗಳಲ್ಲಿ ತನಗೆ ಇಲ್ಲವೇ ಇಲ್ಲ ಎಂದುಕೊಂಡಳು. ಜಾನಕಿ ತನ್ನ ಮದುವೆಯ ಹಾಗೂ ಆಗ ಈಗ ಬೇರೆ ಬೇರೆ ಸಮಾರಂಭಗಳಲ್ಲಿ ತೆಗೆಸಿದ್ದ ಫೋಟೋಗಳನ್ನು ತೋರಿಸಿದಳು. ಸಿನಿಮಾ ತಾರೆಯರಂತೆ ಮೇಕಪ್ ಮಾಡಿಸಿಕೊಂಡು, ವಿವಿಧ ವೇಷಭೂಷಣಗಳಲ್ಲಿ, ಅನೇಕ ಭಂಗಿಗಳಲ್ಲಿ ತೆಗೆಸಿಕೊಂಡಿದ್ದ ಫೋಟೋಗಳ ಬಗ್ಗೆ ವಿವರಣೆಯನ್ನು ನೀಡಿದಳು.

''ಈಗ ನೋಡು, ತುಕ್ಕು ಹಿಡಿದ ತಂತಿಯಂತೆ, ಈ ಗೋಜಲಿನಲ್ಲಿ ಸುತ್ತಿಕೊಂಡು ಬಿದ್ದಿದೀನಿ. ತೊಳೆದುಕೊಂಡ ಮುಖವನ್ನು ಕನ್ನಡಿಯಲ್ಲಿ ನೋಡಿಕೊಳ್ಳುವಷ್ಟೂ ಆಸಕ್ತಿ ಇಲ್ಲ ನನಗೆ.'' ಸುಮತಿ ಸುಮ್ಮನೇ ಆಂಟಿಯನ್ನೇ ನೋಡಿದಳು.

ಹರೀಶ, ವಿಠ್ಠಲ ಇಬ್ಬರೂ ಸಂಕೇತನನ್ನು ಹೊರಕ್ಕೆ ಕರೆದುಕೊಂಡು ಹೋಗಲೆಂದು ಬಂದಿದ್ದರು. ಸರಭರ ಉತ್ಸಾಹದಿಂದ ಓಡಾಡುತ್ತಿದ್ದ ಸುಮತಿಯ ಮೇಲೇ ಹರೀಶನ ಕಣ್ಣುಗಳು ಹರಿದಾಡುತ್ತಿದ್ದುದನ್ನು ಸಂಕೇತ ಗಮನಿಸಿದ. ಅವನ ಮೈಮೇಲೆ ಮುಳ್ಳು ಹರಿದಂತಾಗಿತ್ತು. ಈ ಸುಮತಿ ಯಾಕೆ ಇಲ್ಲೇ ತಿರುಗಾಡ್ತಾ ಇದಾಳೆ. ಕಾಲೇಜಿಗೆ ಯಾಕೆ ಹೋಗಿಲ್ಲ ? ಎಂದು . ಚಡಪಡಿಸುತ್ತಿದ್ದ.

''ಇದೇನೋ, ಚಿತ್ರಾಂಗದೆ ಇನ್ನು ಕಾಲೇಜಿಗೆ ಹೋಗಿಲ್ಲ, ಏನು ಸ್ಪೆಶಲ್ ?''

''ನಂಗೊತ್ತಿಲ್ಲ, ಕೇಳಿಕೊಂಡು ಬಂದು ಹೇಳ್ಲಾ ?'' ಸಿಡುಕಿದ.

''ಅಯ್ಯೋ ಯಾಕೋ ಸಿಡುಕ್ತೀಯಾ ! ನಾನೇನು ಕೇಳಬಾರದ್ದನ್ನು ಕೇಳಿದೆ. ಕಾಲೇಜಿಗೆ ಒಂದು ದಿನವೂ ರಜ ಹಾಕುಲ್ಲವಂತೆ, ಅಂತ ನೀನೇ ಹೇಳ್ತಿದ್ದೆ.''

''ಸುಮ್ಮನೇ ನೀನು ಕೇಳಿದ್ದಕ್ಕೆ ಹಾಗೆ ಹೇಳಿದ್ದೆ. ನನಗೇನು ಗೊತ್ತು ಅವರ ಟೈಂ

ಟೇಬಲ್?"

"ಕೇಳಿ ತಿಳಕೋ ಬೇಕಪ್ಪ. ನನಗೆ ಇಂತಹ ಛಾನ್ಸ್ ಸಿಕ್ಕಿದ್ದರೆ, ನಾನು ಖಂಡಿತಾ ಬಿಡುತ್ತಿರಲಿಲ್ಲ.

"ಅದಕ್ಕೇ ನಿಮ್ಮ ತಾಯಿ ಯಾವ ಪೇಯಿಂಗ್ ಗೆಸ್ಟ್‌ನೂ ಇಟ್ಟುಕೊಂಡಿಲ್ಲ." ವಿಠ್ಠಲ ನುಡಿದಾಗ, ಸಂಕೇತ ನಕ್ಕ ಹರೀಶ ಅವನ ಬೆನ್ನ ಮೇಲೆ ಗುದ್ದಿದ.

"ನನ್ನನ್ನ ಚುಡಾಯಿಸ್ತೀಯ... ಸಮಯ ಸಿಕ್ಕಾಗ ನಾನೂ ನೋಡ್ಕೋತೀನಿ"

"ಸರಿ ನಡೀರಿ... ಇವತ್ತು ಏನು ಪ್ರೋಗ್ರಾಂ ?"

"ದಿನೇಶನ ಮನೆಯವರೆಲ್ಲ, ಗೋಕರ್ಣಕ್ಕೆ ಹೋಗಬೇಕೂಂತ ಇದಾರಂತೆ."

"ದೀಪನ್ನು ಕರೆದುಕೊಂಡು ಹೋಗ್ತಾರಂತಾ ?"

"ಏನೋ ಗೊತ್ತಿಲ್ಲ. ಸಂಕೇತ ಬರ್ತಾನಾ ಅಂತ ಕೇಳಿದ್ರು..."

"ನಾನಾ ? ತುಂಬಾ ದೂರ ಅಲ್ವೇನೋ ?"

"ದೂರ ಆದ್ರೇನಂತೆ ? ನೀನೇನು ನಡೆದುಕೊಂಡು ಹೋಗಬೇಕಾ ? ಬಾಡಿಗೆಗೆ ಕಾರುಗಳನ್ನು ಗೊತ್ತು ಮಾಡ್ತಾರಂತೆ."

"ಆದರೂ..."

"ಬರುಕ್ಕೆ ಇಷ್ಟವಿಲ್ಲದಿದ್ದರೆ ಹೇಳಿ ಬಿಡು... ಕೊಂಯ ಕೊಂಯ ಅನ್ನಬೇಡ."

"ಮಮ್ಮೀನ ಕೇಳಿ ಹೇಳ್ತೀನಿ."

"ನೀನ್ಯಾವಾಗ ಮಮ್ಮಿಯ ಮಗನಾದೆಯೋ ? ಮಮ್ಮಿಯ ಪರ್ಮಿಷನ್ ಕೇಳೂವಷ್ಟು ಒಳ್ಳೆಯ ಮಗನಾಗಿ ಬಿಟ್ಟೆಯಾ ?" ಹ್ಣ... ಹ್ಣ... ಅಂತ ನಕ್ಕ.

"ಓ... ಷಟಪ್ ಹರೀ... ಎಲ್ಲಾದಕ್ಕೂ ಏನಾದ್ರೂ ಆಡ್ತೀಯಲ್ಲ, ನೀವೆಲ್ಲಾ ನಿಮ್ಮ ತಾಯಿ ತಂದೆಯರನ್ನು ಕೇಳೋದೇ ಇಲ್ಲವಾ ?"

"ಓ.ಕೆ. ಫ್ರೆಂಡ್ ಕೇಳು. ಅದಕ್ಕೇನಂತೆ.... ಸುಮ್ಮನೇ ತಮಾಷೆ ಮಾಡಿದೆ ಅಷ್ಟೇ"

"ಸಮಯ ಸಂದರ್ಭ ಒಂದನ್ನು ನೋಡದೇ ತಮಾಷೆ ಮಾಡ್ತೀಯಲ್ಲ, ಅದಕ್ಕೇ ಹೇಳಿದೆ." ಹರೀಶ ಪೆಚ್ಚಾದ. ಸಂಕೇತ ಎಂದೂ ಹೀಗೆಲ್ಲಾ ಮಾತಾಡಿದವನಲ್ಲ, ಸಂಕೇತ ಖಂಡಿತಾ ಬದಲಾಗಿದ್ದಾನೆ. ಇದಕ್ಕೆ ಸುಮತಿ ಕಾರಣವಿರಬಹುದೇ ಅಂತಂದುಕೊಂಡಾಗ, ಅಸೂಯೆಯ ಮುಳ್ಳು ಚುಚ್ಚಿತ್ತು. ಅಷ್ಟರಲ್ಲಿ ಸುಮತಿ ಎಲ್ಲರಿಗೂ ಕಾಫಿ-ತಿಂಡಿಯನ್ನು ತಂದಿತ್ತಳು. ಹರೀಶ

ಗೆಲುವಾದ.

''ಏನು ಮೇಡಂ ಹೇಗಿದೀರಿ ? ಕಾಲೇಜಿಗೆ ಹೋಗಲಿಲ್ಲವಾ ?''

''ನನ್ನ ಫ್ರೆಂಡ್ ಮದುವೆ. ಅಲ್ಲಿಗೆ ಹೋಗ್ತಿದೀನಿ...'' ಸಂಕೇತ ಅವಳನ್ನೇ ನೋಡಿದ. ಸುಚಿತ್ರಳ ಮದುವೆಗೆಂದು ರಜ ಹಾಕಿದಾಳೆ... ಇರಲಿ ವಿಚಾರಿಸಿಕೊಳ್ತೀನಿ ಅಂತಂದುಕೊಂಡ...

''ಬರ್ತಿದೀಯೇನೋ ನಮ್ಮ ಜೊತೇಲಿ ಈಗ ?'' ವಿಠ್ಠಲ ಕೇಳಿದ.

''ನನ್ನ ಸ್ನಾನ ಗೀನ ಏನೂ ಆಗಿಲ್ಲ, ನೀವುಗಳು ಹೋಗಿರಿ. ನಾನು ನಿಧಾನವಾಗಿ ಬರ್ತೀನಿ''

''ನಾವು ಇಲ್ಲೇ ಕಾಯ್ತೀವಿ. ಬೇಗ ಬೇಗ ರೆಡಿ ಮಾಡ್ಕೋ...'' ಸಂಕೇತ ಹರೀಶನನ್ನು ಮನದಲ್ಲೇ ಬೈಯುತ್ತಾ ಎದ್ದ. ಸುಮತಿ ಕಿಟ್‌ಬ್ಯಾಗ್‌ಗೆ ಬಟ್ಟೆಗಳನ್ನಿಟ್ಟುಕೊಳ್ಳುತ್ತಿದ್ದಳು. ಅವಳನ್ನು ಚುಡಾಯಿಸುವ ಮನಸ್ಸಾಗಿತ್ತು. ಆದರೂ, ಕೆಳಗೆ ಸ್ನೇಹಿತರಿರುವ ವಿಷಯ ನೆನಪಾಗಿ, ಬಾತ್‌ರೂಂಗೆ ಹೊರಟ... ಅವನು ಸ್ನಾನ ಮುಗಿಸಿ ಬರುವಷ್ಟರಲ್ಲಿ ಸುಮತಿ ಹೊರಟು ಹೋಗಿದ್ದಳು ಅವನಿಗೆ ನಿರಾಸೆಯಾಗಿತ್ತು. ಜೊತೆಗೆ ಕೋಪವೂ ಬಂದಿತ್ತು. ಹರೀಶ ಬರದೇ ಇದ್ದಿದ್ದರೆ... ಅಂತ ಹಲವಾರು ಬಾರಿ ಅಂದುಕೊಂಡ. ಅಡಿಗೆ ಮನೆಯ ಬಳಿಗೆ ಬಂದು, ತಾಯಿಗೆ ಹೇಳಿ, ಅವರಿಬ್ಬರ ಜೊತೆಯಲ್ಲಿ ಹೊರಟ

ಸುಮತಿ ಹೇಗೂ ಮನೆಯಲ್ಲಿ ಇಲ್ಲವೆನ್ನುವುದನ್ನು ತಿಳಿದಿದ್ದನಾದ್ದರಿಂದ, ಬಹಳ ತಡವಾಗಿ ಮನೆಗೆ ಬಂದ. ವಿಠ್ಠಲನ ಮನೆಯಲ್ಲಿ ಊಟವೂ ಆಗಿದ್ದುದರಿಂದ ಸೀದಾ ಮಹಡಿ ಹತ್ತಿದ ಸುಮತಿಯ ರೂಮಿನ ಬಾಗಿಲು ತೆಗೆದಿತ್ತು. ಮೆಲ್ಲನೆ ಒಳಕ್ಕೆ ಕಾಲಿಟ್ಟ, ಹಿತವಾದ, ಮೈಬಿಸಿಯಾಗುವ ಆಲೋಚನೆಗಳು ಮೂಡಿದವು. ಟೇಬಲ್ ಮೇಲಿದ್ದ ಮದುವೆಯ ಆಹ್ವಾನ ಪತ್ರಿಕೆಯನ್ನು ಕಂಡ. ಅಲ್ಲಿದ್ದ ಪೆನ್ನನ್ನೆತ್ತಿಕೊಂಡು, ಮನಬಂದಂತೆ ಗೀಚಿದ. ಸುಚಿತ್ರ ವೆಡ್ಸ್ ಶಂಕರ್ ಎನ್ನುವುದನ್ನೇ ಅನೇಕ ಬಾರಿ ನೋಡಿದ. ಅದರ ಪಕ್ಕದಲ್ಲಿ ಸಂಕೇತ್ ವೆಡ್ಸ್ ಸುಮತಿ ಎಂದು ಬರೆದು, ಅನೇಕ ಬಾರಿ ತುಟಿಗಳಿಗೆ ಒತ್ತಿಕೊಂಡ. ಆಕಾರ್ಡನ್ನು ತನ್ನ ಎದೆಗೆ ಒತ್ತಿಕೊಂಡು, ಹಾಗೇ ಮಂಚದ ಮೇಲೆ ಉರುಳಿಕೊಂಡ ಸುಮತಿ ತನ್ನ ಬಳಿಯೇ ಇದಾಳೆ ಎನ್ನುವಂತೆ ರಸಮಯ ಆಲೋಚನೆಗಳಲ್ಲಿ ಮುಳುಗಿದ. ಹಾಗೇ ನಿದ್ದೆಯೂ ಆವರಿಸಿತ್ತು.

ಬೆಳಿಗ್ಗೆ ಎಚ್ಚರವಾದಾಗಲೇ, ತಾನು ಸುಮತಿಯ ರೂಮಿನಲ್ಲಿ ಅವಳು ಮಲಗುವ ಮಂಚದ ಮೇಲೆ, ಹಾಸಿಗೆಯ ಮೇಲೆ ಮಲಗಿರುವೆನೆಂಬ ಅರಿವಾದದ್ದು, ಗಡಬಡಿಸಿ ಎದ್ದ ರಾಜಮ್ಮ ಕಂಡರೇ... ಮಮ್ಮಿಗೆ, ಸುಮತಿಗೆ ಹೇಳದೇ ಬಿಡುವಳೇ ಎಂದುಕೊಂಡ ಎದ್ದು ತನ್ನ ರೂಮಿಗೆ ಬಂದ. ಸಣ್ಣದಾಗಿ ತಲೆ ನೋಯುತ್ತಿದೆಯೆಂದೆನಿಸಿತ್ತು. ವಿಠ್ಠಲನ ಮನೆಯಲ್ಲಿ ಊಟವಾದ ನಂತರ, ಹರೀಶನೊಡನೆ ಬಾರ್‌ಗೆ ಬಂದಿದ್ದ, ಒಂದೆರಡು ಪೆಗ್ ಡ್ರಿಂಕ್ಸ್

ತಗೊಂಡಿದ್ದ. ಮನೆಗೆ ಬಂದವನು, ತನ್ನ ರೂಮಿಗೆ ಬರದೇ ಸೀದಾ ಸುಮತಿಯ ರೂಮಿಗೆ ಹೋಗಿದ್ದ... ತಾನು ಬೇಕೂಂತ ಮಾಡಿದ್ದಲ್ಲ. ತನಗೆ ತಿಳಿಯದಂತೆ ಮಾಡಿದ್ದು. ಇದರಲ್ಲಿ ತಪ್ಪೇನಿಲ್ಲ ಅಂತ ತನಗೆ ತಾನೇ ಹಲವಾರು ಬಾರಿ ಹೇಳಿಕೊಂಡ.

''ಕಸ ಗುಡಿಸಿ, ಒರೆಸಲೆಂದು ರಾಜಮ್ಮ ಬಂದಿದ್ದಳು. ಅವಳು ಎಲೆ ಅಡಿಕೆ ಅಗಿಯುತ್ತಿದ್ದಳು ಯಾಕೋ ಬೇಸರವೆನಿಸಿತ್ತು. ಎದ್ದು ಕೆಳಗಿಳಿದು ಬಂದ. ಜಗ್ಗು ಟೇಬಲ್ ಬಳಿ ಕುಳಿತು, ತಿಂಡಿ ತಿನ್ನುತ್ತಿದ್ದ. ಇವನು ಮುಖ ಸಿಂಡರಿಸಿ, ಮುಂಬಾಗಿಲಿಗೆ ಬಂದು ನಿಂತ ಅವನ ಹಿಂದೆಯೇ ಜಾನಕಿ ಬಂದಳು.

''ನಿನಗೂ ಕಾಫಿ ತಿಂಡಿ ಕೊಡಲೇನೋ ಸಂಕು ?''

''ಮೊದಲು ಆ ಯುವರಾಜನದು ಆಗಲಿ... ಆಮೇಲೆ ನನಗೆ ಕೊಡೋವಂತೆ'' ಜಾನಕಿ ಪೆಚ್ಚಾದಳು. ಒಳ ಬಂದು ಜಗ್ಗೂನ ದರ ದರ ಎಳೆದುಕೊಂಡು ತನ್ನ ರೂಮಿಗೆ ಹೋಗಿ, ಅಲ್ಲೇ ತಿಂಡಿಯ ತಟ್ಟೆಯನ್ನು ಕುಕ್ಕಿ, ಹೊರಬಂದು ಬಾಗಿಲನ್ನು ಹೊರಗಿನಿಂದ ಮುಚ್ಚಿದಳು.

''ಹೋಗೇ ರಾಜಮ್ಮ, ಸಂಕೇತನ್ನ ಕರಿ. ಕಾಫಿ ಆರಿ ಹೋಗುತ್ತಂತೆ ಅಂತ ಹೇಳು'' ಅಷ್ಟರಲ್ಲಿ ಸಂಕೇತನೇ ಒಳಕ್ಕೆ ಬಂದಿದ್ದ. ಸುಮತಿ ಮನೆಯಲ್ಲಿ ಇಲ್ಲ ಅನ್ನುವುದು ಪದೇ ಪದೇ ನೆನಪಿಗೆ ಬರುತ್ತಿತ್ತು. ತಿಂಡಿ ರುಚಿಸಿರಲಿಲ್ಲ.

''ಇನ್ನೊಂದೆರಡು ಇಡ್ಲಿ ಹಾಕ್ಲಾ... ಬಿಸಿಬಿಸಿಯಾಗಿದೆ'' ತಾಯಿಯ ಉಪಚಾರ ಬೇಕೆನಿಸಲಿಲ್ಲ.

''ಇಡ್ಲಿ ಬಿಟ್ಟು ಬೇರೆ ಏನೂ ಮಾಡೋಕೆ ಬರುಲ್ಲ ನಿನಗೆ...'' ಕೆಣಕಿದ

''ನಿನಗೆ ಏನು ಬೇಕೂಂತ ನೀನು ಹೇಳುಲ್ಲ, ನನಗೆ ತೋಚಿದ್ದನ್ನಾ ನಾನು ಮಾಡ್ತೀನಿ...'' ಈಗೇನು ಬೇಕು ಹೇಳು. ರಾಜಮ್ಮ ಇದಾಳೆ ತರಿಸ್ತೀನಿ''

''ಹೋಟೆಲ್ಲಿನ ತಿಂಡಿ ತಿನ್ನೋಕೆ ಮನೆಯೇ ಆಗ್ಬೇಕಾ...?''

''ಹಾಗಲ್ಲ ಕಣೋ... ಸುಮತೀನೂ ಮನೇಲಿರಲಿಲ್ಲ... ನಂಗೂ ಬಿಡುವಾಗಲಿಲ್ಲ''

''ಎಲ್ಲಿ ಹೋದಳು ನಿನ್ನ ಪೇಯಿಂಗ್ ಗೆಸ್ಟ್? ಏನೂ ಅರಿಯದವನಂತೆ ಕೇಳಿದ.

''ಯಾಕೋ ನಿನಗೆ ಗೊತ್ತಿಲ್ವಾ ? ಇವತ್ತು ಸುಚಿತ್ರಳ ಮದುವೆ... ನ್ಯಾಯವಾಗಿ ನಾನೂ ಹೋಗಬೇಕಾಗಿತ್ತು...''

''ಈಗಲೂ ಏನಂತೆ ಹೊರಡು... ನಾನು ನಿನ್ನನ್ನು ಕರೆದುಕೊಂಡು ಹೋಗ್ತೀನಿ...''

''ಜಾನಕಿ ಮುಖ ಸಪ್ಪಗೆ ಮಾಡಿದಳು'' ನನಗೆ ಹೋಗುಕ್ಕೆ ಇಷ್ಟವಿಲ್ಲ ಎಂದಳು.

"ಸುಳ್ಳು ಹೇಳಬೇಡ. ನೀನು ಯಾಕೆ ಹೋಗ್ತಿಲ್ಲ ಅಂತ ನನಗೂ ಗೊತ್ತು"

"ಸರಿ ಮತ್ತೆ ಮಾತ್ಯಾಕೆ ? ನನ್ನ ಬದಲಿಗೆ ನೀನು ಹೋಗಿ ಬಾ..."

"ನಾನೇನು ಹೆಂಗಸೇ ಮದುವೆ ಮುಂಜಿ ಅಂತ ಸಂಭ್ರಮ ಪಡೋಕೆ ?"

"ಬರೀ ಹೆಂಗಸರೇ ಏನೂ ಇರುಲ್ಲ ಸಮಾರಂಭಗಳಲ್ಲಿ ಗಂಡಸರೂ ಇರ್ತಾರೆ... ಮದುವೆ ನಡೀತಿರುವುದೂ, ಒಬ್ಬ ಗಂಡಿಗೆ, ಇನ್ನೊಂದು ಹೆಣ್ಣಿನೊಡನೆ ಜಾನಕಿ ನಕ್ಕಾಗ ಅವನು ತಲೆಕೆರೆದುಕೊಂಡ ಬೆಪ್ಪನಂತೆ ಮುಖಮಾಡಿದ

"ಸುಚಿತ್ರ ನಿನಗೂ ಫ್ರೆಂಡು. ನಿನಗೂ ಇನ್ವಿಟೇಷನ್ ಕೊಟ್ಟಿದಾಳೆ ಅಲ್ವಾ... ನೀನೂ ಏನಾದರೂ ಉಡುಗೊರೆ ತೆಗೆದುಕೊಂಡು, ಮದುವೆಗೆ ಹೋಗು. ಚಿರೋಟಿ ಊಟ ಮಾಡಿಕೊಂಡು ಬಾ..."

ಉಡುಗೊರೆ ಎಂದೊಡನೆ, ಎರಡು ಮೂರು ದಿನಗಳ ಹಿಂದೆ, ತಾನು ಸುಮತಿ ಒಟ್ಟಾಗಿ ಹೋಗಿ ತಂದಿದ್ದ ಒಡವೆಯ ಸೆಟ್ ನೆನಪಾಯಿತು. ಸುಮತಿಯ ಬಳಿಯೇ ಇತ್ತು. ಈಗ ಅವಳು ಅದನ್ನು ಎಲ್ಲಿಟ್ಟಿರುವಳೋ ? ಎಲ್ಲಿ ಹುಡುಕುವುದು ? ಅವಳನ್ನೇ ಫೋನು ಮಾಡಿ ಕೇಳಿದರೆ ? ಬೇಡ ಮಮ್ಮಿಗೆ ತಿಳಿದು ಹೋಗುತ್ತದೆ ಎಂದುಕೊಂಡು, ಸುಮತಿಯ ರೂಮಿಗೆ ಬಂದ ಯಾಕೋ ಏನೋ ಅವಳ ಸೂಟ್‌ಕೇಸುಗಳಲ್ಲಾಗಲೀ, ಕಬೋರ್ಡಿನ ಬಟ್ಟೆಯ ನಡುವೆಯಾಗಲೀ, ಜ್ಯುವೆಲ್ ಬಾಕ್ಸ್‌ನ ಹುಡುಕುವ ಮನಸ್ಸಾಗಲಿಲ್ಲ. ಅವನಿಗೆ ಬೇರೆಯೇ ಆಲೋಚನೆ ಬಂತು. ತಕ್ಷಣವೇ ಕಾರ್ಯಗತ ಮಾಡಿದ.

ಸೀದಾ, ಆ ದಿನ ಹೋಗಿದ್ದ ಒಡವೆ ಅಂಗಿಡಗೆ ಬಂದ ಹೆಚ್ಚು ಕಡಿಮೆ ಅದೇ ಬೆಲೆಯ ಬೇರೆ ಒಂದು ಸೆಟ್ ಒಡವೆಯನ್ನು ಖರೀದಿಸಿದ. ಮತ್ತೆ ಮನೆಗೆ ಬಂದ. ತಾಯಿಗೆ ತಾನು ತಂದ ಒಡವೆ ಸೆಟನ್ನು ತೋರಿಸಿದ. ಬಾಯಿ 'ತುಂಬಾ ಚೆನ್ನಾಗಿದೆ' ಎಂದು ಹೊಗಳಿದರೂ, ಇಷ್ಟು ಬೆಲೆಯ ಉಡುಗೊರೆ ಬೇಕಿತ್ತೆ ! ಅಂತಂದುಕೊಂಡಳು.

"ನಾನು ಸಾಯಂಕಾಲ ರಿಸಪ್ಷನ್‌ಗೆ ಹೋಗಬೇಕೂಂತ ಇದೀನಿ ನೀನೂ ಬರೋದಾದ್ರೆ ಬಾ..."

"ನನಗೆಲ್ಲಿ ಆಗುತ್ತಪ್ಪಾ... ನಿನಗೇ ಗೊತ್ತು..."

"ಏಕೋ ಏನೋ ಸಂಕೇತ, ಹುಬ್ಬುಗಳನ್ನು ಸೇರಿಸಲಿಲ್ಲವೆಂದು, ಜಾನಕಿ ಅರಿತಳು. ಇವನು ಏನು ಯೋಚಿಸುತ್ತಿರಬಹುದು ?' ನನ್ನ ಮಾತಿನ ಮೇಲೆ ಇವನಿಗೆ ಗಮನವಿಲ್ಲವೇ...? ಆ ಅನಿಸಿಕೆಯೂ ಅವಳಿಗೆ ಇಷ್ಟವಾಗಲಿಲ್ಲ.

ನೀಲಿ ಬಿಳಿಯ ದೊಡ್ಡ ದೊಡ್ಡ ಗೆರೆಗಳಿರುವ ಟೀಷರ್ಟು, ಅದಕ್ಕೆ ಒಪ್ಪುವ ಕಡು ನೀಲಿ ಬಣ್ಣದ ಜೀನ್ಸ್ ಪ್ಯಾಂಟನ್ನು ಧರಿಸಿ, ದಪ್ಪನೆಯ ಆಕ್ಷನ್ ಷೂಗಳನ್ನು ಧರಿಸಿ, ನವಿರಾದ

ವಾಸನೆಯನ್ನು ಬೀರುವ ಸೆಂಟನ್ನು ಸ್ಪ್ರೇ ಮಾಡಿಕೊಂಡು, ಒಪ್ಪವಾಗಿ ತಲೆಗೂದಲನ್ನು ಬಾಚಿ, ತೆಳುವಾಗಿ ಪೌಡರನ್ನು ಹಚ್ಚಿ ದೊಡ್ಡ ಕನ್ನಡಿಯಲ್ಲಿ ಹಲವಾರು ಬಾರಿ, ಹಾಗೇ ಹೀಗೇ ನಿಂತು ತನ್ನನ್ನೇ ತಾನು ನೋಡಿಕೊಂಡ. ಟಪ್ ಟಪ್ ಸದ್ದು ಮಾಡುತ್ತಾ ಕೆಳಗಿಳಿದು ಬಂದವನನ್ನೇ ಜಾನಕಿ ದಿಟ್ಟಿಸಿದಳು. ಬಳಿಯಲ್ಲಿ ನಿಂತಿದ್ದ ಜಗ್ಗುವಿನ ಕೈ ಹಿಡಿದು ಹಿಂದಕ್ಕೆ ಎಳೆದಳು. ಅಷ್ಟಾದರೂ ಸಂಕೇತ ಜಗ್ಗೂನ ಕಂಡಿದ್ದ. ಅವನ ಹುಬ್ಬುಗಳು ಕೂಡಿದವು. ಮದುವೆಯ ರಿಸೆಪ್ಶನ್‌ಗೆ ಹೊರಟಿರುವನೆಂದು ಭಾವಿಸಿದಳು. ಅವನ ಕೈಯಲ್ಲಿ ಉಡುಗೊರೆಯ ಪ್ಯಾಕೆಟ್ಟು.. ಸಂಕೇತ 'ಬರ್ತೀನಿ' ಅಂತ ಸಹ ಹೇಳದೇ ಬಾಗಿಲನ್ನು ದಾಟಿದ. ತಾನೇ ಕೇಳಬೇಕೆಂದುಕೊಂಡು ಎರಡು ಹೆಜ್ಜೆ ಮುಂದಿಟ್ಟಳು ಹಿಂದಿನಿಂದ ಜಗ್ಗು ಕೈ ಎಳೆದ.

''ನೀನೊಬ್ಬ ದ್ರಾಬೆ, ಏನೂಂತ ಹುಟ್ಟಿದೆಯೋ ... ನಿನ್ನ ದೆಸೆಯಿಂದ ಇವನೂ ದೂರವಾದ... ನೀನಂತೂ ಇದ್ದರೂ ಒಂದೇ ಇಲ್ಲದಿದ್ದರೂ ಒಂದೇ ನನಗೆ..'' ಎರಡೇಟು ಹಾಕಿದಳು ಅಸಹನೆಯಿಂದ.



ರಿಸೆಪ್ಶನ್ ಹಾಲ್‌ನ್ನು ಪ್ರವೇಶಿಸುತ್ತಿದ್ದಂತೆಯೇ ಸಂಕೇತನ ಕಣ್ಣುಗಳು ಸುಮತಿಯನ್ನು ಅರಿಸಿದವು. ಸುಧೀರ ಬಂದು ಕೈಕುಲುಕಿ, ಸ್ವಾಗತಿಸಿದ್ದ. ಅಲ್ಲಿ ಅವರ ಮನೆಯವರ ಹೊರತು ಬೇರೆ ಯಾರೂ ಪರಿಚಯಸ್ಥರಿರಲಿಲ್ಲ. ಮುಜುಗರವೆನಿಸಿತ್ತು. ಸುಧೀರನ ಜೊತೆಯಲ್ಲಿ ವಧೂವರರು ಕುಳಿತಿದ್ದ ಕಡೆಗೆ ಬಂದ. ಸಂಕೇತ ಇಬ್ಬರ ಕೈಗಳನ್ನು ಕುಲುಕಿ ಶುಭಾಶಯ ಕೋರಿದ. ಉಡುಗೊರೆಯ ಪ್ಯಾಕೆಟ್ಟನ್ನು ಸುಚಿತ್ರಳಿಗೆ ಕೊಟ್ಟ. ಅವಳು ತನ್ನ ಪತಿಗೆ ಸಂಕೇತನ ಪರಿಚಯವನ್ನು ಮಾಡಿಸಿಕೊಟ್ಟಿದ್ದಳು. ಅಲ್ಲೇ ನಗುನಗುತ್ತಾ ಮಾತನಾಡುತ್ತಾ ನಿಂತಿದ್ದರೂ, ಸುಮತಿ ಎಲ್ಲಿಯಾದರೂ ಕಣ್ಣಿಗೆ ಬೀಳುವಳೇನೋ ಅಂತಂದುಕೊಂಡು ಅತ್ತಿತ್ತ ನೋಡುತ್ತಲೇ ಇದ್ದ. ಅಷ್ಟರಲ್ಲಿ ಸುಧೀರ ಬಂದು, ಸಂಕೇತನ ಕಿವಿಯಲ್ಲಿ ಪಿಸುಗುಟ್ಟಿದ. ಸಂಕೇತ ಕಣ್ಣರಳಿಸಿದ. ದೂರದಲ್ಲಿ ನಿಂತಿದ್ದ ಯುವತಿಯೊಬ್ಬಳ ಕಡೆ ಕೈಮಾಡಿ ತೋರಿಸಿ, ಸುಧೀರ ಅಲ್ಲಿಂದ ಸರಿದಿದ್ದ. ಸಂಕೇತ ಅನುಮಾನದಿಂದ ಆ ಯುವತಿಯನ್ನೇ ನೋಡುತ್ತಾ ಅವಳ ಬಳಿಗೆ ಬಂದ ಹತ್ತಿರ ಬಂದಾಗ, ಆ ಯುವತಿಯನ್ನು ತಾನು ಈ ಮುಂಚೆ ಎಲ್ಲಿಯೋ ನೋಡಿದ್ದೇನೆ ಅಂತೆನ್ನಿಸಿತ್ತು. ಅವಳು ಮುಗುಳ್ನಕ್ಕಾಗಲೂ ಅವಳನ್ನೇ ಮಿಕಿ ಮಿಕಿ ನೋಡಿದ.

''ಹಲೋ... ಸಂಕೇತ್... ಆಂಟಿ ಬರಲಿಲ್ವಾ ?'' ಸಂಕೇತ ಎಚ್ಚೆತ್ತುಕೊಂಡ.

''ಅರೇ... ಸುಮತೀ... ನೀವು ಅಂತ ನನಗೆ ಗೊತ್ತಾಗ್ಲೇ ಇಲ್ಲ. ಮಾರ್ವೆಲಸ್ ಆಗಿ ಕಾಣ್ತಿದೀರಿ'' ಮೆಚ್ಚುಗೆಯ ನೋಟಗಳು ಅವಳ ಮೇಲೆ ಹರಿದಾಡಿದವು. ಅವಳು ನಾಚಿದಳು. ಕೆನ್ನೆಗಳು ಗುಲಾಬಿಯಾಗಿದ್ದವು.

''ಇದು ತಗೊಳ್ಳಿ... ಒಡವೆಯ ಸೆಟ್... ಸುಚಿತ್ರಳಿಗೆ ಪ್ರೆಸೆಂಟ್ ಮಾಡುಕ್ಕೆ ಅಂತ

ತಂದಿದ್ದು..." ಅವನ ಮುಂದೆ ಬಾಕ್ಸನ್ನು ಹಿಡಿದಳು.

"ಓ... ಅದು ನಿಮ್ಮ ಹತ್ತಿರವೇ ಇತ್ತಾ ! ನನಗೆ ಮರತೇ ಹೋಗಿತ್ತು."

"ಹೋಗಿ ಇದನ್ನು ಕೊಟ್ಟು ಬನ್ನಿ" ಅವನು ತೆಗೆದುಕೊಳ್ಳಲಿಲ್ಲ."

"ಬೇಡ. ಈಗ ಅದರ ಅಗತ್ಯವಿಲ್ಲ, ನಾನು ಬೇರೆ ಸೆಟ್ ಒಡವೇನಾ ತಂದುಕೊಟ್ಟೆ..."

"ಮತ್ತೆ ಈಗ ಇದು ? ಇದನ್ನೇನು ಮಾಡೋದು ?"

"ನೀವೇ ಇಟ್ಕೊಳ್ಳಿ" ಎಂದು ಬಿಟ್ಟ ಅವಳಿಗೆ ಮುಜುಗರವಾಗಿತ್ತು.

"ನನಗ್ಯಾಕೆ ಬೇಡ... " ಎಂದಳು.

"ಅದನ್ನು ಮನೇಲಿ ಡಿಸ್ಕಸ್ ಮಾಡೋಣ... ಈಗ ನೆಕ್ಸ್ಟ್ ಪ್ರೋಗ್ರಾಂ ಏನು..."

"ಡಿನ್ನರ್ ಹಾಲ್‌ಗೆ ಹೋಗೋಣ ಬನ್ನಿ... ಊಟ ಮಾಡೋರಂತೆ"

"ನನಗೊಬ್ಬನಿಗೇ ಊಟ ಮಾಡೋಕೆ ಇಷ್ಟವಿಲ್ಲ, ನೀವೂ ಕುಳಿತುಕೊಳ್ಳೋದಾದ್ರೆ, ನಾನೂ ಊಟ ಮಾಡ್ತೀನಿ"

"ಅರೇ... ಇದೊಳ್ಳೆ ಚೆನ್ನಾಯ್ತಲ್ಲ... ಮದುವೆಯಾಗೋ ಬ್ರಾಹ್ಮಣ ಅಂತ ಹೇಳಿದರೆ ನೀನೇ ನನ್ನ ಹೆಂಡತಿ ಅಂದ್ಹಂತೆ..."

"ಏನಂದ್ರೀ... ನನಗೆ ಅರ್ಥವಾಗಲಿಲ್ಲ"

"ಅವಳು ಮತ್ತೆ ಬಿಡಿಸಿ ಹೇಳಿದಾಗ, ಅವನು ಸಶಬ್ಧವಾಗಿ ನಕ್ಕು ನುಡಿದ. "ಯಾಕಾಗಬಾರದು ?" ಅವಳ ಮೈಯ ರಕ್ತವೆಲ್ಲಾ ಒಮ್ಮೆಗೇ ಮುಖಕ್ಕೆ ಹರಿದಂತಾಯ್ತು. ಅವನ ಕಡೆ ನೋಡಲು ಸಂಕೋಚವಾಗಿತ್ತು.

"ನೀವೂ ಕಂಪೆನಿ ಕೊಡೋದಾದ್ರೆ ಮಾತ್ರ ನಾನೂ ಊಟ ಮಾಡ್ತೀನಿ. ಇಲ್ಲದಿದ್ದರೆ ಖಂಡಿತಾ ಮಾಡುಲ್ಲ."

"ಓ... ಕೆ... ನಡೀರಿ" ಅವಳು ಹೆಚ್ಚಿಗೆ ಹೇಳಿಸಿಕೊಳ್ಳದೇ ಅವನೊಂದಿಗೆ ನಡೆದು ಡೈನಿಂಗ್ ಹಾಲ್‌ಗೆ ಬಂದಳು. ಖಾಲಿಯಿದ್ದ ಜಾಗದಲ್ಲಿ ಪಕ್ಕ ಪಕ್ಕದಲ್ಲಿ ಕುಳಿತರು. ಸುಮತಿ ಸಂಕೋಚದಿಂದ ಮುದುರಿ ಕುಳಿತಿದ್ದಳು. ಸಂಕೇತ ಸಂತೋಷದಿಂದ ಉಬ್ಬಿ ಹೋಗಿದ್ದ. ಖುಷಿಯಿಂದ ಅವನಿಗೆ ಊಟ ಸೇರದಂತಾಗಿತ್ತು. ಸುಮತಿಗೆ ಸಂಕೋಚದಿಂದ, ಊಟ ಬೇಕೆನಿಸಿರಲಿಲ್ಲ, ಇಬ್ಬರೂ ಅರೆ ಊಟ ಮಾಡಿ ಎದ್ದರು.

"ಇನ್ನು ಹೊರಡೋಣ್ವಾ ಮನೆಗೆ ?" ಕೇಳಿದ.

"ನಾನು ಬೆಳಿಗ್ಗೆ ಬರ್ತೀನಿ. ನೀವು ಹೊರಡಿ"

"ಇವತ್ತು ರಾತ್ರಿಯಂತೂ ನಿಮ್ಮ ಸ್ನೇಹಿತೆ ನಿಮ್ಮ ಕೈಗೆ ಸಿಗುಲ್ಲ. ಒಬ್ಬರೇ ಆಗಿ ಬಿಡ್ತೀರಿ..." ತಮಾಷೆ ಮಾಡಿದ.

"ನೀವು ಅರ್ಜೆಂಟಿದ್ದರೆ ಹೊರಡಿ. ನಾನು ನಿಧಾನವಾಗಿ ಬರ್ತೀನಿ..."

"ಒಬ್ಬರೇ ಬರ್ತೀರಾ... ಈ ಅಲಂಕಾರದಲ್ಲಿ ಬೇಡ ಬೇಡ" ಮೇಲಿನಿಂದ ಕೆಳಗೆ ಅವಳನ್ನೇ ದಿಟ್ಟಿಸಿದ.

"ಸುಧೀಗೆ ಹೇಳಿದ್ರೆ ಅವನು ಡ್ರಾಪ್ ಮಾಡ್ತಾನೆ."

"ಅವನಿಗ್ಯಾಕೆ ತೊಂದರೆ ! ನಾನು ಬೇಕಾದರೆ ಇನ್ನೂ ಒಂದು ಹತ್ತು ನಿಮಿಷ ಕಾಯ್ತೀನಿ... ಹೇಳೋರಿಗೆಲ್ಲ ಹೇಳಿ ಬಿಟ್ಟು ಬನ್ನಿ."

ಸುಮತಿ, "ಸಂಕೇತ ಜೊತೆಗಿದ್ದಾನೆ, ಹೊರಡ್ತೀನಿ ಅಂತಂದು ನುಡಿದಾಗ, ಯಾರೂ ಬೇಡವೆನ್ನಲಿಲ್ಲ. ಸುಚಿತ್ರಳೂ ಬೇಡ ಎನ್ನಲಿಲ್ಲ. ಅವಳಿಗೆ ಆಶ್ಚರ್ಯವಾಗಿತ್ತು. ಸಂಕೇತ ನುಡಿದಂತೆ "ಇಷ್ಟೇನಾ ಸ್ನೇಹ... ನಾನಿನ್ಯಾಕೆ ಇವಳಿಗೆ ಅಂತಂದುಕೊಂಡಾಗ ಖೇದವಾಗಿತ್ತು. ಸುಧೀರ ಮಾತ್ರ" ನಾನೇ ಡ್ರಾಪ್ ಮಾಡ್ತಿದ್ದೆ... ಈಗಲೇ ಛತ್ರವನ್ನು ಖಾಲಿ ಮಾಡಬೇಕಂತೆ. ನಾನೇ ಸಂಕೇತನಿಗೆ ಹೇಳೋಣ ಅಂತಿದ್ದೆ ಎಂದಾಗ ಸ್ವಲ್ಪ ಸಮಾಧಾನವಾಗಿತ್ತು. ಫಲ ತಾಂಬೂಲಗಳನ್ನು ತೆಗೆದುಕೊಂಡು, ಮತ್ತೊಮ್ಮೆ ನವ ದಂಪತಿಗಳಿಗೆ ಶುಭ ಹಾರೈಸಿದರು. ಹೊರ ಬಂದು ರಿಕ್ಷಾ ಹಿಡಿದರು.

"ಸುಚಿತ್ರ ಹೆದರಿ ಬಿಟ್ಟಿದಾಳೆ ಅಂತನ್ನಿಸ್ತು..." ಸಂಕೇತ ನುಡಿದ.

"ಯಾಕೆ ಹಾಗೆನ್ನಿಸ್ತು ? ಹೆದರಿಕೆ ಯಾಕೆ ?"

"ಫಸ್ಟ್ ನೈಟ್ ಅಲ್ವಾ !" ಅವಳು ಉಸಿರು ಬಿಗಿ ಹಿಡಿದಳು. ಇವನಿಗೇಕೆ ಚಿಂತೆ ಅಂತಂದುಕೊಂಡಳು ಮಾತನಾಡಲಿಲ್ಲ. ಅವನು ತನ್ನಲ್ಲೇ ನಕ್ಕ... ಇಬ್ಬರೂ ಮನೆ ತಲುಪಿದರು. ನಿದ್ದೆ ಗಣ್ಣಿನಲ್ಲಿದ್ದ ಜಾನಕಿ ಅವರುಗಳ ಕಡೆ ನೋಡಿ ನಸುನಕ್ಕಳು. ಹೆಚ್ಚು ಮಾತನಾಡಲಿಲ್ಲ. ಈಗ ಹೊತ್ತಾಗಿದೆ ಬೆಳಿಗ್ಗೆ ಕೇಳಿದ್ರಾಯ್ತು ಅಂತಂದುಕೊಂಡು ತನ್ನ ಪಾಡಿಗೆ ತಾನು ಹೊರಟು ಹೋದಳು.

ಸುಮತಿಯ ಹಿಂದೆ ಹಿಂದೆಯೇ ಸಂಕೇತ ಮೆಟ್ಟಿಲುಗಳನ್ನೇರಿದ... ಇನ್ನೇನು ಅವಳು ರೂಮಿಗೆ ಹೊರಟು ಹೋಗುತ್ತಾಳೆ ಎನ್ನುವಾಗ, ಸುಮತೀ.. ಎಂದು ಕರೆದ ಮಧುರವಾಗಿ ಅವಳು ಹಿಂತಿರುಗಿ ನೋಡಿದಳು.

''ನೀವು ಇವತ್ತು ತುಂಬಾ ಚೆನ್ನಾಗಿ ಕಾಣ್ತಿದೀರಿ. ನನ್ನ ದೃಷ್ಟಿಯೇ ತಾಗುತ್ತೆ ನಿಮಗೆ ಸುಮತಿ 'ಏನಿಲ್ಲ' ಎನ್ನುವಂತೆ ನಕ್ಕಳು.

''ನಿಮಗೆ ಗೊತ್ತಿಲ್ಲ, ಕನ್ನಡೀಲಿ ನಿಮ್ಮ ಮುಖವನ್ನು ನೋಡ್ಕೊಳ್ಳಿ... ನಿಮಗೇ ಗೊತ್ತಾಗುತ್ತೆ.'' ಅವಳು ಕಿಲಕಿಲನೆ ನಕ್ಕಾಗ, ಅವನಿಗೆ ಕಚಗುಳಿ ಇಟ್ಟಂತಾಗಿತ್ತು.

''ನನ್ನ ಕಾಂಪ್ಲಿಮೆಂಟ್ಸ್‌ನ ಅಷ್ಟು ಲೈಟಾಗಿ ತಗೋಬೇಡಿ ಮೇಡಂ'' ಎಂದ.

''ಇನ್ಹೇಗೆ ತಗೋ ಬೇಕು ?'' ಬಳುಕುತ್ತಾ ಸವಾಲೆಸೆದಾಗ, ಅವನ ಸಂಯಮ ಹಾರಿಹೋಯಿತು.

''ಹೀಗೇ...'' ಎನ್ನುತ್ತಾ ಅವಳನು ಬಲವಾಗಿ ತಬ್ಬಿಕೊಂಡು, ಅವಳ ತುಟಿಗಳಿಗೆ ತನ್ನ ತುಟಿಗಳನ್ನು ಸೇರಿಸಿದ. ಕೊಸರಿಕೊಳ್ಳಲು ನೋಡಿದಳು. ಅವಳ ಪ್ರಯತ್ನ ವಿಫಲವಾಯಿತು. ಅವನ ಅಪ್ಪುಗೆಯ ಶಾಖದಲ್ಲಿ ನಿಧಾನವಾಗಿ ಕರಗಿ ಹೋದಳು. ಅವಳನ್ನು ಎತ್ತಿಕೊಂಡು ಹೋಗಿ ಮಂಚದ ಮೇಲೆ ಮಲಗಿಸಿದ. ಐ ಲವ್ ಯೂ ಸುಮತೀ. ಐ ನೀಡ್ ಯೂ... ಎನ್ನುತ್ತಾ ಅವಳನ್ನು ತನ್ನ ಬಾಹು ಬಂಧನಗಳಲ್ಲಿ ಅಡಗಿಸಿಕೊಂಡ. ಅವನ ಮೋಹಪಾಶದಲ್ಲಿ ಸುಮತಿ ಹಿತವಾಗಿ ನರಳಿದಳು. ಈ ಲೋಕದ ಅರಿವೇ ಇಲ್ಲದಂತೆ ಇಬ್ಬರೂ ಮೈಮರೆತು ಒಂದಾದರು.

ಪ್ರೇಮಲೋಕದಲ್ಲಿ ವಿಹರಿಸಿ, ವಾಸ್ತವ ಲೋಕಕ್ಕೆ ಹಿಂತಿರುಗಿದರು. ಆದರೆ ಇಬ್ಬರಿಗೂ ಯಾವ ಅಳುಕು, ಇರಲಿಲ್ಲ. ಮಾತನಾಡಿದರೆ ಎಲ್ಲಿ ರಸಭಂಗವಾಗಿ ಬಿಡುತ್ತದೋ ಎಂಬಂತೆ, ಇಬ್ಬರೂ ಆ ರಾತ್ರಿಯನ್ನು ಮೌನವಾಗಿ ಕಳೆದರು.

ಬೆಳಿಗ್ಗೆ ರಾಜಮ್ಮ ಬೆಲ್ ಮಾಡಿದಾಗ, ಮೊದಲು ಎಚ್ಚರವಾದದ್ದು ಸುಮತಿಗೆ ಗಾಬರಿಯಿಂದ ಸಂಕೇತನನ್ನು ಎಬ್ಬಿಸಿದಳು.

''ರಾಜಮ್ಮ ಬಂದಳು ಅಂತ ಕಾಣುತ್ತೆ. ನೀವು ಎದ್ದು ನಿಮ್ಮ ರೂಮಿಗೆ ಹೋಗಿ.''

''ಅವಳಿಗ್ಯಾರು ಕೇರ್ ಮಾಡ್ತಾರೆ...!''

''ನಾನು ಮಾಡ್ತೀನಿ... ಅವಳಿಗೆ ಅನುಮಾನ ಬಂದರೆ ಮುಗೀತು ನನ್ನ ಗತಿ ?''

''ಓ...ಕೇ... ಈಗ ಹೋಗ್ತೀನಿ. ಮತ್ತೆ ಆಮೇಲೆ ಬರ್ತೀನಿ...''

''ಪ್ಲೀಸ್ ಬೇಡ...''

''ಯಾಕೆ ಬೇಡ... ನೀನು ಇವತ್ತಿಂದ ಕಾಲೇಜಿಗೆ ಹೋಗ ಕೂಡದು...''

''ಯಾಕೆ ಹೋಗಬಾರದು...?''

''ಯಾಕೆ ಅಂದ್ರೆ... ನೀನು ನನ್ನವಳು... ನಾನು ಹೇಳಿದ ಹಾಗೆ ಕೇಳಬೇಕು...''

"ನಾನಿನ್ನು ನಿಮ್ಮ ಪತ್ನಿ ಯಾಗಿಲ್ಲ."

"ನೆನ್ನೆ ರಾತ್ರಿಯೇ ನಾವಿಬ್ಬರೂ ಪತಿ ಪತ್ನಿಯರಾದೆವು ಬೇರೇ ಮಾತೇ ಇಲ್ಲ" ಸುಮತಿ ಉತ್ತರ ಕೊಡಲಿಲ್ಲ. ಸಂಕೇತ ಅವಳ ಮುಖವನ್ನು ತನ್ನ ಬೊಗಸೆಯಲ್ಲಿ ಹಿಡಿದು ಕೆನ್ನೆಗಳನ್ನು ಚುಂಬಿಸಿದ. ಅವಳು ನಸುನಾಚಿ ಅವನನ್ನು ತಳ್ಳಿದಳು. ಮತ್ತೆ ಬರ್ತೀನಿ ಎಂದು ಪಿಸುಗುಟ್ಟಿ ಹೊರಬಂದ.

ರಾಜಮ್ಮ ಕಸಮುಸುರೆ ಕೆಲಸ ಮಾಡಿ ಹೋದ ಮೇಲೆ, ಸಂಕೇತ ಮತ್ತೆ ಅವಳ ರೂಮಿಗೆ ಬಂದ. ಅವಳು ಆ ರೇಶಿಮೆಯ ಸೀರೆಯನ್ನು ಬಿಚ್ಚಿ, ನೈಟಿಯನ್ನು ಧರಿಸಿದ್ದಳು." ಈ ನೈಟಿಯಲ್ಲಿ ನೀನು ತುಂಬಾ ಮುದ್ದಾಗಿ ಕಾಣ್ತಿದೀಯ..." ಎನ್ನುತ್ತಾ ಮುದ್ದಿಸಿದ.

"ಪ್ಲೀಸ್. ಸಂಕೇತ್... ನೆನ್ನೆ ರಾತ್ರಿ ಏನೋ ಅವಿವೇಕ ನಡೆದು ಹೋಯಿತು. ನಮ್ಮಿಬ್ಬರ ಮದುವೆ ನಡೆಯುವವರೆಗೆ ನಾವು ದೂರ ದೂರ ಇರೋಣ."

"ಇಂಪಾಸಿಬಲ್... ನಾನು ಇವತ್ತೇ ನಿನ್ನನ್ನು ಮದುವೆಯಾಗ್ತೀನಿ. ನೋ ಪ್ರಾಬ್ಲಂ."

"ಹಾಗಲ್ಲ, ನಿಮ್ಮ ತಾಯಿ ಒಪ್ತಾರಾ ?"

"ಒಪ್ಪದೇ ಏನು ಮಾಡ್ತಾಳೆ ಅವಳಿಗೆ, ನನಗಿಂತ ನಿನ್ನ ಮೇಲೇ ಹೆಚ್ಚು ಪ್ರೀತಿ."

"ಆ ಪ್ರೀತಿ ಬೇರೆ. ಈ ಪ್ರೀತಿ ಬೇರೆ. ನನಗೆ ಭಯವಾಗುತ್ತೆ."

"ಭಯ ಯಾಕೆ ಚುಮ್ಮೀ... ನಾನು ಲವ್ ಮಾಡ್ತೀನಿ. ಮದುವೆಯಾಗ್ತೀನಿ... ಅಂತ ಎಲ್ಲಾ ಹೇಳಿದೀನಲ್ಲ, ನೀನೂ ನನ್ನನ್ನು ಲವ್ ಮಾಡ್ತೀಯ ತಾನೇ...?"

"ಅದೇ ನನಗೆ ಗೊತ್ತಿರ್ಲಿಲ್ಲ. ನೆನ್ನೆ ನನಗೆ ಏನಾದ್ರೂ ಹೇಳೋಕು ಅವಕಾಶ ಕೊಡಲಿಲ್ಲ ನೀವು..." ಮುದ್ದು ಮುದ್ದಾಗಿ ನುಡಿದವಳನ್ನೇ ನೋಡಿದ.

"ಅಷ್ಟು ಸ್ವೀಟ್ ಆಗಿದ್ದೆ ನೀನು... ನಿನ್ನ ಮಾತನ್ನೇ ಕೇಳ್ತಾ ಇದ್ದಿದ್ರೆ ಆ ಅನುಭವ ಸಿಗ್ತಿತ್ತಾ ! ... ನಿನಗೂ ಆ ಸುಖ ಬೇಕು ಅಂತ ಅನ್ನಿಸಿತ್ತು ಅಲ್ವಾ ?"

"ಏನೋ ನಂಗೊತ್ತಿಲ್ಲ" ನಾಚಿದವಳನ್ನು ಬಾಚಿ ತಬ್ಬಿಕೊಂಡ.

"ಯೂ ಡೋಂಟ್ ವರಿ... ನಾನು ಮಮ್ಮಿ ಹತ್ತಿರ ಮಾತನಾಡ್ತೀನಿ"

"ಬೇಡ. ಬೇಡ. ಇವತ್ತೇ ಬೇಡ. ಆಂಟಿಗೆ ಅನುಮಾನ ಬರುತ್ತೆ"

"ಬಂದರೆ ಬರಲಿ. ನಿಜ ಹೇಳಿದ್ರಾಯ್ತು..."

"ಬೇಡ ಸಂಕೇತ್..." ಅವನ ಬಾಯಿ ಮೇಲೆ ಕೈಯನಿಟ್ಟಳು.

"ಯಾಕೆ ಅಂತ ಕೇಳಬಹುದಾ ಡಿಯರ್ ?"

''ಮೊದಲು ನಮ್ಮ ಅಕ್ಕನ ಮದುವೆ ನಡೆಯಲಿ. ಇಲ್ಲದೇ ಇದ್ದರೆ... ಏನಾದ್ರೂ ಆಡಿಕೊಳ್ತಾರೆ...''

''ಓ...ಕೇ... ನಿನಗೆ ನನಗಿಂತ, ಅವರುಗಳೇ ಹೆಚ್ಚು... ನಿನಗೆ ಯಾವಾಗಬೇಕೋ ಆವಾಗಲೇ ಮದುವೆಯಾಗೋಣ... ಆದರೆ ನಾನು ಹತ್ತಿರ ಬಂದಾಗ ಮಾತ್ರ ಆಚೆ ತಳ್ಳಬೇಡ. ನನಗೆ ಕೋಪ ಬಂದರೆ ದೂರ್ವಾಸನ ತರಹ. ಏನು ಮಾಡ್ತೀನೋ, ಏನು ಆಡ್ತೀನೋ ನನಗೇ ಗೊತ್ತಿಲ್ಲ.'' ನಕ್ಕ

''ನನಗೆ ನಿಮ್ಮ ಮೇಲೆ ನಂಬಿಕೆ ಇದೆ ಸಂಕೇತ್. ಆದರೂ...''

''ಆದರೂ, ಆದರೂ ಅಂತ ವಿಪರೀತ ಸತಾಯಿಸ್ತೀಯ... ಈಗ ನಗು ನಗುತ್ತಾ ಒಂದು ಮುತ್ತು ಕೊಡು'' ಅವನು ತುಟಿಗಳನ್ನು ಮುಂದೆ ತಂದ. ಸುಮತಿ ಅವನ ಮುಖದ ಬಳಿಗೆ ತನ್ನ ಮುಖವನ್ನು ತಂದಳು ಅವನು ಕಣ್ಣು ಮುಚ್ಚಿ ಚುಂಬನಕ್ಕಾಗಿ ಕಾದ. ಅವಳು ತುಟಿಗೆ ತುಟಿ ತಗುಲಿಸಿದಳು. ಅವನು ತನ್ನೆಡೆಗೆ ಎಳೆದುಕೊಂಡ. ಅವಳು ಮಮ್ಮಿ ಮಮ್ಮೀ...'' ಎಂದೊಡನೆ ಅವನು ಹಿಡಿತವನ್ನು ಸಡಿಲಿಸಿದ. ಅವಳು ಕಿಲಕಿಲನೆ ನಗುತ್ತಾ ಕೆಳಗಿಳಿದು ಬಂದಳು...'' ಒಬ್ಬಳೇ ಕೈಗೆ ಸಿಗು... ನೋಡ್ಕೋತೀನಿ'' ಎನ್ನುತ್ತಾ ಅವನೂ ಕೆಳಗಿಳಿದು ಬಂದ. ಒಬ್ಬರ ಹಿಂದೆ ಒಬ್ಬರು, ನಗುನಗುತ್ತಾ ಕೆಳಗಿಳಿದು ಬಂದುದನ್ನು ಜಾನಕಿ ಗಮನಿಸಿದಳು. ಸುಮತಿಯ ಮುಖ ಕೆಂದಾವರೆಯಂತೆ ಅರಳಿದೆ. ಸಂಕೇತ ಎಂದೂ ಇಷ್ಟು ಖುಷಿಯಾಗಿದ್ದಂತೆ ಕಂಡಿಲ್ಲ... ಏನೋ ಗುಟ್ಟಿದೆ. ಅನುಮಾನದ ಅಲೆ ಚಲಿಸಿತು. ಅವರಿಬ್ಬರನ್ನೇ ಗಮನಿಸತೊಡಗಿದಳು... ಒಂದು ರಾತ್ರಿಯೊಳಗೆ ಇಷ್ಟು ಬದಲಾವಣೆ. ಇಬ್ಬರ ಮಧ್ಯೆ ಏನೋ ನಡೆದಿದೆ ಎಂದು ಖಚಿತವಾಗಿತ್ತು.

''ಇವತ್ತು ಕಾಲೇಜಿಗೆ ಹೋಗುಲ್ವ ಸುಮತೀ...'' ಸುಮತಿ ಸಂಕೇತನ ಕಡೆ ನೋಡಿದಳು. ಅವನು ಕಣ್ಣು ಸನ್ನೆ ಮಾಡಿದ.

''ಇಲ್ಲ ಆಂಟೀ ಇವತ್ತು ರಜ ಹಾಕಿದೀನಿ'' ಸಂಕೇತ ನಕ್ಕ.

''ಮದುವೆ ಮನೆಯ ಓಡಾಟದ ಆಯಾಸ ಜಾಸ್ತಿ ಆಗಿರಬಹುದು''

''ಹೌದು ಆಂಟೀ... ಎರಡು ದಿನದಿಂದ ಸರಿಯಾಗಿ ನಿದ್ದೇನೇ ಇಲ್ಲ.''

''ಒಳ್ಳೇದಾಯ್ತು ರೆಸ್ಟ್ ತಗೋ... ಸಂಕೇತ ನಿನ್ನ ಪ್ರೋಗ್ರಾಂ ಏನೋ ?''

''ಆಸ್ ಯೂಷುಯಲ್ ಮನೇಲೇ ಬಿದ್ದಿರ್ತೀನಿ.''

''ಮನೇಲೇ ಬಿದ್ದಿರೋಕೆ ನಿನ್ನ ಭಕ್ತರು ಬಿಡಬೇಕಲ್ಲ''

''ಮಮ್ಮೀ... ನನ್ನ ಫ್ರೆಂಡ್ಸ್ ಮೇಲೆ ಯಾಕೆ ನಿನ್ನ ಕಣ್ಣು ?''

"ಯಾಕೆ ಅಂದ್ರೆ... ನಿನ್ನನ್ನ ಉಸಿರಾಡುಕ್ಕೆ ಸಹ ಬಿಡದೆ ಹಾಗೆ ಎಳೆದುಕೊಂಡು ಹೋಗ್ತಾರಲ್ಲ, ಅದಕ್ಕೇ ಹೇಳಿದೆ... ನೋಡಪ್ಪಾ, ನೆನೆದವರ ಮನದಲ್ಲಿ ಎನ್ನೋ ಹಾಗೆ ನಿನ್ನ ಭಕ್ತರು ಬಂದೇ ಬಿಟ್ಟರು..." ಸಂಕೇತ ತಿರುಗಿ ನೋಡಿದ. ಹರೀಶ ಗೋಪಾಲನೊಡನೆ ಬಂದಿದ್ದ. ಈ ದಿನ ಅವನ ಆಗಮನ ಇವನಿಗೆ ಬೇಕಾಗಿರಲಿಲ್ಲ. ತುಥ್ ಎಂದು ಬೈದುಕೊಂಡು ಸುಮತಿಯ ಕಡೆ ನೋಡಿದ. ಇದನ್ನೆಲ್ಲಾ ಜಾನಕಿ ಗಮನಿಸಿದಳು. ಸುಮತಿ ತುಂಟನಗೆ ನಕ್ಕಿದ್ದಳು.

"ಹಲೋ ಮೇಡಂ... ಹೇಗಿದೀರಿ ! ಕಾಲೇಜಿಲ್ವಾ !" ಹರೀಶ ಮುಲಾಜಿಲ್ಲದೇ ಮಾತನಾಡಿಸಿದ್ದ. ಎರಡು ಹೆಜ್ಜೆ ಮುಂದೆ ಬಂದಿದ್ದ

"ಇವತ್ತೇನು ಪ್ರೋಗ್ರಾಂ ?" ಸಂಕೇತ ಅವನನ್ನು ಅಲ್ಲಿಯೇ ತಡೆದ.

"ಇವತ್ತು ಬೇರೆ ಏನೂ ಪ್ರೋಗ್ರಾಂ ಇರಲಿಲ್ಲ... ಸೀದಾ ಇಲ್ಲಿಗೇ ಬಂದೆವು... ನೀನು ಪ್ರೋಗ್ರಾಂ ಹಾಕಿದರೆ ಹೋಗೋಣ... ನೀವೂ ಬರ್ತೀರಾ ಮೇಡಂ."

"ಇಲ್ಲ, ಮೇಡಂ ಯಾಕೆ ? ಅವರಿಗೆ ಕಾಲೇಜಿದೆ" ಸುಮತಿ ಕಣ್ಣರಳಿಸಿದಳು. ಜಾನಕಿ ಬೆರಗಾಗಿ ಮಗನನ್ನೇ ನೋಡಿದಳು. ಏನೋ ಜಾದು ನಡೆಯುತ್ತಿದೆ ಅಂತ ಅಂದುಕೊಂಡಳು.

"ನಡೀ ಹಾಗಾದ್ರೆ, ಯಾವುದಾದರೂ ನೂನ್‌ಷೋಗೆ ಹೋಗೋಣ. ರೆಕ್ಸ್‌ನಲ್ಲಿ ಹೊಸ ಮೂವಿ ಬಂದಿದೆ."

"ನಂಗೆ ಯಾಕೋ ತಲೆನೋವು. ರಾತ್ರಿ ಸ್ವಲ್ಪ ಡ್ರಿಂಕ್ಸ್ ಜಾಸ್ತಿಯಾಯ್ತು... ಹ್ಯಾಂಗ್ ಓವರ್" ತಾಯಿಗೆ ಕೇಳಿಸದಂತೆ ನುಡಿದ.

"ಯೂ ಚೀಟ್... ಒಬ್ಬನೇ ಕುಡಿದ್ಯೇನೋ ... ?"

"ಷ್ ಮೆಲ್ಲಗೆ ಮಮ್ಮೀಗೆ ಕೇಳಿಸುತ್ತೆ..."

"ಆಂಟಿ ಅಡಿಗೆ ಮನೇಲಿದಾರೆ... ಹೋಗಲಿ ಬ್ರೇಕ್‌ಫಾಸ್ಟ್ ಆಯ್ತಾ ?"

"ಇನ್ನೂ ಇಲ್ಲಪ್ಪಾ... ಈಗಿನ್ನು ಏಳ್ತಾ ಇದೀನಿ" ಆಕಳಿಸುತ್ತಾ ಮೈಮುರಿದ.

"ಏನೋ ಮೈಯೆಲ್ಲಾ ಪರ್‌ಫ್ಯೂಮ್ ವಾಸನೆ. ಯಾವ ಹೂವಿನ ಹತ್ತಿರ ಹೋಗಿದ್ದೆ...?" ಕಣ್ಣು ಹೊಡೆದು ಕೇಳಿದಾಗ ಸಂಕೇತ ಎಗರಿಬಿದ್ದ.

"ಷಟಪ್... ಇದು ಮನೆ, ಕ್ಲಬ್ ಅಲ್ಲ."

"ಸಾರಿ. ಫ್ರೆಂಡ್... ಏನೋ ಛೇಂಜ್ ಕಾಣಿಸ್ತು... ಮನೇಲಿ ಈ ಮಾತೆಲ್ಲ ಬೇಡಾಂತ ಅಂದ್ರೆ ಹೊರಗೆ ಬಾ ಹೊರಗೇ ಮಾತನಾಡೋಣ."

"ಇವತ್ತು, ನಾನು ಹೊರಗೆ ಎಲ್ಲಿಯೂ ಬರೋ ಮೂಡ್‌ನಲ್ಲಿಲ್ಲ. ಮಾತನಾಡುವ ಮೂಡ್‌ನಲ್ಲೂ ಇಲ್ಲ" ಸಿಡುಕಿದ.

"ಓ... ಕೆ... ಓ... ಕೇ... ಫರ್ಗೆಟ್ ಇಟ್... ಹಾಗಾದ್ರೆ ಈಗ ಏನು ಮಾಡೋದು ?"

"ನೀನೂ ಗೋಪಿ ಇಬ್ಬರೂ ಪಿಕ್ಚರಿಗ ಹೋಗಿ. ನನಗೋಸ್ಕರ ನೀವ್ಯಾಕೆ ಮಿಸ್ ಮಾಡಿಕೊಳ್ತೀರಾ ?"

"ಘಾಟಿ ಕಣೋ ನೀನು... ಅಂತೂ ನಮ್ಮಿಬ್ಬರನ್ನೂ ಸಾಗಿ ಹಾಕ್ತಿದೀಯ... ರಿಯಲಿ ಸಂಥಿಂಗ್ ಈಸ್ ಕುಕಿಂಗ್..."

"ಕುಕಿಂಗೂ ಇಲ್ಲ, ಪ್ಯಾಕಿಂಗೂ ಇಲ್ಲ. ಜಸ್ಟ್ ಲೀವ್ ಮೀ ಅಲೋನ್"

"ಓ...ಕೇ. ಫ್ರೆಂಡ್. ಗೋಕರ್ಣದ ಟ್ರಿಪ್‌ನ ಹೊತ್ತಿಗಾದ್ರೂ ರಿಲಾಕ್ಸ್ ಆಗಿರು... ಆಮೇಲೆ ಕೈ ಕೊಡಬೇಡ. ದಿನೇಶನಿಗೆ ಹರ್ಟ್ ಆಗುತ್ತೆ."

"ಯಾಕೋ ಹೀಗೆ ಸತಾಯಿಸ್ತಿದೀಯ... ನನಗೂ ಗೊತ್ತು... ನಾನು ಈಗ ಬಂದೆ. ಒಟ್ಟಿಗೇ ತಿಂಡಿ ತಿನ್ನೋಣ..." ಎನ್ನುತ್ತಾ ಅಡಿಗೆ ಮನೆಯ ಕಡೆಗೆ ಬಂದ.

"ಮಮ್ಮೀ ಏನು ತಿಂಡಿ ?"

"ಶ್ಯಾವಿಗೆ ಬಾತ್ ಮಾಡಿದೀನಿ. ಪೊಂಗಲ್ ಮಾಡಿದೀನಿ... ಕೊಡ್ಲಾ?"

"ನನಗೂ ಕೊಡು. ನನ್ನ ಭಕ್ತರಿಗೂ ಕೊಡು. ಚರ್ಪು ಇಲ್ಲದೇ ಅವರುಗಳು ಹೋಗುವುದಿಲ್ಲ... ಈಗ್ಬಂದೆ ಎಂದು ಹೇಳಿ ಸರಸರನೆ ಮೆಟ್ಟಿಲು ಹತ್ತಿದ. ಸುಮತಿ ಕಾಲೇಜಿಗೆ ಹೋಗಲು ಸಿದ್ಧಳಾಗಿದ್ದಳು. ಅವಳ ಎದುರಿಗೆ ನಿಂತ.

"ನಥಿಂಗ್ ಡುಯಿಂಗ್... ಕಾಲೇಜಿಗೆ ಹೋಗಬೇಡ ಅಂತ ಹೇಳಿರಲಿಲ್ಲವಾ !"

"ನಿಮ್ಮ ಫ್ರೆಂಡ್ ಹತ್ತಿರ, ಮೇಡಂ ಕಾಲೇಜಿಗೆ ಹೋಗ್ತಾರೆ ಅಂತಂದ್ರೀ..." ಕಿಲಕಿಲನೆ ನಕ್ಕಳು.

"ಅವನೊಬ್ಬ ಈಡಿಯೆಟ್... ಅವನಿಗ್ಯಾಕೆ ನಿನ್ನ ವಿಷಯ...? ನೀನು ಕಾಲೇಜಿಗೆ ಹೋಗಕೂಡದು ಅಂತ ಹೇಳಿ, ಅವಳ ಸೊಂಟವನ್ನು ಬಳಸಿ, ಅವಳ ಭುಜದ ಮೇಲೆ ಮುಖವನ್ನಿಟ್ಟ..."

"ಬಾಗಿಲು ತೆಗೆದೇ ಇದೆ. ಯಾರಾದ್ರೂ ಬಂದರೇ..."

"ಬಂದರೆ ಹಾಗೇ ಹಿಂದಕ್ಕೆ ಹೋಗ್ತಾರೆ... ಅವರಿಬ್ಬರನ್ನು ಕಳಿಸಿಬಿಟ್ಟು ಮತ್ತೆ ಬರ್ತೀನಿ... ಅಲ್ಲೀವರೆಗೂ ಇಲ್ಲೇ ಇರು" ಎಂದು ಹೇಳಿ ಕೆನ್ನೆಗೆ ಮುತ್ತನ್ನಿತ್ತ. ಸುಮತಿ ಹುಸಿ ಮುನಿಸು ತೋರಿದಳು.

''ನನ್ನ ಮೇಕಪ್ ಎಲ್ಲಾ ಹಾಳಾಯ್ತು...''

''ಯಾರಿಗೋಸ್ಕರ ಮಾಡಿಕೊಂಡಿದ್ದೆ. ನನಗೋಸ್ಕರ ತಾನೇ ?'' ಎನ್ನುತ್ತಾ ಮುಖದ ತುಂಬಾ ಚುಂಬನದ ಮಳೆಯನ್ನು ಸುರಿಸಿದ. ಎರಡು ಕಣ್ಣುಗಳು ತಮ್ಮ ಈ ಸರಸವನ್ನು ನೋಡುತ್ತಿವೆ ಎನ್ನುವುದು ಅವರಿಬ್ಬರ ಗಮನಕ್ಕೆ ಬರಲಿಲ್ಲ. ಸಂಕೇತ ಕೆಳಗಿಳಿದು ಬರುವಷ್ಟರಲ್ಲಿ ಜಾನಕಿ ತಟ್ಟೆಗಳಿಗೆ ತಿಂಡಿಯನ್ನು ಹಾಕಿಟ್ಟಿದ್ದಳು.

''ಸುಮತಿ ಎಲ್ಲಿ? ಕಾಲೇಜಿಗೆ ಹೊರಟು ಹೋದ್ಲಾ?''

''ನಂಗೊತ್ತಿಲ್ಲ...'' ಎಂದು ಹೇಳಿ ಸ್ನೇಹಿತರೊಡನೆ ತಿಂಡಿಯ ತಟ್ಟೆಗೆ ಕೈ ಹಾಕಿದ...'' ಈ ಜಗ್ಗೂ ಎಲ್ಲಿ ಹೋದನೋ ಎಂದುಕೊಂಡು ಜಾನಕಿ ಅವನಿಗಾಗಿ ಎಲ್ಲಾ ಕಡೆಯೂ ಹುಡುಕಿದಳು.

ತಿಂಡಿಯ ನಂತರ, ಸಂಕೇತ ಸ್ನೇಹಿತರಿಬ್ಬರನ್ನು ಕಳಿಸಲು ನೋಡಿದ. ''ನೀವಿಬ್ರೂ ಹೋಗಿರಿ ನಾನು ಆಮೇಲೆ ಬರ್ತೀನಿ.''

''ಯಾಕೋ, ಕಳಿಸುವ ಮೂಡ್‌ನಲ್ಲೇ ಇರ್ತೀಯಲ್ಲ, ಮುಂಚೆ ನೀನು ಹೀಗಿರಲಿಲ್ಲಪ್ಪಾ...'' ಹರೀಶ ನೇರವಾಗಿ ಆಕ್ಷೇಪಿಸಿದ.

''ಸದಾ ಒಂದೇ ತರಹ ಇರೋಕ್ಕಾಗುತ್ತಾ ನೀವೇ ಹೇಳ್ತಿರ್ತೀರಿ. ನಾನು ಬದಲಾಗಿದೀನೀಂತ.''

''ನೀನೇ ಬದಲಾದೆಯೋ ? ಯಾರಾದ್ರೂ ಬದಲಾಯಿಸಿದರೋ...?''

''ಹೇಗಾದ್ರೂ ತಿಳ್ಕೋ. ನೋ ಮೋರ್ ಕ್ವೆಶ್ಚನ್ಸ್... ನಾನು ಸ್ನಾನ ಮಾಡಿ, ರೆಡಿಯಾಗ್ತೀನಿ. ರೆಕ್ಸ್‌ಗೆ ಹೋಗಿ ಟಿಕೆಟ್ ತಗೋ... ನಾನು ಬಂದು ಜಾಯಿನ್ ಆಗ್ತೀನಿ'' ಅವರಿಬ್ಬರನ್ನು ಕಳಿಸಿ ತಾನು ರೆಡಿಯಾಗಲು ಬಂದ. ಸುಮತಿ ಯಾರೊಡನೆಯೋ ಮಾತನಾಡುತ್ತಿರುವುದು ಕೇಳಿಸಿತು. ''ಚುಮ್ಮೀ... ಯಾರ ಜೊತೆ ಮಾತನಾಡ್ತಿದೀಯ ?'' ಎನ್ನುತ್ತಾ ಬಾಗಿಲ ಬಳಿಗೆ ಬಂದವನು, ಒಳಗೆ ಕೂತಿದ್ದ ಜಗ್ಗುವನ್ನು ಕಂಡು ಕಿರುಚಿದ. ''ಇಲ್ಲೇನು ಮಾಡ್ತಿದೀಯೋ ಎದ್ದು ನಡೀ ಹೊರಗೆ'' ಸುಮತಿ ಬೆಚ್ಚಿಬಿದ್ದಳು. ಜಗ್ಗು ಕಷ್ಟಪಟ್ಟು ಎದ್ದುನಿಂತು, ಬೆದರುತ್ತಾ ನಿಂತ.

''ಸುಮತೀ ಅವನೇನ್ಮಾಡ್ತಿದಾನೆ !''

''ಏನೂ ಇಲ್ಲ...''

''ಅವನನ್ನು ಕಳಿಸು ಹೊರಗೆ... ಏಯ್ ನಡೆಯೋ ಆಚೆಗೆ'' ಜಗ್ಗು ಅಡ್ಡಡ್ಡ ಹೆಜ್ಜೆ ಹಾಕುತ್ತಾ ಹೊರಗೆ ಬಂದ.

''ಈ ದರಿದ್ರವನ ಮುಖ ನೋಡಿದ ಕೂಡಲೇ ಮೂಡೇ ಆಫ್ ಆಗಿ ಹೋಗುತ್ತೆ. ಅವನನ್ನ ಸೇರಿಸಬೇಡ ನಿನ್ನ ರೂಮಿಗೆ.''

"ನಾನೇನು ಕರೆಯಲಿಲ್ಲ, ಅವನೇ ಬಂದಿದ್ದ. ಅದಕ್ಯಾಕಿಷ್ಟು ಕೋಪ ? ಬಿ.ಪಿ. ಏರುತ್ತೆ ಅಷ್ಟೇ..." ನಗಿಸಲು ನೋಡಿದಳು.

"ಸುಮ್ಮನಿರು. ನೀನು ಅವನ ಪರ ವಹಿಸಿ ಮಾತನಾಡಬೇಡ. ನನಗೆಲ್ಲ ಗೊತ್ತು. ಅವನನ್ನು ಎಲ್ಲಿಟ್ಟಿರಬೇಕೋ, ಅಲ್ಲಿಟ್ಟಿರಬೇಕು" ಮುಖ ಕೆಂಪಗೆ ಮಾಡಿಕೊಂಡು ಸಂಕೇತ ಹೊರಟು ಹೋಗಿದ್ದ. ಈಗ ಸಂಕೇತನನ್ನು ಸಮಾಧಾನಗೊಳಿಸಬೇಕೋ ಜಗ್ಗೂಗೆ ತಿಳುವಳಿಕೆ ಹೇಳಬೇಕೋ ತಿಳಿಯದಾಗಿತ್ತು.

ಊಟದ ಸಮಯದಲ್ಲಿ ಸುಮತಿ ಕೆಳಗಿಳಿದು ಬಂದಾಗ, ಜಾನಕಿ, ಅಚ್ಚರಿಗೊಂಡಳು ನೀನು ಮನೇಲೇ ಇದ್ದೀಯಾ ? ಮಲಗಿದ್ಯಾ ?"

"ಹುಂ. ತಿಂಡಿ ತಿಂದ ಕೂಡಲೇ ನಿದ್ದೆ ಬಂದು ಬಿಟ್ಟಿತು."

"ಈ ಜಗ್ಗು ಎಲ್ಲಿ ಹೋದನೋ ಊಟದ ಹೊತ್ತಾಯ್ತು... ಆಚೆ ಇದಾನಾ ನೋಡು." ಸುಮತಿ ಅವನನ್ನು ಹುಡುಕಿದಳು. ಅವನು ಮಹಡಿ ಮೆಟ್ಟಿಲ ಕೆಳಗೆ ಅವಿತಿಟ್ಟುಕೊಂಡಿದ್ದ ಸುಮತಿ ಕರೆದರೂ ಅವನು ಹೊರಕ್ಕೆ ಬರಲಿಲ್ಲ. ಜಾನಕಿಯೇ ಬಂದಳು.

"ಇಲ್ಲಿ ಯಾಕೆ ಅಡಗಿದೀಯೋ, ಎದ್ದು ಹೊರಗೆ ಬಾ... ಇಲ್ಲದಿದ್ದರೆ ಸೌಟು ಕಾಯಿಸಿ ಬರೆ ಹಾಕಿಬಿಡ್ತೀನಿ."

"ಆಂಟೀ... ನೀವೂ ಬೈಯ ಬೇಡಿ ಅವನನ್ನು... ಉಪಾಯವಾಗಿ, ನಯವಾಗಿ ಮಾತನಾಡಿಸಿ"

"ಈಗ ಯಾರು ಬೈದರು ಇವನನ್ನು ? ಸಂಕೇತನ ? ಅವನೆದುರಿಗೆ ಯಾಕೆ ಬಂದಿದ್ದ ಇವನು ? ಎಷ್ಟು ನೋಡಿಕೊಳ್ತೀನಿ, ಇವನನ್ನ ಅವನ ಕಣ್ಣಿಗೇ ಬೀಳದಂತೆ... ಯಾವುದೋ ಮಾಯದಲ್ಲಿ ಹೊರಗೆ ಬಂದು ಬಿಡ್ತಾನೆ... ಅವನೂ ಯಾಕೆ ಹಾಗಾಡ್ತಾನೋ... ಇಬ್ಬರೂ ಸಾಕು ಮಾಡ್ತಾರೆ..." ಸುಮತಿ ಮಾತನಾಡಲಿಲ್ಲ.

ನೂನ್‌ಷೋ ನಂತರ ಅಲ್ಲಿ ಇಲ್ಲಿ ತಿರುಗಾಡಿ, ಸಂಕೇತ ವಾಪಸ್ಸಾದ. ಸುಮತಿ ಕೈಯಲ್ಲಿ ಯಾವುದೋ ಕಥೆ ಪುಸ್ತಕ ಹಿಡಿದು ಕುಳಿತಿದ್ದಳು. ಹಿಂದಿನಿಂದ ಕಳ್ಳನಂತೆ ಬಂದು, ಅವಳ ಕಣ್ಣುಗಳನ್ನು ಮುಚ್ಚಿದ. ಅವಳು ಸಣ್ಣಗೆ ಚೀರಿದಳು. "ಏಯ್... ನಾನು... ಹೆದರಿಬಿಟ್ಯಾ ?" ಏನು ಓದ್ತಾ ಇದ್ದೆ ಎನ್ನುತ್ತಾ ಅವಳ ಕೈಲಿದ್ದ ಪುಸ್ತಕವನ್ನು ತೆಗೆದಿಟ್ಟ

"ಹೆದರಿಕೆ ಆಗದೇ ಇರುತ್ತಾ ? ಹೀಗೆ ಗುಟ್ಟಾಗಿ ಕಳ್ಳನ ಹಾಗೆ ಬಂದು ಕಣ್ಣು ಮುಚ್ಚಿದರೆ?"

"ಓ...ಕೆ... ನಾನು ಕಳ್ಳನೂ ಅಲ್ಲ, ಗುಟ್ಟಾಗಿ ಏನೂ ಮಾಡುವುದಿಲ್ಲ. ಹೀಗೆ ಓಪನ್ನಾಗಿ ಲವ್ ಮಾಡ್ತೀನಿ" ಅವಳನ್ನು ತನ್ನೆಡೆಗೆ ಎಳೆದುಕೊಂಡ.

''ಎಲ್ಲಿಗೆ ಹೋಗಿದ್ರಿ ನೀವು ? ನನಗೆ ಮಾತ್ರ ಕಾಲೇಜಿಗೆ ಹೋಗಬೇಡಾಂದ್ರಿ''

''ನೂನ್ ಷೋಗೆ ಹೋಗುಕ್ಕೆ ಇಷ್ಟವಿರಲಿಲ್ಲ. ಆದರೂ ನಿನಗೋಸ್ಕರವೇ ಹೋಗಿದ್ದು...''

''ನನಗೋಸ್ಕರಾನಾ ?''

''ನಿನಗೆ ನೆನ್ನೆ ರಾತ್ರಿ ನಿದ್ದೆ ಇರಲಿಲ್ಲ. ಮಧ್ಯಾಹ್ನ ನಿದ್ದೆ ಮಾಡಿದ್ಯಾ ?''

''ಹುಂ. ಸ್ವಲ್ಪ ಹೊತ್ತು ಮಲಗಿದ್ದೆ. ಆದರೆ ಚೆನ್ನಾಗಿ ನಿದ್ದೆ ಬರಲಿಲ್ಲ.''

''ಯಾಕೆ ನಾನು ಪಕ್ಕದಲ್ಲಿ ಇರಲಿಲ್ಲ... ಅದಕ್ಕಾ ? ಅವಳ ಮೂಗನ್ನು ಹಿಂಡಿದ.''

''ಥೂ... ಹಾಗಲ್ಲ. ನನಗೆ ಮಧ್ಯಾಹ್ನದ ಹೊತ್ತು ನಿದ್ದೆ ಮಾಡಿ ಅಭ್ಯಾಸವಿಲ್ಲ. ಸುಮ್ಮನೇ ಮಲಗಿದ್ದೆ ಅಷ್ಟೇ'' ಅವನ ತೋಳುಗಳು ಅವಳನ್ನು ಬಳಸಿದವು.

ಹೀಗೇ ಐದಾರು ದಿನಗಳು ಕಳೆದವು. ಸಂಕೇತ ಸುಮತಿ ಒಬ್ಬರನ್ನೊಬ್ಬರು ಗಾಢವಾಗಿ ಪ್ರೀತಿಸಲು ತೊಡಗಿದ್ದರು. ಸಂಕೇತನ ಸಿಡುಕು, ದುಡುಕುಗಳನ್ನೆಲ್ಲ ಸುಮತಿ ಸಹಿಸಿಕೊಂಡಿದ್ದಳು. ಅವನು ಹತ್ತಿರ ಬಂದಾಗ, ಅವನ ಅವಗುಣಗಳೆಲ್ಲ ಮರೆತು ಹೋಗುತ್ತಿದ್ದವು. ಸುಮತಿ ಇಲ್ಲದೇ ತನಗೆ ಲೈಫ್‌ನಲ್ಲಿ ಅರ್ಥವೂ ಇಲ್ಲ. ಅವಳಿಗಾಗಿ ಸರ್ವಸ್ವವನ್ನು ಕೊಡಬಲ್ಲೆ ಎಂದುಕೊಂಡಿದ್ದ ಸಂಕೇತ.

''ದಿನೇಶನ ಮನೆಯವರೆಲ್ಲ ಗೋಕರ್ಣಕ್ಕೆ ಹೊರಟಿದ್ದಾರೆ. ಎರಡು ಮೂರು ದಿನ ಅಷ್ಟೇ ಬಂದು ಬಿಡ್ತೀನಿ'' ಸಂಕೇತ ಅವಳನ್ನು ಮುದ್ದಿಸುತ್ತಾ ನುಡಿದಿದ್ದ.

''ಹಾಗಾದ್ರೆ ನಾನೂ ಒಂದೆರಡು ದಿನಗಳ ಮಟ್ಟಿಗೆ ಭದ್ರಾವತಿಗೆ ಹೋಗಿ ಬರ್ತೀನಿ. ಅವರುಗಳನ್ನೆಲ್ಲ ನೋಡಿ ತುಂಬಾ ದಿನ ಆಯ್ತು.'' ಅವನ ಕೊರಳನ್ನು ತೋಳಿನಿಂದ ಬಳಸಿದಳು.

''ಹಾಗೆ ಮಾಡು ಕಾಲೇಜು ?''

''ಹೆಚ್ಚು ಕಡಿಮೆ ಪೋರ್ಷನ್ಸ್ ಎಲ್ಲಾ ಮುಗಿದಿವೆ. ಸ್ಟೂಡೆಂಟ್ಸ್‌ಗಳ್ಯಾರೂ ಬರ್ತಾನೇ ಇಲ್ಲ. ಅಟೆಂಡೆನ್ಸ್ ಸಿಕ್ಕಿರುತ್ತೆ. ಕ್ಲಾಸ್‌ನಲ್ಲಿ ಇಂಟರೆಸ್ಟೇ ಇರುಲ್ಲ ಅವಕ್ಕೆ''

''ಅಂಥೋರಿಗೆ ನೀನ್ಯಾಕೆ ಪಾಠ ಹೇಳಿಕೊಡ್ತೀಯ ?''

''ಪಾಠ ಹೇಳಿಕೊಡಲಿ ಬಿಡಲಿ, ನನ್ನ ಸಂಬಳ ನನಗೆ ಸಿಗುತ್ತದೆ. ಹುಡುಗಿಯರಿಗೆ ಇಂಟರೆಸ್ಟ್ ಇಲ್ಲದಿದ್ದರೆ ನಾನೇನು ಮಡೋಕೆ ಆಗುತ್ತೆ ? ಎಲ್ಲಾ ನಿಮ್ಮ ತಂಗಿಯರೇ, ಪಾಠದಲ್ಲಿ ಇಂಟರೆಸ್ಟೇ ಇಲ್ಲ ಅವುಗಳಿಗೆ'' ಅವನ ಕೆನ್ನೆಯನ್ನು ಚಿವುಟಿದಳು.

''ಏಯ್ ಯಾರನ್ನು ಟೀಸ್ ಮಾಡ್ತಿದೀಯ. ನಾನು ಯಾವಾಗಲೂ ಬ್ರೈಟ್ ಸ್ಟೂಡೆಂಟ್ ಆಗಿದ್ದವನು. ನಾನೆಂದೂ ದಡ್ಡನಾಗಿರಲಿಲ್ಲ.''

"ನಾನೆಲ್ಲಿ ದಡ್ಡ ಅಂತಂದೆ ?"

"ಜಾಣ ಅಂತ ಹೊಗಳಲೂ ಇಲ್ಲ."

"ನಾನ್ಯಾಕೆ ಹೊಗಳಬೇಕು ? ಹೊಗಳುವಂತಹ ಕೆಲಸ ಯಾವುದನ್ನೂ ನೀವು ಮಾಡಿಲ್ಲ..." ಕಿಲಕಿಲನೆ ನಕ್ಕವಳನ್ನು ಬಲವಾಗಿ ಹಿಡಿದುಕೊಂಡ

"ಮಾಡಿಲ್ವಾ ? ಮಾಡಿಲ್ವಾ ? ನಿನ್ನನ್ನು ಪ್ರೀತಿಸ್ತಿಲ್ವಾ ? ಎಷ್ಟು ಮುದ್ದು ಮಾಡ್ತಾ ಇದೀನಿ" ಮತ್ತೆ ಮುತ್ತನ್ನಿಟ್ಟ...

"ಸಾಕು ಸಾಕು ಇದು ಅತಿ ಅತಿಯಾಯ್ತು. ಹೀಗೇ ಆಡ್ತಾ ಇದ್ದರೆ, ನಮ್ಮ ಪ್ರೀತಿ ಬೇಗ ಹಳತಾಗಿ ಬಿಡುತ್ತದೆ ಅಷ್ಟೇ."

"ಇಲ್ಲ ಸುಮತೀ ಹಾಗೆ ಮಾತ್ರ ಆಗಬಾರದು. ನಾವುಗಳು ಯಾವಾಗಲೂ ಹೊಸದಾಗಿ ಮದುವೆಯಾದವರಂತೆ, ಫ್ರೆಷ್ ಆಗಿರಬೇಕು." ಸುಮತಿ ಅವನ ಎದೆಗೆ ಒರಗಿಕೊಂಡಳು. ರೂಮಿನ ಬಾಗಿಲ ಎದುರಿಗಿದ್ದ ಬಾಲ್ಕನಿಯಿಂದ ಒಂದು ಜೊತೆ ಕಣ್ಣುಗಳು ಇವರಿಬ್ಬರನ್ನೇ ಗಮನಿಸುತ್ತಿದ್ದುದು ಇವರಿಬ್ಬರ ಗಮನಕ್ಕೆ ಬರಲೇ ಇಲ್ಲ, ಇಬ್ಬರೂ ತಮ್ಮ ಲೋಲಾಪ್ತಿಯಲ್ಲಿ ಮುಳುಗಿ ಹೋಗಿದ್ದರು.

"ಜಗ್ಗೂ ಜಗ್ಗೂ" ಕೆಳಗಿನಿಂದ ಜಾನಕಿ ಕರೆದ ಸದ್ದು ಕೇಳಿದಾಗ, ಸಂಕೇತ ಮಲಗಿದ್ದಲ್ಲಿಂದಲೇ ದೀಪವನ್ನು ಆರಿಸಿದ್ದ. ಕತ್ತಲೆಯಲ್ಲೇ ಎದ್ದು ಬಂದು ರೂಮಿನ ಬಾಗಿಲನ್ನು ಭದ್ರ ಪಡಿಸಿದ್ದ. ಸುಮತಿ ಅವನ ತೋಳ್ತೆಕ್ಕೆಯಲ್ಲಿ ಮುಲುಗಿದಳು.

ಸಂಕೇತ, ದಿನೇಶನ ಮನೆಯವರೊಂದಿಗೆ, ಗೋಕರ್ಣಕ್ಕೆ ಹೊರಟಿದ್ದ ಅದೇ ರಾತ್ರಿ ಸುಮತಿಯೂ ಭದ್ರಾವತಿಗೆ ಹೊರಟಳು.

"ಅದೇನು ಇದ್ದಕ್ಕಿದ್ದ ಹಾಗೆ ಊರಿಗೆ ಹೊರಟಿದೀಯ. ಊರ್ನಿಂದ ಫೋನು ಬಂದಿತ್ತಾ ?"

"ಕಾಲೇಜಿನಲ್ಲಿ ಕ್ಲಾಸುಗಳೇ ಸರಿಯಾಗಿ ನಡೆಯುತ್ತಿಲ್ಲ, ಅಕ್ಕನ ಮದುವೆ ಗೊತ್ತಾಗಿದೆಯಲ್ಲ, ಒಂದೆರಡು ದಿನ ಅವಳ ಜೊತೆ ಇದ್ದು ಬರೋಣ ಅಂತ."

"ಸಂಕೇತನೂ ಮನೇಲಿರುಲ್ಲ, ನಾನು ಜಗ್ಗೂ ಇಬ್ಬರೇ... ಸಂಕು ಬಂದ ಮೇಲೆ ಇವನೂ ಒಂಥರಾ ಆಗಿಬಿಟ್ಟಿದಾನೆ. ಯಾವಾಗ ನೋಡಿದರೂ, ಮಹಡಿ ಕೆಳಗೋ ಬಾಲ್ಕನಿಯಲ್ಲೋ ಅವಿತಿಟ್ಟುಕೊಂಡಿರುತ್ತಾನೆ. ಸಂಕೇತನಿಗೆ ಹೆದರ್ತಾನೆ. ಸಂಕೇತ ಬರೋಕೆ ಮೊದಲು ಆರಾಮವಾಗಿದ್ದ. ಈಗಂತೂ ನನಗೆ ಇವನನ್ನು ಹುಡುಕೋದೇ ಕೆಲಸವಾಗಿ ಹೋಗಿದೆ. ನೆನ್ನೆ ರಾತ್ರಿ, ನಾನು ಕರೆದ ಮೇಲೆ, ಅದೆಲ್ಲಿದ್ದನೋ, ಮಹಡಿಯ ಮೆಟ್ಟಿಲುಗಳಿಂದ ಇಳಿದು ಬಂದ. ಬೈದು ಹೊಡೆದು ಮಾಡಿದರೆ, ಸಂಕೇತನಿಗೆ ಎಚ್ಚರವಾಗುತ್ತೆ ಅಂತ ಸಹಿಸಿಕೊಂಡೆ' ಸುಮತಿ ತಣ್ಣಗಾಗಿದ್ದಳು.

"ಬೇಗ ಬಂದು ಬಿಡು ಸುಮತಿ, ಸಂಕೇತ ಯಾವಾಗ ಬರ್ತಾನೋ ಏನೋ..." ಸುಮತಿ ತಲೆಯಾಡಿಸಿದಳು. ತನಗಿಂತ ಮುಂಚೆ ಸಂಕೇತ ಬಂದು ತನಗಾಗಿ ಕಾಯುತ್ತಾ ಇರುತ್ತಾನೆಂದು ಅವಳಿಗೆ ಗೊತ್ತು. ಆದರೆ ಇನ್ನು ಮುಂದೆ ತಾವಿಬ್ಬರೂ ಹುಶಾರಾಗಿರಬೇಕು. ಜಗ್ಗು ತಮಗೆ ತಿಳಿಯದಂತೆ ತಮ್ಮ ಹಿಂದೆ ಹಿಂದೆಯೇ ಇರುತ್ತಾನೆಂಬ ಅನುಮಾನ ಬಂದಿತ್ತು.

ಭದ್ರಾವತಿಯಿಂದ ಎರಡೇ ದಿನಕ್ಕೆ ವಾಪಸ್ಸಾಗಿದ್ದಳು. ವರದಕ್ಷಿಣೆ ಕೊಡಲಾಗುವುದಿಲ್ಲವೆಂದು, ತಂದೆ ಹೇಳಿದ್ದರಿಂದ, ಹೇಮಳ ಮದುವೆ ನಿಂತು ಹೋಗಿತ್ತು. ಸುಮತಿಗೂ ವ್ಯಥೆಯಾಗಿತ್ತು. ತನ್ನ ಬಳಿಯೂ ಅಷ್ಟು ಹಣವಿಲ್ಲ. ಇದ್ದಿದ್ದರೆ, ತಾನು ಹಣ ಕೊಡುತ್ತಿದ್ದೆ. ಆದರೆ ಈಗ ಏನು ಹೇಳಿ ಏನು ಪ್ರಯೋಜನ ? ಸೂರಿಯ ಮದುವೆ ಗೊತ್ತಾಗಿತ್ತು. ಲಗ್ನ ಪತ್ರಿಕೆ ಸಹ ಆಗಿತ್ತು. ಶ್ರೀಮಂತಿಕೆ ಕೈಗೆ ಸಿಗುತ್ತಿರುವ ಅಮಲಿನಲ್ಲಿ ಸೂರಿಯ ತಲೆಯೇ ನಿಲ್ಲುತ್ತಿರಲಿಲ್ಲ. ಹೇಮ ಮಂಕಾಗಿದ್ದಳು. ಯಾಕೋ ಏನೋ ಸುಮತಿಗೆ, ಸಮಯ ಕಳೆಯುವುದೇ ಕಷ್ಟವೆನಿಸಿತ್ತು. ಎರಡು ದಿನಗಳು ಕಳೆಯುತ್ತಿದ್ದಂತೆಯೇ ಹೊರಟು ಬಿಟ್ಟಿದ್ದಳು.

ಸಂಕೇತನೂ ಅಷ್ಟೇ, ದಿನೇಶನ ತಾಯಿಯ ಕರ್ಮಾಂತರಗಳಿಗೆಂದು ಗೋಕರ್ಣಕ್ಕೆ ಬಂದಿರುವುದರಿಂದ, ಆದಷ್ಟೂ ಅವರೊಡನೆ ಬೆರೆತಿರಲು ಪ್ರಯತ್ನಿಸುತ್ತಿದ್ದ. ಆದರೂ ಮನಸ್ಸು ಮಾತ್ರ ಅಲ್ಲಿರಲಿಲ್ಲ. ಸುಮತಿಯ ಹಿಂದೆ ಮುಂದೆಯೇ ಸುತ್ತುತ್ತಿತ್ತು. ಭದ್ರಾವತಿಗೆ ಹೋಗಿಲ್ಲದಿದ್ದರೆ. ಕಾಲೇಜಿಗೆ ಹೋಗಿರುತ್ತಾಳೆ. ಕಾಲೇಜಿಗೆ ಹೋಗದೇ ಇದ್ದರೆ ಮನೆಯಲ್ಲಿ ಏನು ಮಾಡುತ್ತಿರುತ್ತಾಳೆ. ಜಗ್ಗೂ ಜೊತೆ ಕಾಲ ಕಳೆಯುತ್ತಾಳೆ. ಅದನ್ನು ಮೊದಲು ತಪ್ಪಿಸಬೇಕು. ಇಲ್ಲದಿದ್ದರೆ ನನ್ನ ಮನಸಿಸ್ಗೆ ನೆಮ್ಮದಿಯೇ ಇಲ್ಲ. ಆದಷ್ಟು ಬೇಗ ಅವಳನ್ನು ಅಮೆರಿಕಾಕ್ಕೆ ಕರೆದುಕೊಂಡು ಹೋಗಿ ಬಿಡಬೇಕು. ಈ ಸಾರಿ ಊರಿಗೆ ಹೋದ ಕೂಡಲೇ ಮಮ್ಮಿಯ ಹತ್ತಿರ ಮಾತನಾಡ್ತೀನಿ. ಎಂದು ತನಗೆ ತಾನೇ ಹೇಳಿಕೊಂಡ. ಹರೀಶ ಅವನ ಉದಾಸೀನತೆಯನ್ನು ಗಮನಿಸಿದ್ದ. ಯಾಕೋ ಹೀಗಿದೀಯ ? ಒಳ್ಳೆ ಸೀತೆಯನ್ನು ಕಳೆದುಕೊಂಡ ರಾಮನ ಥರ ?

"ಯಾವ ರಾಮ ? ಯಾವ ಸೀತೆ ? ನನಗೆ ನಿನ್ನ ಮಾತುಗಳೇ ಅರ್ಥವಾಗುಲ್ಲ."

"ನಿಜ ಹೇಳು ಸಂಕೇತ... ಯಾವುದೋ ಲವ್ ಅಫೇರ್ ನಡೀತಿದೆ ಅಂತ ನನಗನ್ನಿಸ್ತಿದೆ. ಆಮ್ ಐ ರೈಟ್ ?"

"ನನ್ನ ಬಗ್ಗೇನೇ ಚಿಂತಿಸ್ತೀಯಲ್ಲ, ನೀನು ? ನೀನೇಕೆ ಇನ್ನು ಮದುವೆಯಾಗಿಲ್ಲ... ನಿನಗೋಸ್ಕರವೂ ಯಾರಾದ್ರೂ ಸೀತೆಯೇ, ಮೈಥಿಲಿಯೋ ಕಾಯ್ತಾ ಇರಬಹುದು ಅಲ್ವಾ ?" ಹರೀಶ ಸಂಕೇತನ ಬಳಿಗೆ ಬಂದ.

"ಮೈಥಿಲಿ ನಿನಗೆ ಹೇಗೆ ಗೊತ್ತು !" ಕೇಳಿದ.

"ಮೈಥಿಲಿ ? ಯಾವ ಮೈಥಿಲಿ ? ಸುಮ್ಮನೇ ಹೇಳಿದೆ ಅಷ್ಟೇ ಸೀತೆ, ಮೈಥಿಲಿ ಯಾರೂ ನನಗೆ ಗೊತ್ತಿಲ್ಲ. ನಿನ್ನಾಣೆ..." ಕೈ ಕತ್ತಿನ ಬಳಿಗೆ ಹೋಯಿತು.

ಹರೀಶ ಗೊಳ್ಳನೆ ನಕ್ಕು ಬಿಟ್ಟ ಅವನ ನಗು ಸಂಕೇತನಿಗೆ ವಿಚಿತ್ರವಾಗಿ ಕಂಡಿತ್ತು. ಯಾಕೋ ಹೀಗೆ ನಗ್ತಿದೀಯ... ನಿನ್ನ ನಗು ನ್ಯಾಚುರಲ್ ಆಗಿಲ್ಲ.

"ಏನೂ ಇಲ್ಲ ತಮಾಷೆ ಮಾಡಿದೆ ಅಷ್ಟೇ. ಸಂಕೇತ ಸುಮ್ಮನಾಗಿ ಬಿಟ್ಟ. ಹರೀಶ ಖದೀಮ. ಅವನಿಗೆ ತನ್ನ ಸುಮತಿಯ ಸಂಬಂಧದ ಬಗ್ಗೆ ಏನೋ ಅನುಮಾನ ಬಂದಿದೆ... ಬಂದರೆ ಬರಲಿ... ಒಂದಲ್ಲ ಒಂದು ದಿನ ತಿಳಿದೇ ತಿಳಿಯುತ್ತೆ. ಆದರೆ ತಿಳಿದ ದಿನ, ಇವನ ಹೊಟ್ಟೆ ಉರಿದು ಹೋಗುವುದಂತೂ ನಿಜ..." ತನ್ನಲ್ಲೇ ನಕ್ಕ.

"ಯಾಕೋ ನಿನಗೆ ನೀನೇ ನಗ್ತಾ ಇದೀಯ ? ನಮಗೂ ಹೇಳು..." ವಿಠ್ಠಲ ಒತ್ತಾಯಿಸಿದ.

"ಈಗ ಇಲ್ಲಿ ಬೇಡ. ಊರಿಗೆ ಹೋದ ಮೇಲೆ ಹೇಳ್ತೀನಿ." ಎರಡು ದಿನ ಕಳೆಯುವಷ್ಟರಲ್ಲಿ ಅವನಿಗೂ ಬೇಸರವಾಗತೊಡಗಿತ್ತು. ಗೋಕರ್ಣ ತೀರ್ಥಕ್ಷೇತ್ರ. ಅಲ್ಲಿಗೆ ಬರುವವರಲ್ಲಿ ಭಕ್ತಾದಿಗಳೇ ಹೆಚ್ಚು. ದಿನೇಶನ ಮನೆಯವರು, ಕರ್ಮಾಂತರಗಳನ್ನು ಮಾಡಿಸಲು ಬಂದಿದ್ದರು. ಹಾಗಾಗಿ ಅವರುಗಳ ಜೊತೆ ಜೊತೆಯೇ ಇರಬೇಕಾಗಿತ್ತು. ಸಮುದ್ರದ ಕಡೆಗೆ ಒಂದೆರಡು ಬಾರಿ ಎಲ್ಲರೂ ಹೋಗಿದ್ದರು. ಅಲೆಗಳೊಡನೆ ಆಟವಾಡುವಾಗ, ಸುಮತಿಯೂ ತನ್ನ ಜೊತೆಗಿದ್ದಿದ್ದರೇ ಎಂದು ಹಂಬಲಿಸಿದ್ದ. ಎಲ್ಲರೂ ಏನೇನೋ ವಸ್ತುಗಳನ್ನು ಕೊಂಡಾಗ, ಅವನೂ ಸುಮತಿಗೆಂದು ಏನೇನನ್ನೊ ಕೊಂಡುಕೊಂಡಿದ್ದ. ಎಂದಿಗೆ ಬೆಂಗಳೂರಿಗೆ ವಾಪಸ್ಸು ಹೋಗುವೆನೋ... ಎಂದು ಕಾತುರದಿಂದ ನಿಮಿಷಗಳನ್ನು ಎಣಿಸುತ್ತಿದ್ದ.

☆ ☆ ☆

ಸಂಕೇತ ವಾಪಸ್ಸಾದಾಗ, ಸುಮತಿ ಕಾಲೇಜಿಗೆ ಹೊರಟು ಹೋಗಿದ್ದಳು ಒಂದುಗಳಿಗೆ ಬೇಸರವೆನಿಸಿದ್ದರೂ, ಸರಿ ಮಾಡಿಕೊಂಡ. ಊಟ ಮಾಡಿ ಮಲಗಿದ್ದ. ಅವನಿಗೆ ಇದ್ದಕ್ಕಿದ್ದಂತೆ ಎಚ್ಚರವಾಗಿತ್ತು. ಕೆಳಗಿನಿಂದ ಮಾತನಾಡುತ್ತಿರುವ ಧ್ವನಿ ಕೇಳಿದಂತಾಗಿತ್ತು. ಸುಮತಿಯಾಗಿದ್ದರೆ ಇಲ್ಲಿಗೇ ಬಂದಿರೋಳು... ಬೇರೆ ಯಾರೋ ಅಂದುಕೊಂಡು ಸುಮ್ಮನಾಗಿದ್ದ. ಆದರೂ ಗಮನವೆಲ್ಲ ಅಲ್ಲೇ ಇತ್ತು. ಕೆಳಗಿನಿಂದ ವಿಚಿತ್ರಧ್ವನಿಗಳು ಕೇಳಿ ಬಂದಾಗ ಕುತೂಹಲದಿಂದ ಎದ್ದು ಹೊರಗೆ ಬಂದು, ಮೆಟ್ಟಿಲ ಬಳಿ ನಿಂತ... ಕೆಳಗೆ ಏನು ನಡೆಯುತ್ತಿದೆ ಎಂದು ಅರ್ಥವಾಗಲು ಅವನಿಗೆ ಕೆಲವು ನಿಮಿಷಗಳೇ ಹಿಡಿದವು.

ಜಗ್ಗು ತನ್ನ ಪಕ್ಕದಲ್ಲಿ ಕುಳಿತಿದ್ದ ಹೆಂಗಸಿನ ಕೈಯ ಬಳೆಗಳನ್ನು ಅತ್ತಿಂದಿತ್ತ ಸರಿಸಿದ. ಬಳೆಗಳು ಝಣ ಝಣ ಸದ್ದು ಮಾಡಿದವು. ಹೆ... ಹೇ... ಎಂದುಕೇಕೆ ಹಾಕಿದ... ಇದ್ದಕ್ಕಿದ್ದಂತೆ ಆ ಹೆಂಗಸು, ತನ್ನ ಕಾಲನ್ನು ತುಸು ಎತ್ತಿ ಕಾಲಿನ ಗೆಜ್ಜೆಯನ್ನು ಮುಟ್ಟಿ ಘಲ್ ಘಲ್ ಸದ್ದು ಮಾಡಿದಳು. ಜಗ್ಗು ಚಪ್ಪಾಳೆ ತಟ್ಟಿ ನಕ್ಕ. ಜಗ್ಗು ಮತ್ತೆ ಮತ್ತೆ ಬಳೆಗಳನ್ನು ಝಣಝಣ ಎನ್ನಿಸಿದ. ಕಾಲಿನ

ಗೆಜ್ಜೆಯನ್ನು ಘಲ್‌ಘಲ್ ಎನಿಸಿದ... ಅವನು ಹಾಗೆ ನಗುತ್ತಿರುವಾಗಸುಮತಿಗೆ ಏನನ್ನಿಸಿತೋ, ಎದ್ದು ನಿಂತು, ಕೈಯಾಡಿಸಿ ಝುಣ ಝುಣ ಎನಿಸಿದಳು, ಕಾಲು ಕುಣಿಸಿ ಘಲ್ ಘಲ್ ಎನಿಸಿದಳು. ಆಗ ಸಂಕೇತನ ಗಮನ ಸುಮತಿಯ ಮೇಲೆ ಹರಿಯಿತು. ಸುಮತಿಯ ನಿಂತಿರುವ ನೃತ್ಯ ಭಂಗಿ... ಜಗ್ಗುವಿನ ವಿಕಟನಗೆ, ಅವನನ್ನು ಕೆರಳಿಸಿತು... ತಕ್ಷಣವೇ ದುಡು ದುಡು ಕೆಳಗಿಳಿದು ಬಂದ. ಸುಮತಿಯ ತೋಳನ್ನು ಹಿಡಿದು ಎಳೆದ...

"ಏನಿದು ! ಏನಿದೆಲ್ಲಾ... ಇವನ ಎದುರಿಗೆ ಯಾಕೆ ಕುಣಿತಿದೀಯಾ...? ಸ್ಟಾಪ್ ಇಟ್..."

"ಏನೂ ಇಲ್ಲ... ಸುಮ್ಮನೇ..." ಅವನ ಕೋಪಕ್ಕೆ ಹೆದರಿದ್ದಳು.

"ಏನು ? ಏನು ಸುಮ್ಮನೇ... ಈ ದಾಂಡಿಗನ ಮುಂದೆಕುಣಿದು, ಅವನಿಗೆ ಮನೋರಂಜನೆ ನೀಡ್ತಿದ್ಯಾ ? ಏಯ್ ಹೋಗೋ ಎದ್ದೋಗೋ..." ಸುಮತಿಗೆ ಅವಮಾನದಿಂದ ಅಳು ಬರುವಂತಾಗಿತ್ತು. ಅವನ ಕಡೆ ನೋಡದೇ, ಬಾಯಿಗೆ ಕೈ ಒತ್ತಿ, ಮಹಡಿ ಹತ್ತಿದಳು. ಜಗ್ಗು ಅಳುತ್ತಾ ಅತ್ಲಾಗೇ ಸರಿದು ಹೋದ. ಸಂಕೇತ ನಿಧಾನವಾಗಿ ಮಹಡಿ ಹತ್ತಿ ಬಂದ. ಸುಮತಿ ಅಳುತ್ತಾ ಮಲಗಿದ್ದಳು. ಹೋಗಿ ಸಮಾಧಾನ ಮಾಡಬೇಕೆಂದುಕೊಂಡ. ಆದರೆ ಅವಳ ಮೇಲೂ ಕೋಪ ಬಂದಿತ್ತು. ತನಗೆ ಜಗ್ಗೂನ ಕಂಡರೆ ಆಗುಲ್ಲ ಅಂತ ತಿಳಿದಿದ್ರೂ, ಅವನ ಜೊತೆ ಇದ್ದು ನನ್ನನ್ನ ರೇಗಿಸ್ತಾಳಲ್ಲ, ಎಂದು ಕೋಪದಿಂದ ಅವಳನ್ನು ಮಾತನಾಡಿಸದೇ ತನ್ನ ರೂಮಿಗೆ ಹೋದ. ಇವಳಿಗೋಸ್ಕರ ಚಡಪಡಿಸಿ, ಇಲ್ಲಿಗೆ ಬಂದರೆ, ಇವಳಿಗೆ ತನ್ನ ಮೇಲೆ ಆಸಕ್ತಿಯೇ ಇಲ್ಲ, ಜಗ್ಗೂ ಜಗ್ಗೂ... ನನಗಿಂತ ಆ ಜಗ್ಗೂನೇ ಹೆಚ್ಚಾದನೆ.... ತುಥ್ ಈ ಜಗ್ಗು ಇರೋವರೆಗೂ ನನಗೆ ನೆಮ್ಮದಿ ಇಲ್ಲ ಅಂತಂದುಕೊಂಡ.

"ಇದ್ದಕ್ಕಿದ್ದಂತೆ ಸಂಕೇತ ಹೀಗೇಕೆ ಆಡಿದೆ ? ತನ್ನ ಮೇಲೆ ಕೂಗಾಡಲು ಇವನಿಗೇನು ಹಕ್ಕಿದೆ ? ಇದೇನಾ ಇವನ ಪ್ರೀತಿ ? ಎರಡು ದಿನಗಳಿಂದ, ಇವನನ್ನೇ ಸದಾ ಧ್ಯಾನಿಸುತ್ತಿದ್ದೆ... ನನ್ನ ಪ್ರೀತಿಗೆ ಅವಮಾನ ಮಾಡಿಬಿಟ್ಟ, ಪ್ರೀತಿ ಎಂದರೆ ಏನು ಅಂತ ತಿಳಿಯದವನು, ತಾಯಿಯ ಮೇಲೆ ಪ್ರೀತಿ ಇಲ್ಲ, ತಮ್ಮನ ಮೇಲೆ ಪ್ರೀತಿ ಇಲ್ಲ, ಇನ್ನು ನನ್ನ ಮೇಲೆ ಪ್ರೀತಿ ಇದೆ ಅಂತ ಏನು ಗ್ಯಾರಂಟಿ ? ತನ್ನನ್ನು ವಶಮಾಡಿಕೊಳ್ಳಲು ನಾಟಕವಾಡಿದಾನೆ ಅಂತಂದುಕೊಂಡಾಗ, ತನ್ನ ಬಗ್ಗೆಯೂ ಹೀನಾಯವೆನಿಸಿತ್ತು. ತಾನು ಮೋಸಹೋದೆ ಎಂದುಕೊಂಡು ಅಳತೊಡಗಿದಳು.

ಅವಳ ರೋಧನದ ಸದ್ದು ಸಂಕೇತನಿಗೆ ಕೇಳಿಸಿತ್ತು. ತಾನು ಅವಳನ್ನು ಅಳಿಸಿಬಿಟ್ಟೆ... ಅವಳನ್ನು ಸಾರಿ ಕೇಳಬೇಕೆಂದುಕೊಂಡು ಅವಳ ರೂಮಿಗೆ ಬಂದ "ಸುಮತೀ... ಸುಮತೀ..." ಕರೆದ. ಅವಳು ಇತ್ತ ತಿರುಗಲೂ ಇಲ್ಲ.

"ಇತ್ತ ತಿರುಗು" ಎನ್ನುತ್ತಾ ಬಲವಂತವಾಗಿ ಅವಳನು ತನ್ನೆಡೆಗೆ ತಿರುಗಿಸಿಕೊಂಡ. ಅತ್ತು ಅತ್ತು ಅವಳ ಕಣ್ಣುಗಳು ಕೆಂಪಾಗಿ, ಊದಿಕೊಂಡಿದ್ದವು. ಅವನಿಗೆ ತನ್ನ ತಪ್ಪಿನ ಅರಿವಾಗಿತ್ತು.

"ಐ ಆಮ್ ವೆರಿ ಸಾರಿ ಸುಮತೀ... ನಾನು ನಿನ್ನನ್ನು ಅಳಿಸಿಬಿಟ್ಟೆ" ಅವಳನ್ನು ತನ್ನ ಎದೆಗೆ ಒರಗಿಸಿಕೊಂಡ. ಸುಮತಿ ಅವನನ್ನು ತಳ್ಳಿದಳು.

"ಐ ಹೇಟ್ ಯೂ..." ಎಂದಳು.

"ನಾನು ತುಂಬಾ ಕೆಟ್ಟೋನು ಸುಮತಿ... ಯಾರ ಪ್ರೀತಿಗೂ ನಾನು ಲಾಯಕ್ಕಲ್ಲ. ಮಮ್ಮಿ ನನ್ನನ್ನು ಪ್ರೀತಿಸಲಿಲ್ಲ. ಇನ್ನು ಮುಂದೆ ನೀನೂ ನನ್ನನ್ನು ಪ್ರೀತಿಸುವುದಿಲ್ಲ. ನನಗೆ ಗೊತ್ತು" ಸುಮತಿ ಕತ್ತೆತ್ತಿ ಅವನನ್ನೇ ನೋಡಿದಳು. ಅಲ್ಲಿ ಎಲ್ಲಾ ಭಾವನೆಗಳೂ ಅಡಗಿದ್ದವು.

"ಇದೊಂದು ಸಾರಿ ನನ್ನನ್ನು ಕ್ಷಮಿಸಿಬಿಡು ಸುಮತಿ... ಇನ್ನು ಮುಂದೆ ನಾನು ಇಂತಹ ತಪ್ಪನ್ನು ಮಾಡುಲ್ಲ." ಅವಳ ಕಣ್ಣೀರನ್ನು ಒರೆಸಿದ.

"ಓ.ಕೇ. ಕ್ಷಮಿಸ್ತೀನಿ. ಆದರೆ ಒಂದು ಕಂಡೀಷನ್..."

"ಏನದು ?"

"ನಾನು ನಾಳೇನೇ ಸುಚಿತ್ರಳ ಮನೆಗೆ ಹೊರಟುಹೋಗ್ತೀನಿ. ನಾನು ಇಲ್ಲೇ ಇದ್ದರೆ, ನಾನು ಜಗ್ಗೂ ಜೊತೆ ಮಾತನಾಡ್ತೀನಿ. ನಿಮಗೆ ಅದು ಸಹಿಸುಲ್ಲ... ನನಗೆ ಈ ತಿಕ್ಕಾಟವೆಲ್ಲಾ ಬೇಕೇ ಇಲ್ಲ..."

"ಏ... ಏ... ಹಾಗೆಲ್ಲಾ ಹೇಳಬೇಡ... ನೀನೇನಾದ್ರೂ ಹಾಗೆ ಮಾಡಿದರೆ ನಾನು ಸತ್ತೇ ಹೋಗ್ತೀನಿ ಅಷ್ಟೇ..."

"ಅದೆಲ್ಲ ಸುಳ್ಳು... ನಿಮಗೆ ಪ್ರೀತಿ ಪ್ರೇಮ ಅಂದರೇನು ಅಂತ ಸರಿಯಾಗಿ ಗೊತ್ತಿಲ್ಲ. ನಿಮಗೆ ಅನುಭವ ಸಾಲದು."

"ಪ್ರೀತಿಯಿಂದ ವಂಚಿತನಾದವನು ನಾನು... ಈಗ ನೀನೂ ವಂಚಿಸಿದರೆ ?"

"ನಾನೇನು ವಂಚನೆ ಮಾಡ್ತಿಲ್ಲ ಸಂಕೇತ್... ನಿಮಗೋಸ್ಕರವೇ ನಾನು ಭದ್ರಾವತಿಯಿಂದ ಬೇಗನೆ ಬಂದದ್ದು. ಬರ್ತಿದ್ದ ಹಾಗೇ ನೀವು ಒಳ್ಳೆ ಉಡುಗೊರೆಯನ್ನೇ ಕೊಟ್ಟಿರಿ... ನಿಮಗೆ ನನ್ನ ಮೇಲೆ ನಂಬಿಕೆ, ವಿಶ್ವಾಸ ಬೇಡವಾ ?" ಧ್ವನಿ ಗಡುಸಾಗಿತ್ತು.

"ನನಗೆ ನಿನ್ನ ಮೇಲೆ ನಂಬಿಕೆ ವಿಶ್ವಾಸ ಎಲ್ಲಾ ಇದೆ... ಆದರೆ ಜಗ್ಗು... ಅವನು ಕೆರಳಿಸಿಬಿಡ್ತಾನೆ."

"ಜಗ್ಗು ನಿಮ್ಮ ತಮ್ಮ... ಅವನು ಹಾಗಿರುವುದು, ಅವನ ತಪ್ಪಲ್ಲ, ಅವನ ಗ್ರಹಚಾರ. ನೀವು ಅವನ ಅಣ್ಣನಾಗಿ ಅವನಿಗೆ ಏನು ಮಾಡಿದೀರಿ ? ಯಾವತ್ತೂ ಅವನಿಂದ ದೂರದೂರವೇ ಇದೀರಿ. ಅದು ಸರೀನಾ ?"

"ಸರಿಯೋ ತಪ್ಪೋ ನನಗೆ ಗೊತ್ತಿಲ್ಲ. ಒಟ್ನಲ್ಲಿ ಅವನನ್ನು ಕಂಡರೆ ನನಗಾಗುವುದಿಲ್ಲ... ಅದಕ್ಕೇ... ನನಗೆ ಬೇಜಾರು."

''ನಿಮ್ಮ ಬೇಜಾರು ಏನು ಅಂತ ನನಗೂ ಗೊತ್ತು. ಜಗ್ಗೂನ ನೀವು ಬದಲಾಯಿಸಲು ಸಾಧ್ಯವಿಲ್ಲ ಅಲ್ಲವಾ ? ನೀವೇ ಬದಲಾಗಿ ನಿಮ್ಮ ನಡವಳಿಕೆಯನ್ನು ಬದಲಾಯಿಸಿಕೊಳ್ಳಿ. ಆಗ ಎಲ್ಲಾ ಸರಿ ಹೋಗುತ್ತದೆ.''

''ನೀನೂ ನನಗೇ ಉಪದೇಶ ಕೊಡ್ತೀಯ...'' ಬೇಸರದಿಂದ ಕೇಳಿದ.

''ಹಾಗಾದ್ರೆ ಎಲ್ರೂ ನನ್ನ ಹಾಗೆ ಉಪದೇಶ ಕೊಟ್ಟಿದ್ದಾರೆ ಅಂತಾಯ್ತು. ಹಾಗಾದ್ರೆ ನಿಮ್ಮದೇ ಎಲ್ಲಾ ತಪ್ಪು ತಾನೇ...?''

''ಏನೋ ನಂಗೊತ್ತಿಲ್ಲ ಸುಮತಿ. ಈಗ ಈ ಪುರಾಣ ಸಾಕು. ನಾವೇಕೆ ಅವನಿಗಾಗಿ ತಲೆ ಕೆಡಿಸಿಕೊಳ್ಳೋಣ.'' ನಿನಗೆ ನಾನು ; ನನಗೆ ನೀನು. ಅಷ್ಟು ಸಾಕು.''

''ಹಾಗಿದ್ರೆ ಒಂದು ಮಾತು. ಅವನ ಪಾಡಿಗೆ ಅವನನ್ನು ಬಿಟ್ಟು ಬಿಡಿ... ಅವನ ಕಡೆ ನೋಡಲೇಬೇಡಿ. ಅವನ ಬಗ್ಗೆ ತಲೆಕೆಡಿಸಿಕೊಳ್ಳಬೇಡಿ... ಆಗ ಎಲ್ಲಾ ತಾನೇ ತಾನಾಗಿ ಸರಿ ಹೋಗುತ್ತದೆ.''

''ನೋಡೋಣ... ಪ್ರಯತ್ನ ಮಾಡ್ತೀನಿ. ಆದರೆ ನನಗೇ ನನ್ನ ಮೇಲೆ ನಂಬಿಕೆ ಇಲ್ಲ.''

''ನಾನೀದೀನಿ ನಿಮ್ಮ ಜೊತೆಗೆ ನನಗೆ ನೀವು ಎಷ್ಟು ಮುಖ್ಯವೋ, ನಿಮ್ಮ ಕುಟುಂಬವೂ ಅಷ್ಟೇ ಮುಖ್ಯ ಆಂಟಿಯ ಬಗ್ಗೆ ಗೌರವವಿದೆ. ಜಗ್ಗೂ ಮೇಲೆ ಪ್ರೀತಿ ಇದೆ...'' ಅವಳ ಬಾಯ ಮೇಲೆ ಕೈಯನ್ನಿಟ್ಟ

''ಅದೇ ನನಗಿಷ್ಟವಿಲ್ಲ. ನಿನ್ನ ಪ್ರೀತಿ ಕೇವಲ ನನಗೆ ಮಾತ್ರ ಸೀಮಿತವಾಗಿರಬೇಕು... ಅದರಲ್ಲಿ ಬೇರೆ ಯಾರಿಗೂ ಪಾಲು ಇಲ್ಲ...''

''ಥೂ ಏನೇನೋ ಹೇಳ್ತೀರಿ. ಪ್ರೀತಿಯಲ್ಲಿ ಅನೇಕ ಬಗೆಗಳಿವೆ. ನಾವುಗಳು ತಂದೆ, ತಾಯಿ, ಅಣ್ಣ ತಮ್ಮಂದಿರು, ಅಕ್ಕ, ತಂಗಿಯರನ್ನು ಪ್ರೀತಿಸುತ್ತೇವೆ. ಆ ಪ್ರೀತಿಯೇ ಬೇರೆ. ನನ್ನ ನಿಮ್ಮ ಪ್ರೀತಿಬೇರೆ. ಜಗ್ಗೂ ಮೇಲಿನ ಪ್ರೀತಿಯೇ ಬೇರೆ ರೀತಿಯದು. ಎಲ್ಲಾದಕ್ಕೂ ಒಂದೇ ಅರ್ಥ ಕಲ್ಪಿಸಬೇಡಿ.''

''ನಾನು ಒಂದು ತರಹ ಸ್ವಾರ್ಥಿ. ನಿನ್ನ ಬಗ್ಗೆ ಪೊಸೆಸಿವ್‌ನೆಸ್ ಇದೆ...'' ಅವಳನ್ನು ಎದೆಗೆ ಒತ್ತಿಕೊಂಡ.

''ಒಂದು ವೇಳೆ ನನಗೇ ಅಂತಹ ನೇಚರ್ ಇದ್ದರೇ, 'ನಾನು ಸ್ವಾರ್ಥಿಯಾದರೆ, ನಿಮಗೆ, ತಾಯಿಯ ಪ್ರೀತಿ ಇಲ್ಲ, ಸ್ನೇಹಿತರ ಸ್ನೇಹವಿರುವುದಿಲ್ಲ... ಆಗ ಏನು ಮಾಡ್ತಿದ್ರಿ ?'' ಬೆಪ್ಪನಂತೆ ಅವಳನ್ನೇ ನೋಡಿದ.

''ಏನೋ ನಂಗೊತ್ತಿಲ್ಲ...'' ಅವಳ ಎದೆಯೊಳಗೆ ತನ್ನ ಮುಖವನ್ನು ಒಡ್ಡಿಕೊಂಡ. ಸುಮತಿ ಅವನ ಭುಜವನ್ನು ಬಳಸಿದಳು. ಇವನೂ ಒಂದು ತರಹ ಮಗುವಿನ ಹಾಗೆ, ಜೊತೆಗೆ

ಏನೋ ಕಾಂಪ್ಲೆಕ್ಸ್, ಆ ಕಾಂಪ್ಲೆಕ್ಸ್‌ನಿಂದ ಹೊರಬರುವವರೆಗೂ, ಹೀಗೆ ಒದ್ದಾಡ್ತಾನೇ ಇರ್ತಾನೆ. ಇವನು, ಆ ಕಾಂಪ್ಲೆಕ್ಸ್‌ನಿಂದ ಹೊರಬರುವಂತೆ ಪ್ರಯತ್ನ ಮಾಡಬೇಕು ಅಂತ ತನ್ನಲ್ಲೇ ಅಂದುಕೊಂಡಳು.

☆ ☆ ☆

ಹೇಮಳ ಮದುವೆಯ ದಿನ ಗೊತ್ತು ಮಾಡಿಯಾಯ್ತೆ ?" ಇದ್ದಕ್ಕಿದ್ದಂತೆ ಜಾನಕಿ ಕೇಳಿದಾಗ, ಸುಮತಿ ಗೊಂದಲಕ್ಕೊಳಗಾದಳು.

"ಇನ್ನೂ ಇಲ್ಲ."

"ವರದಕ್ಷಿಣೆಗೆ ಅದೂ ಇದು ಅಂತ ತುಂಬಾ ಖರ್ಚು ಬೀಳಬಹುದು ಅಲ್ವಾ ?" ಆಂಟಿ ಇದನ್ನೆಲ್ಲ ಯಾಕೆ ಕೇಳ್ತಿದಾಳೆ ಅಂತ ಅರ್ಥವಾಗಿರಲಿಲ್ಲ.

"ಸಂಕೇತ, ಸುಚಿತ್ರಂಗೆ ಅಂತ ಒಂದು ಸೆಟ್ ಒಡವೆ ತಂದಿದ್ದ ಎಷ್ಟು ಚೆನ್ನಾಗಿತ್ತು ಅಂತೀಯ ಹದಿನೈದುಸಾವಿರವಾದರೂ ಆಗಿರಬೇಕು ನಿನಗೆ ಗೊತ್ತಾ ?

"ಇಲ್ಲ" ಎಂದಳು ಕತ್ತು ತಗ್ಗಿಸಿ.

"ನೋಡು, ಯಾರನ್ನು ಕೇಳಲಿಲ್ಲ. ಯಾರಿಗೂ ಹೇಳಲಿಲ್ಲ ಸುಚಿತ್ರ ಸ್ನೇಹಿತೆ ನಿಜ. ಆದರೆ ಅಷ್ಟು ದುಡ್ಡನ್ನು ಯಾಕೆ ಖರ್ಚುಮಾಡಿದ ಅಂತ ನನಗೆ ತಿಳೀದು. ಅಂದ್ವಾಗೆ ನೀನೇನು ಕೊಟ್ಟೆ! ನೀನೂ ಹೇಳಲಿಲ್ಲ."

"ಬೆಳ್ಳಿಯ ಅರಿಶಿನ ಕುಂಕುಮದ ಬಟ್ಟಲುಗಳು."

"ನನಗೆ ತೋರಿಸಲೇ ಇಲ್ಲ" ಸುಮತಿ ಪೆಚ್ಚಾದಳು. ಅವಳಿಗೆ ಎಲ್ಲಾ ಮರೆತು ಹೋದಂತಾಗಿತ್ತು. ಆಂಟಿ ಯಾಕೆ ಆಕ್ಷೇಪಣೆ ಮಾಡುತ್ತಿದ್ದಾಳೋ, ಸಂಕೇತ ಏನಾದರೂ ಹೇಳಿರಬಹುದೇ ಎಂದುಕೊಂಡು, ಅವನಿದ್ದಲ್ಲಿಗೆ ಬಂದಳು.

"ಒಳಗೆ ಬಾ... ಇಲ್ಲಿಗೆ ಬರುಕ್ಕೆ ಅಂಜಿಕೇನಾ ? ನಾನೇ ನಿನ್ನ ರೂಮಿಗೆ ಬರಲಾ ?" ತಮಾಷೆ ಮಾಡಿದ. ಅವಳು ಒಳಗೆ ಬಂದಳು. ಅದೇ ಮೊದಲ ಬಾರಿ ಅವಳು ಅವನ ರೂಮಿಗೆ ಬಂದದ್ದು ಹಾಗೇ ಸುತ್ತಲೂ ಕಣ್ಣಾಡಿಸಿದಳು. ತನ್ನ ಕೈಲಿದ್ದ ಒಡವೆ ಬಾಕ್ಸನ್ನು ಅವನಿಗೆ ತೋರಿದಳು.

"ಈ ಸೆಟ್ಟನ್ನ ವಾಪಸ್ಸು ಕೊಟ್ಟುಬಿಡಿ" ಎಂದಳು.

ಮಂದಹಾಸ ಬೀರುತ್ತಾ ನುಡಿದ.

"ಇರಲಿ ಬಿಡು... ನೀನು ಇಟ್ಕೋ..."

''ಸುಚಿತ್ರಂಗೆ ಅಂತ ತಂದಿದ್ದು ನನಗೆ ಬೇಡ... ಅಲ್ಲದೇ ನನಗೆ ಒಡವೆಗಳ ಮೇಲೆ ಯಾವ ಆಸೆಯೂ ಇಲ್ಲ''

''ಇದನ್ನು ನಿನಗೆ ಅಂತಲೇ ತಗೊಂಡಿದ್ದು ನಾನು ಸುಳ್ಳು ಹೇಳಿದೆ ಅಷ್ಟೇ ಈ ಸೆಟ್, ಸುಚಿತ್ರಂಗಿಂತ ನಿನಗೇ ಚೆನ್ನಾಗಿ ಒಪ್ಪುತ್ತೆ.''

''ನನಗೆ ಬೇಡಾಂತ ಅಂದ್ನಲ್ಲಾ'' ರೇಗಿದಳು.

''ಯಾಕೆ ರೇಗ್ತೀಯಾ ಚುಮ್ಮೀ... ನನಗೆ ಮಾತ್ರ ತಿಳುವಳಿಕೆ ಹೇಳ್ತೀಯ ಬಿ.ಪಿ. ಬರುತ್ತೆ, ತಲೆ ಸುತ್ತುತ್ತೆ ಅಂತ.''

''ಹೀಗೆ ಅವಿವೇಕ ಮಾಡಿದ್ರೆ ಇನ್ನೇನು ಹೇಳಲಿ ? ತಂದಿದ್ದು ಸುಚಿತ್ರಂಗೆ ಅಂತ... ನನ್ನನ್ನು ಒಂದ್ಮಾತು ಕೇಳಬಾರದಾಗಿತ್ತಾ ?

''ನಾನು, ಈ ಪ್ಯಾಕೆಟ್, ಈ ರೂಮಿನಲ್ಲಿರುತ್ತೆ ಅಂತ ಅಂದುಕೊಂಡೆ ನಿನ್ನ ರೂಮಿನಲ್ಲಿ ಹುಡುಕಲಿಲ್ಲ ಅಷ್ಟೇ... ನಾನು ಜಗ್ಗು ತರಹ ಅಲ್ಲ; ಡೀಸೆಂಟು...''

''ನಿಮ್ಮ ಡೀಸೆನ್ಸಿ ಏನು ಅಂತ ನನಗೂ ಗೊತ್ತಾಯ್ತಲ್ಲ...'' ಮುಸಿ ಮುಸಿ ನಕ್ಕಳು.

''ಆದರೂ, ನನ್ನನ್ನ ಕಳ್ಳ ಅನ್ನಬೇಡ. ನೀನೂ ಪಾರ್ಟನರ್...'' ಎಂದು ಹೇಳಿ ಅವಳನ್ನು ತನ್ನೆಡೆಗೆ ಎಳೆದುಕೊಂಡ...''

''ಬಿಡಿ ... ಬಿಡಿ... ಯಾರೋ ನೋಡ್ತಾ ಇದಾರೆ ಅಂತ ಅನ್ನಿಸ್ತಿದೆ.''

''ಯಾರೂ ಬರುಲ್ಲ ನನ್ನ ರೂಮಿಗೆ... ಮಮ್ಮಿಗೆ ಮಹಡಿ ಹತ್ತುಕ್ಕಾಗುಲ್ಲ... ಆ ಜಗ್ಗು! ಅವನಿಗೇನೂ ಗೊತ್ತಾಗುಲ್ಲ... ಹಿಡಿತವನ್ನು ಬಿಗಿ ಗೊಳಿಸಿದ.

''ಬಾಗಿಲಲ್ಲಿ ನಿಂತಿದ್ದ ಜಗ್ಗುವನ್ನು ಕಂಡು ಸುಮತಿ ಹಿಡಿತವನ್ನು ಬಿಡಿಸಿಕೊಂಡಳು. ನೋಡಿ, ಅವನು ನಮ್ಮಿಬ್ಬರನ್ನೇ ನೋಡ್ತಿದಾನೆ.'' ಸಂಕೇತ ಉರಿಗಣ್ಣು ಮಾಡಿದ.

''ಏಯ್ ತೊಲಗೋ ಆಚೆಗೆ... ಬಂದು ಬಿಟ್ಟ... ಹೋಗ್ತೀಯೋ ಇಲ್ಲವೋ ಅವನ ಮೇಲೆ ಕೈ ಎತ್ತಿದವನನ್ನು ತಡೆದಳು.

''ಅವನಿಗೆ ತಿಳುವಳಿಕೆ ಇಲ್ಲ ಅಂತೀರಿ. ಹೊಡೆದರೆ ತಿಳಿವಳಿಕೆ ಏನೂ ಬರುಲ್ಲ... ಜಗ್ಗು ಇಲ್ಲಿ ಏನು ಮಾಡ್ತಾ ಇದೀಯಾ ! ಹೋಗು ಕೆಳಗೆ, ಮಮ್ಮೀ ಕರೀತಾ ಇದಾರೆ.'' ಸುಮತಿಯ ಮಾತಿಗೆ, ಎಲ್ಲಾ ಅರ್ಥವಾದವನಂತೆ, ಜಗ್ಗು ಹಾಗೇ ಹಿಂತಿರುಗಿ ಹೊರಟು ಹೋದಾಗ, ಸುಮತಿ ಸಂಕೇತನ ಕಡೆ ನೋಡಿ ವಿಜಯದ ನಗೆ ನಕ್ಕಳು.

''ನೀನು ನಗಬೇಡ. ನನಗೆ ಮೈಯೆಲ್ಲಾ ಉರಿದು ಹೋಗುತ್ತೆ.''

"ಓ.ಕೆ. ನಗುಲ್ಲ. ಹೀಗೆ ಪ್ರೀತಿಯಿಂದ ಸಮಜಾಯಿಷಿ ಹೇಳಿದರೆ, ಅವನು ಹೇಳಿದ ಹಾಗೆ ಕೇಳ್ತಾನೆ ಅಂತಂದೆ. ಅಷ್ಟೇ."

"ಅವನು ನಾನು ಹೇಳಿದ ಹಾಗೆ ಕೇಳುವುದೂ ಬೇಡ. ನನಗೆ ಅವನ ಸಹವಾಸವೇ ಬೇಡ. ನೀನೂ ಅವನನ್ನು ಮಾತನಾಡಿಸಕೂಡದು."

"ಅವನನ್ಯಾಕೆ ಇಷ್ಟು ದ್ವೇಷಿಸ್ತೀರಿ ಸಂಕೇತ್..."

"ಅವನು ಚಿಕ್ಕವನಾಗಿದ್ದಾಗಿನಿಂದಲೂ, ನನ್ನ ಪ್ರತಿಸ್ಪರ್ಧಿ... ಅವನು ಹುಟ್ಟಿ ನನ್ನ ಖುಷಿಯನ್ನೆಲ್ಲಾ ಕಿತ್ತುಕೊಂಡ ಅಮ್ಮನ ಪ್ರೀತಿ ಅವನ ಪಾಲಾಯಿತು... ಅದನ್ನು ಸಹಿಸಿಕೊಂಡೆ... ಆದರೆ ಈಗ ಹಾಗಾಗಬಾರದು..." ಅವನು ಮುಂದೆ ಮಾತಾಡಲಿಲ್ಲ.

ಸುಮತಿ ಅವನ ಗಲ್ಲ ಹಿಡಿದೆತ್ತಿದಳು. "ಹೀಗೇ ಅಪ್ಸೆಟ್ ಆಗ್ತಾ ಇದ್ದರೆ ಹೇಗೇ ಅಂತ..."

"ನೀನೇ ನೋಡಿದ್ಯಲ್ಲಾ... ಸ್ವೀಟ್ ಮುಮೆಂಟ್‌ನೆಲ್ಲಾ ಕೆಡಿಸಿಬಿಟ್ಟ. ನನ್ನ ಮೂಡೇ ಆಫ್ ಆಯ್ತು... ಇದಕ್ಕೆಲ್ಲಾ ಒಂದು ಸಲ್ಯೂಷನ್... ಆದಷ್ಟು ಬೇಗ ನಿನ್ನನ್ನು ಅಮೆರಿಕಾಕ್ಕೆ ಕರೆಸಿಕೊಳ್ಳೋದು."

"ನಮ್ಮ ಮದುವೇನೇ ಆಗಿಲ್ಲವಲ್ಲ."

"ಅದನ್ನೇ ಹೇಳೋಣ ಅಂತಿದ್ದೆ. ಆದಷ್ಟು ಬೇಗ ಮದುವೆಯಾಗೋಣ. ನಿಮ್ಮ ಅಕ್ಕನ ಮದುವೆ ಯಾವಾಗ ?"

"ಅವಳ ಮದುವೆ ನಿಂತು ಹೋಯಿತು" ಸಪ್ಪಗೆ ನುಡಿದಳು.

"ನನಗೆ ಹೇಳಲೇ ಇಲ್ಲ. ಯಾಕೆ ನಿಂತು ಹೋಯಿತು ?"

"ಅವನ ಮನೆಯವರು ವರದಕ್ಷಿಣೆ ಕೇಳಿದ್ರು. ನಮ್ಮ ತಂದೆ ಹತ್ತಿರ ಅಷ್ಟು ಹಣವಿಲ್ಲ..."

"ಓ... ವೆರಿ ಸಾರಿ... ಇಫ್ ಯೂ ಡೋಂಟ್ ಮೈಂಡ್. ನಾನು ಹೆಲ್ಪ್ ಮಾಡ್ಲಾ ?"

"ಬೇಡ. ನಮ್ಮ ತಂದೆ ಇದಕ್ಕೆ ಒಪ್ಪಲ್ಲ."

"ನಮ್ಮ ಮದುವೆಗೆ ಒಪ್ತಾರೆ ತಾನೆ ?"

"ನಂಗೊತ್ತಿಲ್ಲ... ಮದುವೆ ಮಾತನ್ನು ಹೇಗೆ ಆಡ್ಬೇಕೋ ತಿಳೀತಿಲ್ಲ"

"ನಾನು ಬಂದು ಕೇಳ್ತೀನಿ. ಯಾವಾಗ ಹೋಗೋಣ"

"ಈಗಲೇ ಬೇಡ ಸಂಕೇತ್... ನಿಮ್ಮ ಮಮ್ಮೀನ ಕೇಳಿದ್ರಾ ?"

"ಊರಿಗೆ ಹೊರಡೋ ಮೊದಲು ಮಾತನಾಡೋಣ ಅಂತಂದುಕೊಂಡಿದೀನಿ.

ಮುಂಚೇನೇ ಹೇಳಿದ್ರೆ ಅಮ್ಮ ಸ್ಪೈ ಮಾಡ್ತಾಳೆ."

"ಈಗ ಅವರಿಗೆ ಅನುಮಾನ ಬಂದಿಲ್ವಾ ?" ಚುಡಾಯಿಸಿದಳು.

"ಹೇಗೆ ಬರುತ್ತೆ ? ನಾವು ಡೀಸೆಂಟ್ ಲವರ್ಸ್... ಜಗ್ಗು ಲೆಖ್ಖಕ್ಕಿಲ್ಲ"

"ಆದರೂ ನನಗೆ ಒಮ್ಮೊಮ್ಮೆ ಭಯ ಆಗುತ್ತೆ ಸಂಕೇತ್... ನೀವು ಅಮೆರಿಕಾಕ್ಕೆ ಮತ್ತೆ ಹೋಗಲೇಬೇಕಾ ?"

"ಹೂಂ. ನಾನು ಇಲ್ಲಂತೂ ಇರುಲ್ಲ, ಒಂದುಹೊಸ ಕಾಂಟ್ರಾಕ್ಟ್ ಇದೆ. ಹಾಗೇ ನಮ್ಮ ವೆಡ್ಡಿಂಗ್ ವಿಷಯವನ್ನು ತಿಳಿಸಬೇಕು. ನಾನು ನಿನಗೆ ಸ್ಪಾನ್ಸರ್ ಮಾಡಬೇಕು. ಒಂದೆರಡು ತಿಂಗಳ ನಂತರ ಮತ್ತೆ ಬರ್ತೀನಿ, ತಕ್ಷಣವೇ ನಮ್ಮ ಮದುವೆ. ರೈಟ್ ?"

"ಸಿಂಪಲ್ ಆಗಿ ಮದುವೆ ಆಗೋಣ..." ತನ್ನ ಮನದಿಂಗಿತವನ್ನು ತಿಳಿಸಿದಳು.

"ನೋ ವೇ... ನನಗೆ ಗ್ರ್ಯಾಂಡಾಗಿ ಮದುವೆ ಮಾಡ್ಕೋಬೇಕು ಅಂತ ಆಸೆ ಎಷ್ಟು ಖರ್ಚಾದರೂ ಪರವಾಗಿಲ್ಲ... ನನ್ನ ಸ್ನೇಹಿತರನ್ನೆಲ್ಲಾ, ಅವರ ಮನೆಯವರನ್ನೆಲ್ಲಾ ಕರೆಯಬೇಕು ಮಮ್ಮೀಗೂ ಖುಷಿಯಾಗಬೇಕು. ನಮ್ಮ ಕಡೆಯೂ ತುಂಬಾ ಜನ ರಿಲೇಟಿವ್ಸ್ ಇದಾರೆ" ಸುಮತಿ ಪೆಚ್ಚಾದಳು ಸಂಕೇತ ತಮ್ಮ ಮದುವೆಯ ವಿಷಯದ ಬಗ್ಗೆ ಹೇಳುತ್ತಲೇ ಇದ್ದ ಅವಳ ಗಮನ ಆ ಮಾತಿನ ಮೇಲೆ ಇರಲಿಲ್ಲ.

ಸುಮತಿ ತನ್ನ ಚಿಂತೆಯಲ್ಲೇ ಮುಳುಗಿ ಹೋಗಿದ್ದಳು. ಹೇಮಳ ಮದುವೆ ಆಗದೇ, ತನ್ನ ಮದುವೆಗೆ ತಂದೆ ತಾಯಿ ಒಪ್ಪುವರೇ ? ಅಲ್ಲದೇ ಸಂಕೇತನ ಬಗ್ಗೆ ಅವಳು ಯಾರಿಗೂ ಏನನ್ನು ಹೇಳಿರಲಿಲ್ಲ. ಸೂರಿಗೆ ಮೊದಲೇ ತನ್ನನ್ನು ಕಂಡರೆ ಅಷ್ಟಕ್ಕಷ್ಟೇ... ಹಂಗಿಸದೇ ಬಿಡುವುದಿಲ್ಲ. ಹೇಮಂಗೆ ಮೊದಲೇ ಬೇಸರವಾಗಿದೆ. ತನ್ನ ಬಗ್ಗೆ ಅವಳಿಗೆ ತಿರಸ್ಕಾರ ಮೂಡಬಹುದು. ತಾಯಿಗೋ ಮೊದಲೇ ತನ್ನ ಬಗ್ಗೆ ವಿಶ್ವಾಸವಿರಲಿಲ್ಲ, ತಂದೆಗೂ ತನ್ನ ಮೇಲೆ ವಿಶ್ವಾಸ ಕಡಿಮೆ ಆದರೆ ?... ತನ್ನದೇ ತಪ್ಪು, ತಾನು ಸಂಕೇತನ ಪ್ರೀತಿಯ ಬಲೆಯಲ್ಲಿ ಬೀಳಬಾರದಾಗಿತ್ತು. ಅವನ ಪ್ರೀತಿಯ ಮಾತುಗಳಿಗೆ ಮಾತ್ರ ಮರುಳಾಗಿರಲಿಲ್ಲ, ರೂಪವಂತ, ವಿದ್ಯಾವಂತ, ಶ್ರೀಮಂತ ಜೊತೆಗೆ ಅವಿವೇಕಿ, ಆದರೂ ತಾನು ಅವನನ್ನು ಮೆಚ್ಚಿದ್ದೆ. ಇದಕ್ಕೆ ಹೆಚ್ಚಾದ್ದು ಇನ್ನು ಒಂದು ಕಾರಣ, ಅವನು ಜಗ್ಗುವಿನ ಅಣ್ಣ... ಅವನು ತಮ್ಮನನ್ನು ದ್ವೇಷಿಸುತ್ತಾನೆ... ನಿನ್ನ ನಡೆವಳಿಕೆ ಸರಿ ಇಲ್ಲ ಅಂತ ಯಾರಾದರೂ ತಿಳುವಳಿಕೆ ಹೇಳಲು ಬೇಕೇ ಬೇಕು... ಒಂದಲ್ಲ ಒಂದು ದಿನ ಇವನು ತನ್ನ ತಮ್ಮನನ್ನು ಪ್ರೀತಿಸುವಂತೆ ಇವನನ್ನು ಬದಲಾಯಿಸಬೇಕು. ನನ್ನಪ್ರೀತಿಯಲ್ಲಿ ಎಷ್ಟು ಶಕ್ತಿ ಇದೆ ಎಂದು ಇವನಿಗೆ ಅರಿವಾಗಬೇಕು. ಸಂಕೇತ ನನ್ನವನು, ಅವನ ಕುಟುಂಬ ನನ್ನದು... ಜಗ್ಗು ಸ್ವಂತ ಅಣ್ಣನ ಅನಾದರಣೆಗೆ ಒಳಗಾಗಿ, ವಂಚಿತನಾಗಬಾರದು... ಆಂಟಿ ತನಗೆ ತಾಯಿಯಂತೆ... ಆಂಟಿಯ ಕಳವಳ ಕಡಿಮೆ ಆಗಬೇಕು. ಅಣ್ಣ ತಮ್ಮ ಪರಸ್ಪರ ಮಿತ್ರರಂತೆ ಇರುವುದನ್ನು ಆಂಟಿ ನೋಡಬೇಕು.... ಯೋಚನಾ ಲಹರಿ ಎಲ್ಲಿಂದೆಲ್ಲಿಗೋ ಹೋಗಿತ್ತು...

ಸಂಕೇತ ವಾಪಸ್ಸು ಹೊರಡುವ ದಿನಗಳು ಹತ್ತಿರವಾಗಿದ್ದವು. ಅವನಿಗೆ ಹೊರಡುವ ಮನಸ್ಸೇ ಇರಲಿಲ್ಲ. ಈ ಮೊದಲು ಬಂದಾಗ, ಇಲ್ಲಿಂದ ಹೋದರೆ ಸಾಕು ಎನಿಸ್ತಿತ್ತು. ಸುಮತಿಯನ್ನು ತನ್ನ ಜೊತೆಗೆ ಕರದೊಯ್ಯುವ ಹಾಗಿದ್ದಿದ್ದರೇ... ಪಾಸು ಪೋರ್ಟು, ವೀಸಾ ಎಲ್ಲಾ ರೆಡಿಯಾಗಲು ಇನ್ನು ತಡವಿದೆ. ತನ್ನ ಕಂಪೆನಿಯವರಿಗೆ ತಿಳಿಸಿ, ಸ್ಪಾನ್ಸರ್ ಮಾಡಬೇಕು. ಎಂಗೇಜ್‌ಮೆಂಟಾದ್ರೂ ಆಗಿದ್ದರೆ ಆಗಿರುತ್ತಿತ್ತು. ಸುಮತಿ ಒಪ್ತಾನೇ ಇಲ್ಲ. ಅವಳ ಅಕ್ಕನ ಮದುವೆ ನಿಂತು ಹೋಗಿದೆ. ಅನ್ನೋದನ್ನೇ ನೆವ ಮಾಡಿಕೊಂಡಿದಾಳೆ. ಮಮ್ಮೀಗೂ ಹೇಳೋದು ಬೇಡವೆಂದುಬಿಟ್ಟಳು. ನೋಡೋಣ, ನನ್ನಿಂದ ದೂರ, ಎಷ್ಟು ದಿನ ಇರೋಕೆ ಆಗುತ್ತೆ... ಆದಷ್ಟು ಬೇಗ ಮದುವೆಯಾಗೋಣ, ನಾನು ಒಂಟಿಯಾಗಿ ಇರಲಾರೆ ಅಂತ ತಾನೇ ಒತ್ತಾಯ ಮಾಡುತ್ತಾಳೆ ಎಂದು ತನಗೆ ತಾನೇ ಹೇಳಿಕೊಂಡು ಮುದಗೊಂಡ ತಕ್ಷಣವೇ ಸುಮತಿ ಯನ್ನು ಮಾತನಾಡಿಸಲು ಬಂದಿದ್ದ.

''ನಾನು ಊರಿಗೆ ಹೊರಟು ಹೋದಾಗ, ನಾನಿಲ್ಲದೇ ಹೇಗೆ ಕಾಲ ಕಳೀತೀಯಾ ?'' ಕೆಣಕುವ ಧ್ವನಿಯಲ್ಲಿ ಕೇಳಿದ್ದ.

''ಕಾಲ ಕಳೆಯೋಕ್ಕೇನು ಕಷ್ಟ! ನೀವು ನನ್ನ ಜೀವನದಲ್ಲಿ ಬರೋಕೆ ಮುಂಚೆ ಹೇಗೆ ಕಾಲ ಕಳೀತಿದ್ನೋ ಹಾಗೇ... ಕಾಲೇಜಿಗೆ ಹೋಗ್ತೀನಿ ರಜದಲ್ಲಿ ಭದ್ರಾವತಿಗೆ ಹೋಗ್ತೀನಿ... ಆಂಟಿ ಜೊತೆ ಮಾತನಾಡ್ತೀನಿ. ಜಗ್ಗು ಜೊತೆ ಆಟ ಆಡ್ತೀನಿ...'' ಅವನು ಸಿಡುಕು ಮುಖ ಮಾಡಿದಾಗ ಅವಳು ಕಿಲಕಿಲನೆ ನಕ್ಕಳು.

''ನಗಬೇಡ ಸುಮತೀ... ನೀನು ಭದ್ರಾವತಿಗೆ ಹೊರಟು ಹೋಗು. ಕಾಲೇಜೂ ಬೇಡ... ನೀನು ಇಲ್ಲಿರಲೇಬೇಡ..''

''ಅಲ್ಲಿ ನನಗೆ ಬೇಜಾರಾಗುಲ್ವಾ ಸಂಕೂ ?'' ಮೂಗು ಹಿಡಿದೆಳೆದಳು.

''ಸಂಕೂ ಪಿಂಕೂ ಅಂತ ನೀನು ಅನ್ನಬೇಡ. ನಾನು ನಿನಗೆ ಅಲ್ಲಿಗೇ ಕಾಗದ ಬರೀತೀನಿ. ಫೋನು ಮಾಡ್ತೀನಿ... ನಿಮ್ಮ ಮನೇಲಿ ಪಿ.ಸಿ. ಇದೆಯಾ ? ಇದ್ದರೆ ಹೇಳು, ಇ-ಮೇಲ್ ಮಾಡ್ತೀನಿ ಚಾಟ್ ಮಾಡೋಣ.''

''ಇಲ್ಲ ನಮ್ಮ ಮನೇಲಿ ಕಂಪ್ಯೂಟರ್ ಇಲ್ಲ. ನಾವ್ಯಾರೂ ಕಂಪ್ಯೂಟರ್ ಕಲಿತಿಲ್ಲ.''

''ಹಾಗಾದ್ರೆ ನೀನು ಕಂಪ್ಯೂಟರ್ ಕೋರ್ಸ್‌ಗೆ ಸೇರ್ಕೋ ಅಮೆರಿಕಾಕ್ಕೆ ಬಂದ ಮೇಲೆ ತುಂಬಾ ಉಪಯೋಗಕ್ಕೆ ಬರುತ್ತೆ.''

''ಅಲ್ಲಿ ಅದನ್ನೆಲ್ಲಾ ಮಾಡೋಕೆ ಆಗುಲ್ಲ. ನಮ್ಮದು ದೊಡ್ಡ ಫ್ಯಾಮಿಲಿ... ನಾನು ಇಲ್ಲೇ ಇದ್ದುಕೊಂಡು ಕಂಪ್ಯೂಟರ್ ಕ್ಲಾಸಿಗೆ ಹೋಗ್ತೀನಿ. ಹಾಗೇ ಕಾಲೇಜಿಗೂ ಹೋಗ್ತೀನಿ... ನನ್ನ ಖರ್ಚಿಗೆ ದುಡ್ಡು ಬೇಡ್ವಾ ?''

''ನಿನಗೆ ಪಾಕೆಟ್ ಮನಿ ನಾನು ಕೊಡ್ತೀನಿ. ಎಷ್ಟು ಬೇಕು ಹೇಳು... ಐದು ಸಾವಿರ, ಆರು ಸಾವಿರ.. ಹತ್ತು ಸಾವಿರ... ಇನ್ನು ಮುಂದೆ ನನ್ನ ಸಂಪಾದನೆಯೆಲ್ಲಾ ನಿನ್ನದೆ...''

''ಆಗಲಿ, ಅದೆಲ್ಲಾ ಮದುವೆಯ ನಂತರ ಈಗಿನ ವಿಷಯ ಹೇಳಿ.''

''ನೀನು ಇಲ್ಲೇ ಇರೋದಾದ್ರೆ, ನನ್ನದು ಕೆಲವು ಕಂಡೀಷನ್‌ಗಳಿವೆ.''

''ಮೊದಲನೆಯದು ನಾನು ಹೇಳಲಾ ?... ನಾನು ಜಗ್ಗು ಜೊತೆ ಮಾತನಾಡಬಾರದು. ಒಂದೇ ಮನೇಲಿದ್ದುಕೊಂಡು ನಾನು ಅವನನ್ನು ಅವಾಯ್ಡ್ ಮಾಡಿದರೆ, ಆಂಟಿ ಏನಂದುಕೊಳ್ತಾರೆ ? ಅದು ನನ್ನ ಕೈಲಿ ಸಾಧ್ಯವಿಲ್ಲ'' ತಲೆ ಆಡಿಸಿದಳು.

''ಹೋಗಲಿ ಮಾತ್ನಾಡು. ಆದರೆ ದೂರದಿಂದ ಮಾತ್ನಾಡು. ಅವನನ್ನು ಹತ್ತಿರಕ್ಕೆ ಸೇರಿಸಬೇಡ. ಅವನ ಎದುರಿಗೆ ಹಾಡು ಹೇಳೋದು, ಡ್ಯಾನ್ಸ್ ಮಾಡೋದು ಯಾವುದೂ ಕೂಡದು...''

''ಚೆನ್ನಾಯ್ತು ನಾನೇನು, ಡ್ಯಾನ್ಸರ್ರೂ ಅಲ್ಲ, ಸಿಂಗರ್ರೂ ಅಲ್ಲ... ಅವತ್ತು ಕಾರಣವಿಲ್ಲದೇ ರೇಗಿದ್ರಿ. ನನ್ನ ಬಳೆಗಳ ಝುಣಝುಣ ಸದ್ದು, ಕಾಲಿನ ಗೆಜ್ಜೆಯ ಸದ್ದಿಗೆ ಅವನು ಖುಷಿ ಪಡ್ತಿದ್ದ ಅಷ್ಟೇ...''

''ನನಗೆ ಅದೆಲ್ಲ ಗೊತ್ತಿಲ್ಲ... ಇನ್ನು ಮುಂದೆ ಈ ಗಾಜಿನ ಬಳೆಗಳನ್ನು ಹಾಕ್ಕೋಬೇಡ. ಕಾಲಿನ ಗೆಜ್ಜೆಯನ್ನು ತೆಗೆದು ಬಿಡು...'' ಎನ್ನುತ್ತಾ ಬಳೆಗಳನ್ನು ಅತ್ತಿಂದಿತ್ತ ಸರಿಸಿದ ಅವಳು ಕೆಟ್ಟ ಮುಖ ಮಾಡಿದಳು.

''ಇಷ್ಟು ಪೊಸೆಸಿವ್‌ನೆಸ್ ಒಳ್ಳೇದಲ್ಲ ಸಂಕೇತ್...''

''ನೀನು ನನ್ನವಳು ಅದಕ್ಕೇ ಹೇಳ್ತೀನಿ. ಬೇರೆ ಯಾರಿಗಾದ್ರೂ ಹೇಳ್ತೀನಾ ?''

''ನನಗೂ ಕೆಲವು ಆಸೆಗಳಿವೆ... ಅದಕ್ಕೂ ಬೆಲೆ ಕೊಡಬೇಕು ನೀವು''

''ಜಗ್ಗೂಒಬ್ಬ ಇಲ್ಲದೇ ಹೋಗಿದ್ದರೆ, ಹೇಗೆ ಬೇಕಾದ್ರೂ ಇರು ಅಂತಿದ್ದೆ... ಅವನೇನು ಚಿಕ್ಕವನಲ್ಲ, ಅವನಿಗೂ ಗಡ್ಡ ಮೀಸೆ ಬೆಳೆದಿದೆ...''

''ಥೂ ಇಷ್ಟು ಚೀಪಾಗಿ ಯೋಚಿಸ್ತೀರಿ ಅಂತ ಅಂದುಕೊಂಡಿರಲಿಲ್ಲ ನಾನು. ಹರೀಶ, ದಿನೇಶ, ಎಲ್ರೂ ಗಂಡಸರೇ... ಅವರುಗಳು ನನ್ನನ್ನು ಮಾತನಾಡಿಸುಲ್ವಾ ?''

''ಅವರುಗಳೇನು ಸದಾ ನಮ್ಮ ಮನೇಲಿರುಲ್ಲ, ನಮ್ಮ ಹಿಂದೆ ಹಿಂದೆ ಬಂದು ಕದ್ದು ಕದ್ದು ನಿಂತ್ಕೊಳ್ಳೋಲ್ಲ...'' ಹರೀಶ ಏನಾದ್ರೂ ಕೆಟ್ಟದಾಗಿ ಬಿಹೇವ್ ಮಾಡಿದ್ರೆ ನಾನು ಅವನನ್ನು ಬಿಡೋನಲ್ಲ, ನನ್ನ ನಿನ್ನ ಮಧ್ಯೆ ಬೇರೆ ಯಾರೇ ಬಂದು, ನಿನ್ನ ಅಟೆನ್ಷನ್ ಸೆಳೆಯಬಾರದು... ನನಗೆ ಅದು ಸಹಿಸುಲ್ಲ''

''ನಿಮಗೆ ಜಗ್ಗು ಮೇಲೆ ಯಾಕೆ ಸಂದೇಹ ? ಈ ಮನೆಗೆ ನಾನು ಬಂದಾಗ, ಅವನನ್ನು ನೋಡಿ ಅಯ್ಯೋ ಅಂತ ಅನ್ನಿಸ್ತು. ಒಂಟಿಯಾಗಿದ್ದ. ನಾನು ಬಂದಮೇಲೆ ಸ್ವಲ್ಪ ಗೆಲುವಾಗಿದಾನೆ ಅಂತ ಆಂಟೀನೇ ಅಂದ್ರು ನನ್ನಿಂದ ಅವನಲ್ಲಿ ಏನಾದ್ರೂ ಇಂಪ್ರೂವ್‌ಮೆಂಟ್ ಆಗೋದಾದ್ರೆ ಆಗಲಿ ಅಂತ ಅವನ ಜೊತೆ ಸ್ವಲ್ಪ ಹೊತ್ತು ಇರ್ತಿದ್ದೆ. ಅದರಲ್ಲಿ ಅವನ ತಪ್ಪೇನೂ ಇಲ್ಲ.''

''ನನ್ನದೂ ತಪ್ಪಿರಲಿಲ್ಲ. ಆದರೆ ಅಮ್ಮನ ಪ್ರೀತಿ ನನಗೆ ಸಾಕಾದಷ್ಟು ಸಿಗಲಿಲ್ಲ. ಸದಾ ಜಗ್ಗೂ ಜಗ್ಗೂ ಅಂತ ಅವನನ್ನೇ ನೋಡಿಕೊಳ್ತಾ ಇದ್ಲು. ನನ್ನನ್ನು ದೂರ ಮಾಡಿ ಬಿಟ್ಟಳು... ಇದು ಯಾರ ತಪ್ಪು ?''

ಇವೆಲ್ಲಾ ಹಳೆಯ ಗಾಯಗಳು ಇವನಾಗಿಯೇ ಮಾಡಿಕೊಂಡದ್ದು. ಇವುಗಳನ್ನು ಇವನು ಮರೆಯುವುದೇ ಇಲ್ಲವೇನೋ ಎಂದುಕೊಂಡಳು. ಮಾತನ್ನು ಮರೆಸುವಂತೆ ಕೇಳಿದಳು.

''ಏರ್‌ಪೋರ್ಟಿಗೆ ನಾನೂ ಬರಲಾ ? ನಾನೆಂದೂ ಏರ್‌ಪೋರ್ಟ್ ನೋಡಿಯೇ ಇಲ್ಲ...''

''ಈ ಸಾರಿ ಬೇಡ. ನಾನು ಮಮ್ಮೀನ ಒಂದು ಸಲವೂ ಕರೆದುಕೊಂಡು ಹೋಗಿಲ್ಲ. ಅವಳಿಗೆ ಬೇಸರವಾಗುತ್ತದೆ. ಮುಂದಿನ ಸಾರಿ, ಪ್ಲೇನ್‌ನಲ್ಲೇ ಹಾರಿ ಬಿಡೂವಂತೆ'' ಅವಳ ಗಲ್ಲವನ್ನು ಸವರಿದ. ಸುಮತಿ ಅವನಿಗೆ ಒರಗಿಕೊಂಡಳು.

''ನೋಡು... ನೋಡು... ಅಲ್ಲಿ ನೋಡು ಅವನು ಬಂದು ನಿಂತಿದಾನೆ''

ಸುಮತಿ ಬೆಚ್ಚಿ ಅವನಿಂದ ದೂರ ಸರಿದಳು. ''ನಮ್ಮದೇ ತಪ್ಪು ಸಂಕೇತ್. ಅವನು ನೋಡ್ತಾನೆ ಅಂತ ತಿಳಿದೂ... ಆದರೆ ಒಂದೇ ಒಂದು ಧೈರ್ಯ, ಆಂಟಿಗೆ ಹೋಗಿ ಹೇಳುಲ್ಲ. ಅದಕ್ಕೆ ಥ್ಯಾಂಕ್ಸ್ ಹೇಳಬೇಕು.''

''ಥ್ಯಾಂಕ್ಸ್ ಬೇರೆ ಕೇಡು ಈ ದಡ್ಡನಿಗೆ... ಏ ಹೋಗೋ. ಬಂದು ಬಿಟ್ಟ ಕೆಲಸವಿಲ್ಲದೇ'' ಅವನನ್ನು ಗದರಿದ. ಸುಮತಿ ಹೊರಬಂದಳು. ಜಗ್ಗು ಅವಳ ಕೈ ಹಿಡಿದ. ಅವಳು ಕೊಸರಿಕೊಂಡಳು.

''ಸುಮ್ನೇ ಹೋಗೋ ಜಗ್ಗು ಬೇಜಾರು ಮಾಡಬೇಡ'' ಅವಳೂ ಗದರಿದಾಗ, ಜಗ್ಗು ಏನೋ ಹೇಳುವವನಂತೆ ತೊದಲಿದ.

''ಸುಮ್ನೇ ಹೋಗ್ತೀಯೋ ಇಲ್ವೋ...'' ಅವಳು ಮತ್ತೆ ಗದರಿದಾಗ ಸಂಕೇತನೂ ಹೊರಗೆ ಬಂದ. ಅವನನ್ನು ಕಂಡ ಕೂಡಲೇ ಜಗ್ಗು ಇಳಿದು ಹೋದ. ಸುಮತಿ ತನ್ನ ರೂಮಿಗೆ ಬಂದುಬಿಟ್ಟಳು.

''ಏಳು ರೆಡಿ ಮಾಡ್ಕೋ... ನಾವು ಡಿನ್ನರ್‌ಗೆ ಹೊರಗೆಲ್ಲಾದ್ರೂ ಹೋಗೋಣ.''

"ಆಂಟಿಗೆ ಏನು ಹೇಳೋದು."

"ಏನೋ ಒಂದು ಹೇಳಿದ್ರಾಯ್ತು. ಆ ಮುತ್ತಿನ ಸೆಟ್ ಇದೆಯಲ್ಲ ಅದನ್ನು ಹಾಕ್ಕೋ..."

"ಡಿನ್ನರ್‌ಗೆ ಯಾಕೆ ಮುತ್ತಿನ ಸೆಟ್...? ಹೀಗೇ ಬರ್ತೀನಿ."

"ಹಾಗಾದ್ರೆ ಅದನ್ನು ಯಾವಾಗ ಹಾಕಿಕೊಳ್ತೀಯಾ ? ನಿನ್ನ ಮೈಮೇಲೆ ಹೇಗೆ ಕಾಣುತ್ತೆ ಅಂತ ನಾನು ನೋಡಬೇಕಲ್ಲ..." ಅವಳ ಮುಖದ ಮೇಲೆ ಬೆರಳುಗಳನ್ನಾಡಿಸಿದ.

"ರಾತ್ರಿ ಡಿನ್ನರ್‌ನಿಂದ ಬಂದ ಮೇಲೆ ಹಾಕಿಕೊಂಡು ತೋರಿಸ್ತೀನಿ.

"ಓ...ಕೇ... ಹಾಗೇ ಮಾಡು" ಅಂತಂದು ಕೆಳಗಿಳಿದು ಬಂದ.

"ಮಮ್ಮೀ, ನಾನು ದಿನೇಶನ ಮನೆಗೆ ಹೋಗ್ತಿದೀನಿ." ಎಂದು ಸುಮತಿಗೆ ಕೇಳುವಂತೆ ಜೋರಾಗಿ ಹೇಳಿ ಮನೆಯಿಂದ ಹೊರಬಿದ್ದ ಕೆಲವೇ ನಿಮಿಷಗಳಲ್ಲಿ ಸುಮತಿಯು ಸಿದ್ಧಳಾಗಿ ಬಂದಳು.

"ನನ್ನ ಫ್ರೆಂಡ್ ಒಬ್ಬಳ ಎಂಗೇಜ್‌ಮೆಂಟ್ ಇದೆ. ಎಷ್ಟು ಹೊತ್ತಾಗುತ್ತೋ ಗೊತ್ತಿಲ್ಲ. ನನಗೋಸ್ಕರ ಕಾಯಬೇಡಿ" ಎಂದಳು. ಜಾನಕಿಯ ಸಂದೇಹದ ಕಣ್ಣಗಳ ನೋಟ ಅವಳ ಮೇಲೆ ಹರಿದಾಡಿತು. ಈ ನಡುವೆ ಬದಲಾಗಿದಾಳೆ... ತನ್ನಿಂದ ಏನನ್ನೋ ಮುಚ್ಚಿಡ್ತಾ ಇದಾಳೆ ಎಂಬ ಸಂಶಯ ಇಣುಕಿತ್ತು. ಆದರೂ ಕೇಳಲು ಹಿಂಜರಿದಳು. ಆಟೋ ರಿಕ್ಷಾ ಸ್ಟ್ಯಾಂಡ್ ಬಳಿ ಸಂಕೇತ ಇವಳಿಗಾಗಿ ಕಾಯುತ್ತಾ ನಿಂತಿದ್ದ. ಇಬ್ಬರೂ ರಿಕ್ಷಾ ಹತ್ತಿ, ಎಂ.ಜಿ. ರೋಡ್‌ಗೆ ಬಂದರು. ಅಲ್ಲಿ ಇಲ್ಲಿ ಕೈ ಕೈ ಹಿಡಿದು ಸುತ್ತಾಡಿ, ಒಂದು ದೊಡ್ಡ ಹೋಟೆಲ್ಲಿಗೆ ಬಂದರು. ಅಲ್ಲಿ ಡಿನ್ನರ್ ಮುಗಿಸಿಕೊಂಡು ಮತ್ತೆ ರಸ್ತೆಗಿಳಿದಾಗ, ಅವರಿಗೆ ಹರೀಶ ಎದುರಾದ.

"ಅದೇನೋ ನೀನಿಲ್ಲಿ... ಸುಮತಿ ಮೇಡಂ ಜೊತೆ..." ಹರೀಶ ಸಂಕೇತನ ಬೆನ್ನ ಮೇಲೆ ಲಘುವಾಗಿ ಗುದ್ದಿದ.

"ಏನೂ ಇಲ್ಲ. ಸ್ವಲ್ಪ ಷಾಪಿಂಗ್ ಇತ್ತು ಬಂದಿದ್ದೆವು" ಅಂತಂದ.

"ಷಾಪಿಂಗ್ ಬ್ಯಾಗ್‌ಗಳೇ ಇಲ್ಲ... ಚಕ್ಕರ್ ಕ್ಯಾ ಹೈ ?"ಚುಡಾಯಿಸಿದ.

"ಷಟಪ್... ಇನ್ನು ಷಾಪಿಂಗ್ ಮಾಡಿಲ್ಲ... ಅದಕ್ಕೇ ಬ್ಯಾಗ್‌ಗಳಿಲ್ಲ"

"ಅಂಗಡಿ ಬಾಗಿಲುಗಳೆಲ್ಲ ಮುಚ್ತಾ ಇವೆ. ಇನ್ನೆಂಥ ಷಾಪಿಂಗ್... ಬಾ... ಡಿನ್ನರ್‌ಗೆ ಹೋಗೋಣ... ಬನ್ನಿ ಮೇಡಂ, ಇಲ್ಲಿಯ ಡಿಷಸ್ ತುಂಬಾ ಚೆನ್ನಾಗಿರುತ್ತೆ" ಸುಮತಿ ಸಂಕೇತನ ಕಡೆ ನೋಡಿದಳು ಅವಳು ಗಲಿಬಿಲಿಗೊಂಡಳು.

"ಮಮ್ಮೀ ಕಾಯ್ತಾ ಇರ್ತಾಳೆ. ರಾತ್ರಿಯ ಊಟಕ್ಕೆ ಬರ್ತೀನಿ ಅಂತ ಹೇಳಿದೀನಿ... ಹೊತ್ತಾಗುತ್ತೆ ಸೀಯೂ..." ಎನ್ನುತ್ತಾ ಆಟೋ ರಿಕ್ಷಾ ನಿಲ್ಲಿಸಿದ.

"ಹುಂ. ಹತ್ತು ಸುಮತಿ..." ಅವನು ಹೇಳಿದ್ದು ಹರೀಶನಿಗೆ ಕೇಳಿಸಿತ್ತು. ಏನೋ ಗುಟ್ಟಿದೆ. ಪತ್ತೆ ಹಚ್ಚಲೇಬೇಕು ಎಂದುಕೊಂಡು, ಹಿಂದೆಯಿ ಇನ್ನೊಂದು ರಿಕ್ಷಾ ಹಿಡಿದು, ಅವರಿಬ್ಬರನ್ನು ಫಾಲೋ ಮಾಡಿದ. ಮನೆ ಮುಂದೆ ರಿಕ್ಷಾ ನಿಂತಿತು. ಸುಮತಿ ಗೇಟಿನ ಬಳಿಗೆ ಹೋದಳು. ಹಿಂದೆಯೇ ಹರೀಶ ಕುಳಿತಿದ್ದ ರಿಕ್ಷಾ ಬಂದು ನಿಂತಿತು. ಆಟೋದವನಿಗೆ ದುಡ್ಡು ಕೊಡುತ್ತಿದ್ದ ಸಂಕೇತ ಪಕ್ಕಕ್ಕ ತಿರುಗಿದ. ಹರೀಶ! ಹುಬ್ಬು ಗಂಟಿಕ್ಕಿದ.

"ನಾನು ನಿನ್ನನ್ನೇ ಫಾಲೋ ಮಾಡ್ಕೊಂಡು ಬಂದೆ. ನಿನಗೆ ಗೊತ್ತಾಗಲಿಲ್ಲವಾ ?"

"ಇಲ್ಲ... ಯಾಕೆ ? ಏನೀಗ ?"

"ಗೊತ್ತಾಗಿದ್ದಿದ್ರೆ ಪಕ್ಕದ ಗಲ್ಲೀಲಲ್ಲೋ ಮಾಯವಾಗ್ತಿದ್ರಿ ಅಲ್ವಾ !"

"ಮಾಯ ಆಗೋ ಅಂತ ಕೆಲಸ ನಾನೇನು ಮಾಡಿದೀನಿ ?"

"ಇದುವರೆಗೂ ನೀನ್ಯಾಕೆ ನನಗೆ ಹೇಳಲಿಲ್ಲ... ನೀನು ಚಿತ್ರಾಂಗದೇನ ಲವ್ ಮಾಡ್ತಿದೀನಿ" ಅಂತ.

"ಅದು ನನ್ನ ಪರ್ಸನಲ್ ವಿಷಯ. ನಿನಗೆ ಹೇಳಲಿಲ್ಲ ಅಷ್ಟೆ"

"ಅದು ನಿನ್ನ ಪರ್ಸನಲ್ ವಿಷಯ ನಿಜ. ಆದರೂ ನೀನು ನನಗೆ ಹೇಳಬೇಕಾಗಿತ್ತು. ನಾನು ನಿನ್ನ ಫ್ರೆಂಡ್ ಅಲ್ವಾ ? ಮುಂಚೆ ನೀನು ಹೀಗಿರಲಿಲ್ಲ."

"ನಾನು ಬದಲಾಗಿದೀನಿ ಅಂತ ನೀವುಗಳೆಲ್ಲಾ ಹೇಳ್ತಾನೇ ಇದೀರಿ..."

"ಆದರೆ, ನಮಗೆ ಈ ಡೌಟು ಬರಲಿಲ್ಲಪ್ಪಾ... ಅಂತೂ ಚಿತ್ರಾಂಗದೆ ನಿನ್ನ ಮೇಲೆ ಬಲೆ ಬೀಸಿದಳು... ನೀನು ಅದರೊಳಗೆ ಬಿದ್ದೆ." ನಕ್ಕ

"ಇಲ್ಲ, ನಾನೇ ಅವಳ ಮೇಲೆ ಬಲೆ ಬೀಸಿದ್ದು... ನಿನಗೇನು ತೊಂದರೆ ?"

"ಒಂದು ತೊಂದರೆ, ಇದೆ, ಫ್ರೆಂಡ್, ಸುಮತೀನ ಗೋಪಾಲನೂ ಇಷ್ಟಪಟ್ಟಿದ್ದಾನೆ. ನಿನ್ನನ್ನು ಕೇಳು ಅಂತ ಹೇಳ್ತಾನೆ ಇದ್ದ.... ತಾನಿರೋದು ನೋಡಿದರೆ ಹಾಗೆ ಸುಮತಿಯಂತಹ ಸ್ಮಾರ್ಟ್‌ಗರ್ಲ್ ಬೇಕಂತೆ ಅವನಿಗೆ' ಹೆ. ಹೆ. ಅಂತ ನಕ್ಕ.

"ಗೋಪಾಲ ನಿಜವಾಗಿಯೂ ಹಾಗೆ ಹೇಳಿದ್ನಾ ? ಅಥವಾ ನೀನು ಸುಳ್ಳು ಹೇಳ್ತಾ ಇದೀಯಾ ?" ಅನುಮಾನದಿಂದ ಕೆಕ್ಕರಿಸಿ ನೋಡಿದ

"ನಾನೇಕೆ ಸುಳ್ಳು ಹೇಳಲಿ ? ಬೇಕಾದ್ರೆ ಅವನನ್ನೇ ಕೇಳು. ಹುಂ."

"ನಂಗ್ಯಾಕೋ ನಿನ್ನ ಮೇಲೇ ಅನುಮಾನ. ಗೋಪಾಲನ ಹೆಸರನ್ನು ಹೇಳ್ತಿದೀಯ ಅಂತ ಅನ್ನಿಸ್ತಿದೆ."

''ಇಲ್ಲವ್ೋ...? ನನಗೂ ಸುಮತಿ ಇಷ್ಟವೇ... ಆದರೆ ನಾನು ಯಾರನ್ನೂ ಲವ್ ಮಾಡೋ ಹಾಗೇ ಇಲ್ಲ.''

''ಯಾಕೋ... ನೀನು... ಸರಿಯಾಗಿದೀಯ ತಾನೇ...'' ಸಂಕೇತ ಕಣ್ಣು ಹೊಡೆದು ನಕ್ಕಾಗ ಹರೀಶ ಬೆಪ್ಪನಂತೆ ನೋಡಿದ. ನಂತರ ಗಂಭೀರದಿಂದ ನುಡಿದ.

''ಏನೇನೋ ಆಡ್ತೀಯಲ್ಲೋ... ಈಗಾಗಲೇ ನನ್ನ ಮದುವೆ ಗೊತ್ತಾಗಿದೆ. ನನ್ನ ಸೋದರ ಮಾವನ ಮಗಳು ವಿಮಲನ ಜೊತೆ ನನ್ನ ಮದುವೆ ಫಿಕ್ಸ್ ಆಗಿದೆ.''

''ಯಾಕೋ ಇದುವರೆಗೂ ಈ ವಿಷಯವನ್ನು ಹೇಳಿರಲಿಲ್ಲ. ನಿನ್ನ ವಿಷಯಾನ ಗುಟ್ಟಾಗಿಟ್ಟು, ನನ್ನ ಹಿಂದೆ ಸ್ಪೈ ಮಾಡ್ತೀಯಾ ?'' ಗದರಿದ.

''ಸಾರಿ ಕಣೋ... ನನಗೆ ಏನೋ ಅನುಮಾನವಿದ್ದೇ ಇತ್ತು... ಆದರೆ ನೀನೋ ಸಿಡುಕ. ಕೇಳಿದ್ರೆ ಎಲ್ಲಿ ಬೈತೀಯೋ ಅಂತ ಅಂದ್ಕೊಂಡಿದ್ದೆ. ಇವತ್ತು ರೆಡ್ ಹ್ಯಾಂಡ್ ಆಗಿ ಹಿಡಿದು ಬಿಟ್ಟೆ...'' ತಾನು ಗೆದ್ದವನಂತೆ ಸಂಭ್ರಮದಿಂದ ನುಡಿದ.

''ಓ...ಕೆ... ಆದರೆ ಈಗಲೇ ಯಾರಿಗೂ ಹೇಳಬೇಡ. ನನ್ನ ಮಮ್ಮೀಗೂ ಸಹ ವಿಷಯ ಗೊತ್ತಿಲ್ಲ. ಸುಮತಿಯ ಅಕ್ಕನ ಮದುವೆಯಾದ ನಂತರ ನಮ್ಮ ಮದುವೆ. ಅಲ್ಲೀವರೆಗೂ ನಾವು ಬರೀ ಫ್ರೆಂಡ್ಸ್...''

''ಫ್ರೆಂಡ್‌ನ ಯಾರಿಗೂ ಗೊತ್ತಾಗದಂತೆ ಡಿನ್ನರ್‌ಗೆ ಕರೆದುಕೊಂಡು ಹೋಗ್ತಾರಾ... ಯಾರಾದ್ರೂ ?''

''ಏನು ಮಾಡಲಿ ? ಸುಮತಿ ಅಮ್ಮನ ಪೇಯಿಂಗ್ ಗೆಸ್ಟ್... ನಾನು ಅನ್ ವಾಂಟೆಡ್ ಗೆಸ್ಟ್... ಬಹುಶಃ ಮಮ್ಮಿಗೆ ಇಷ್ಟವಾಗುಲ್ಲ. ಅದಕ್ಕೇ ಹೇಳಲಿಲ್ಲ.''

''ಅದೇ ನನಗೆ ಸರ್ಪ್ರೈಸ್... ಬಂದ ಒಂದು ತಿಂಗಳಿನೊಳಗೆ ಎಷ್ಟು ಡೆವಲೆಪ್‌ಮೆಂಟ್... ಏನ್ಕತೆ ! ... ಪರವಾಗಿಲ್ವೇ ?''

''ಇದೂ ಒಂದು ತರಹ ಆಕ್ಸಿಡೆಂಟ್... ದಿನೇಶನ ತಾಯಿ ಆಕ್ಸಿಡೆಂಟ್‌ನಲ್ಲಿ ಸತ್ತು ಹೋದದಿನ, ಸುಮತಿಯ ಮಾರಲ್ ಸಪೋರ್ಟ್ ಇಲ್ಲದೇ ಇದ್ದಿದ್ದರೆ, ನಾನು ಸನ್ಯಾಸಿಯಾಗಿ ಹೊರಟು ಹೋಗ್ತಿದ್ದೆ...''

''ಈಗ ಹೇಗಿದೆ ಈ ಸನ್ಯಾಸಿಯ ಲೈಫ್... ನೀನೋ ವಿದೇಶದಲ್ಲಿರುವವನು, ಹುಡುಗಿಯನ್ನು ವಶಮಾಡಿಕೊಳ್ಳುವ ಆರ್ಟ್ ಚೆನ್ನಾಗಿ ಗೊತ್ತಿರುತ್ತೆ.

''ಬದ್ಮಾಷ್, ಸುಮ್ಮನಿರು. ಸುಮತೀನೇ ನನ್ನ ಫರ್ಸ್ಟ್ ಲವ್... ಇದುವರೆಗೂ ನಾನು ಯಾವ ಹುಡುಗಿಯನ್ನು ಕಣ್ಣೆತ್ತಿ ಸಹ ನೋಡಿಲ್ಲ.''

"ನಿನ್ನ ಮಾತನ್ನು ನಂಬಬೇಕಾ ?"

"ನಿನ್ನಾಣೆ ಕಣೋ... ನಾನು ನಿನ್ನಂಥೋನಲ್ಲ... ನಿಮ್ಮತ್ತೆ ಮಗಳು ಚಿಂತಾಮಣಿ ನಿನಗೋಸ್ಕರ ಕಾಯ್ತ ಇರುವಾಗ, ಬೇರೆ ಹುಡುಗೀರನ್ನು ನೋಡೋಕೆ !"

"ಪರವಾಗಿಲ್ಲಪ್ಪಾ ನೀನೂನು... ಚಿಂತಾಮಣಿ ಹಾಡು ಗೊತ್ತಾ ನಿನಗೆ ?"

"ನಮ್ಮತ್ತೆ ಮಗಳು ಚಿಂತಾಮಣಿ ಅನ್ನೋ ಹಳೇ ಹಾಡು... ಸ್ವಲ್ಪ ಸ್ವಲ್ಪ ನೆನಪಿನಲ್ಲಿದೆ. ನೆಕ್ಸ್ಟ್ ಟೈಮ್ ಬಂದಾಗ ನಿನ್ನ ವುಡ್‌ಬೀನ ಪರಿಚಯ ಮಾಡಿಸಿ ಕೊಡಬೇಕು... ಇಲ್ಲದಿದ್ದರೆ ನೀನು ಎಂಥೋನು ಅಂತ ನಿಮ್ಮ ಮಾವನಿಗೆ ಹೇಳಿ ಬಿಡ್ತೀನಿ... ಹಾಗೇ ಇನ್ನು ಮುಂದೆ ಸುಮತಿಯನ್ನು, ಲಕ್ಷ್ಮಣ, ಸೀತೆಯನ್ನು ನೋಡುತ್ತಿದ್ದ ರೀತಿಯಲ್ಲಿ ನೋಡಬೇಕು ತಿಳೀತಾ !" ತೋರು ಬೆರಳು ತೋರಿ ಎಚ್ಚರಿಸಿದ.

"ಹಾಗಾದ್ರೆ ಗೋಪಾಲನಿಗೆ ಏನು ಹೇಳಲಿ ? ಭರತನ ತರಹ ಇರು ಅಂತ ಹೇಳಲೋ, ಶತೃಘ್ನನ ತರಹ ಇರು ಅಂತ ಹೇಳಲೋ...? ಒಳಗೆ ಕರೆಯಲ್ವಾ ? ಬೀದೀಲೇ ನಿಂತು ಮಾತನಾಡಿಸ್ತಾ ಇದೀಯಲ್ಲ."

"ಈ ಮಾತನ್ನೆಲ್ಲ ಮನೆಯೊಳಗೆ ಆಡುಕ್ಕೆ ಆಗ್ತಿರಲಿಲ್ಲ, ಒಳಗೆ ಬಾ ಊಟ ಮಾಡೋವಂತೆ."

"ನನ್ನ ಊಟ ಆಯ್ತು... ನಾವು ಒಂದಿಬ್ಬರು ಕಲೀಗ್ಸ್ ಒಂದು ಮೀಟಿಂಗ್‌ಗೆ ಬಂದಿದ್ದೆವು. ಅಲ್ಲೇ ಹೋಟೆಲಿನಲ್ಲಿ ಊಟ ಮಾಡಿದೆವು. ನಾನು ಬರ್ಲಾ ?"

"ನಾಳೆ ರಾತ್ರಿಯ ಫ್ಲೈಟ್‌ನಲ್ಲಿ ಹೊರಡ್ತಾ ಇದೀನಿ ಗೊತ್ತಲ್ಲ, ಏರ್‌ಪೋರ್ಟ್‌ಗೆ ಬರ್ತೀಯಾ ?"

"ಸುಮತೀನೂ ಬರ್ತಾರಾ ?"

"ಇಲ್ಲ, ಸುಮತಿ, ಮಮ್ಮಿ ಯಾರೂ ಬರುಲ್ಲ, ನಿನಗೆ ಆಗದಿದ್ದರೆ, ನೀನೂ ಬರಬೇಡ. ಸುಮ್ಮನೇ ಕೇಳಿದೆ. ಅಷ್ಟೇ..."

"ನೀನು ಬರಬೇಡ ಅಂತಂದ್ರೂ ನಾನು ಬರ್ತೀನಿ... ಗುಡ್‌ನೈಟ್.. ಅಂಡ್ ಕಂಗ್ರಾಜುಲೇಷನ್ಸ್..."

"ಥ್ಯಾಂಕ್ಸ್... ಪ್ಲೀಸ್ ಈಗಲೇ ಯಾರಿಗೂ ಏನನ್ನು ಹೇಳಬೇಡ. ಇನ್ನೆರಡು ತಿಂಗಳಿಗೆ ಮತ್ತೆ ಬರ್ತೀನಿ... ಅಲ್ಲಿಯವರೆಗೂ ಯಾರಿಗೂ ಗೊತ್ತಾಗಬಾರದು... ಓ.ಕೆ."

ಓ.ಕೆ. ಖಂಡಿತಾ ಹೇಳುಲ್ಲ ಎಂದು ಹೇಳಿ, ಅವನ ಕೈಯನ್ನು ವಿಶ್ವಾಸದಿಂದ ಒತ್ತಿದ. ಸಂಕೇತನ ಕಣ್ಣುಗಳು ಹನಿಗೂಡಿದ್ದವು. ತಾನು ಹರೀಶನ್ನ ತಪ್ಪು ತಿಳಿದಿದ್ದೆ. ಸುಮತಿ ಹೇಳೋದು

ಸರಿ. ನಾನು ಅವಿವೇಕಿ ಎಂದುಕೊಂಡ.

ಜಾನಕಿ ಅಲ್ಲೇ ಕುಳಿತಿದ್ದಳು "ಯಾರ ಹತ್ತಿರ ಮಾತ್ನಾಡ್ತಿದ್ದೆ ಇಷ್ಟೊತ್ತು ?" ಕೇಳಿದಳು.

"ಹರೀಶ ನನ್ನ ಜೊತೆಗೇ ಬಂದಿದ್ದ."

"ಒಳಗೆ ಬರಲೇ ಇಲ್ಲ ಅವನು."

"ನನಗೆ ಡ್ರಾಪ್ ಕೊಡೋಕೆ ಬಂದಿದ್ದ. ಹಾಗೇ ಹೊರಟು ಹೋದ. ನಾನು ನಾಳೆ ರಾತ್ರಿಯ ಫ್ಲೈಟ್‌ನಲ್ಲಿ ವಾಪಸ್ಸು ಹೋಗ್ತಾ ಇದೀನಿ."

"ಹೌದೇನೋ... ಆರುವಾರ ಕಳೆದದ್ದೇ ಗೊತ್ತಾಗಲಿಲ್ಲ. ನಿನಗೆ ಬೇಕಾದ ತಿಂಡಿ ತೀರ್ಥ ಒಂದನ್ನು ಮಾಡಿಕೊಡಲಿಲ್ಲ ನಾನು."

"ಮುಂದಿನ ಸಲ ಬಂದಾಗ ಮಾಡಿಕೊಡುವಂತೆ..." ತಾಯಿಯ ಭುಜದ ಮೇಲೆ ತಲೆಯನ್ನಿಟ್ಟ. ಅವಳು ವಿಶ್ವಾಸದಿಂದ ಅವನ ಕೆನ್ನೆ ಸವರಿದಳು.

ಮೇಲಿನ ಮೆಟ್ಟಿಲ ಬಳಿ ನಿಂತಿದ್ದ ಸುಮತಿ ಗಮನಿಸಿದ್ದಳು. ಅವಳೂ ಭಾವುಕಳಾಗಿದ್ದಳು. ತಾಯಿ ಮಗನ ಪ್ರೀತಿಯಲ್ಲಿ ಕಡಿಮೆ ಬರುವುದೆಂದರೇ ಸಾಧ್ಯವೆ ? ನಗೆಯುತ್ತಾ ಮೆಟ್ಟಿಲು ಹತ್ತಿ ಬಂದವನನ್ನು ಎದುರುಗೊಂಡಳು...

"ಅದೇನು ? ಮಮ್ಮಿಗೆ ಮಸ್ಕಾ ಹೊಡೀತಿದ್ದ ಹಾಗಿತ್ತು..."

"ಏನಿಲ್ಲ ಹಾಗೇ... ನನಗೂ ಮಮ್ಮೀನ ಕಂಡರೆ ಪ್ರೀತಿ ಇದೆ."

"ಪ್ರೀತಿ ಇದೆ. ಅದನ್ನು ಎಕ್ಸ್‌ಪ್ರೆಸ್ ಮಾಡುಲ್ಲ ಅಷ್ಟೇ... ಹೀಗೆ ಸದಾಕಾಲ ಯಾಕೆ ಇರಬಾರದು ?"

"ಇರೋಕೆ ಅವನೆಲ್ಲಿ ಬಿಡ್ತಾನೆ ? ಸದಾ ಅಮ್ಮನ ಸೆರಗಿನಲ್ಲೇ ಅವಿತಿಟ್ಟು ಕೊಂಡಿರುತ್ತಾನೆ..." ಸುಮತಿ ಸೀರೆಯ ಸೆರಗನ್ನು ಸರಿ ಮಾಡಿಕೊಂಡಳು.

"ಅರೆ ವ್ಹಾ..." ಎನ್ನುತ್ತಾ ಅವಳು ಧರಿಸಿದ್ದ ಮುತ್ತಿನ ನೆಕ್ಲೇಸನ್ನೇ ನೋಡಿದ.

"ನಾನು ಅಷ್ಟೊ ಹೊತ್ನಿಂದ ಕಾಯ್ತಾ ಇದೀನಿ... ಯಾರು ಸಿಕ್ಕಿದ್ರು ?"

"ಯಾರೂ ಇಲ್ಲ... ಒಳಗೆ ಬಾ... ನಾನು ನಿನಗೆ ಒಂದು ಮಾತು ಹೇಳಬೇಕು ಎಂದು ಅವಳನ್ನು ಒಳಕ್ಕೆ ಎಳೆದುಕೊಂಡು ಬಂದ...

"ಈ ಮುತ್ತಿನ ಓಲೆ, ಈ ಮುತ್ತಿನ ಸೆಟ್ಟು... ನಿನಗೇನೋ ತುಂಬಾ ಒಪ್ಪುತ್ತೆ ಸುಮತಿ. ಆದರೆ ನನಗೆ ಯಾಕೋ ಇಷ್ಟವಾಗ್ತಿಲ್ಲ... ಪ್ಲೀಸ್ ತೆಗೆದುಬಿಡು" ಎಂದ.

"ನನಗೂ ಇಷ್ಟವಿರಲಿಲ್ಲ. ನೀವು ಹೇಳಿದ್ದರಿಂದಲೇ ಹಾಕಿಕೊಂಡೆ." ಎನ್ನುತ್ತಾ ಒಂದೊಂದನ್ನೇ ಕಳಚಿದಳು. ಸಂಕೇತ ಸುಮತಿಯ ಸೆರಗಿಗೆ ಕೈ ಹಾಕಿದ. ಈ ಮುತ್ತಿನ ಸೆಟ್ಟು ಹೇಗಿರುತ್ತೆ ನೋಡೋಣ ಎನ್ನುತ್ತಾ ಅವಳ ಮುಖ, ಕೆನ್ನೆ ಕಿವಿ ಕತ್ತುಗಳ ಮೇಲೆಲ್ಲಾ ಮುತ್ತಿನ ಮಣಿಗಳನ್ನುದುರಿಸಿದ. ಈ ಹವಳದ ತುಟಿಗಳಿಗೆ ಮುತ್ತಿನ ಅಲಂಕಾರ ಎನ್ನುತ್ತಾ ತುಟಿಗಳನ್ನು ಚುಂಬಿಸಿದ... ಸುಮತಿ ಹಾಗೇ ಅವನಿಗೆ ಮುಖವನ್ನು ಒಡ್ಡಿ ನಿಂತಿದ್ದಳು. ಧಾರಾಕಾರವಾಗಿ ಮುತ್ತಿನ ಹನಿಗಳನ್ನು ಉದುರಿಸಿದ.

ಕೆಳಗಿನಿಂದ, ಜಾನಕಿ ಜಗ್ಗೂ ಜಗ್ಗೂ ಅಂತ ಏರು ಧ್ವನಿಯಲ್ಲಿ ಕರೆದಾಗ ಇಬ್ಬರೂ ಎಚ್ಚೆತ್ತರು. ಸಂಕೇತ ಅಲ್ಲಿಂದಲೇ ಕೇಳಿದ.

"ಏನಾಯ್ತು ?"

"ಜಗ್ಗೂ ಎಲ್ಲೋ ಕಾಣಲಿಲ್ಲ."

"ಅಲ್ಲೇ ಎಲ್ಲೋ ಬಿದ್ಕಂಡಿರ್ತಾನೆ... ಹಸಿವಾದಾಗ ಎದ್ದು ಬರ್ತಾನೆ. ನೀನು ಹೋಗಿ ಮಲಕ್ಕೋ..."

"ಸುಮತೀನ ಕೇಳು... ಜಗ್ಗು ಏನಾದ್ರೂ ಅಲ್ಲಿಗೆ ಬಂದಿದಾನಾ ಅಂತ..." ಅಷ್ಟರಲ್ಲಿ ಜಗ್ಗು ಮಹಡಿಯ ಬಳಿ ಕಂಡ.

"ಅಲ್ಲೇನು ಮಾಡ್ತಿದೀಯ... ಇಳಿದು ಬಾ ಕೆಳಗೆ" ಜಾನಕಿ ಅಬ್ಬರಿಸಿದಳು.

ಸುಮತಿ ಸಂಕೇತ ಒಬ್ಬರನ್ನೊಬ್ಬರು ನೋಡಿದರು. ಕೋಪದಿಂದ ಕೆಂಪಾಗಿದ್ದವನನ್ನು ಸಮಾಧಾನ ಗೊಳಿಸಿದಳು. ಆದರೂ ಅವನ ಮೂಡ್ ಕೆಟ್ಟುಹೋಗಿತ್ತು.

☆ ☆ ☆

'ಡಿನ್ನರ್'ನ ಚಾರ್ಮ್‌ನ್ನು ಹರೀಶ ಹಾಳು ಮಾಡಿದ... ಮಮ್ಮೀಗೆ ಮಸ್ಕಾ ಹೊಡೆದ್ರೂ, ಈಗ ನೋಡು ಏನಾಯ್ತು ? ಮಮ್ಮೀನೇ ನನ್ನ ಮೂಡ್ ಕೆಡಿಸಿ ಬಿಟ್ಟಳು. ನಾನೂ ಬದಲಾಗೋಣ ಅಂತಂದ್ರೆ ಇವರುಗಳೆಲ್ಲಿ ಬಿಡ್ತಾರೆ ?"

"ಹೋಗಲಿ ಬಿಡಿ ಸಂಕೇತ್... ಈ ರಾತ್ರಿ ನಮ್ಮದು... ನೀವು ಮತ್ತೆ ಬರುವವರೆಗೂ ನಾನು ಈ ರಸನಿಮಿಷಗಳನ್ನೇ ನೆನೆಸಿಕೊಂಡು ಕಾಲ ಕಳೀತೀನಿ." ಅವಳೇ ಅವನನ್ನು ಸಮೀಪಿಸಿದಳು.

"ಇಲ್ಲಿಯ ಸಿಚುಯೇಷನ್ ನೋಡಿದ್ರೆ, ನಿನ್ನನ್ನು ಇಲ್ಲಿ ಬಿಟ್ಟು ಹೋಗೋಕೆ ಮನಸ್ಸೇ ಬರ್ತಿಲ್ಲ. ಆದರೆ ನಾನೇನು ಮಾಡಲಿ ? ನೀನು ಇಲ್ಲಿರಲೇ ಬೇಡ. ಭದ್ರಾವತಿಗೆ ಹೊರಟು

ಹೋಗು... ಇಲ್ಲದಿದ್ದರೆ. ನನಗೆ ಅಲ್ಲಿಯೂ ನಿಶ್ಚಿಂತೆಯಿಂದ ಇರುಕ್ಕೆ ಆಗುಲ್ಲ...''

''ಕಾಲೇಜಿನ ಪರೀಕ್ಷೆ ಮುಗೀತಿದ್ದ ಹಾಗೇ ಹೊರಟು ಹೋಗ್ತೀನಿ.'' ಈಗ್ಲಾದ್ರೂ ನೆಮ್ಮದಿಯಿಂದ ನಿದ್ದೆ ಮಾಡಿ. ನಾಳೆ ರಾತ್ರಿ ನಿದ್ದೆ ಮಾಡೋಕೆಲ್ಲ ಆಗುತ್ತೆ ? ಸಂಕೇತ ಅವಳ ತೊಡೆಯ ಮೇಲೆ ತಲೆಯನ್ನಿಟ್ಟು ಮಲಗಿದ. ಸುಮತಿ ಮೃದುವಾದ ಕೈಗಳಿಂದ, ಅವನನ್ನು ಹಗುರವಾಗಿ ತಟ್ಟತೊಡಗಿದಳು.

☆ ☆ ☆

ಸಂಕೇತ ವಾಪಸ್ಸು ಹೋಗಿ ಇಪ್ಪತ್ನಾಲ್ಕು ಗಂಟೆಗಳು ಕಳೆದಿದ್ದವು. ಅವನಿಂದ ತಲುಪಿದ್ದಕ್ಕೆ ಫೋನು ಬಂದಿರಲಿಲ್ಲ. ಹರೀಶನೂ ಫೋನು ಮಾಡಿ ವಿಚಾರಿಸಿದ್ದ. ಸಂಕೇತ ಯಾವಾಗ್ಲೂ ಹೀಗೇ... ತಲುಪಿದ ಕೂಡಲೇ ಫೋನು ಮಾಡು ಅಂತ ಹೇಳಿದ್ರೂ ಉದಾಸೀನ ಮಾಡ್ತಾನೆ.'' ಜಾನಕಿ ಆಕ್ಷೇಪಣೆ ಮಾಡಿದಳು. ಅಲ್ಲೇ ಕೂತಿದ್ದ ಜಗ್ಗು ಸುಮತಿಯನ್ನೇ ದುರು ದುರು ನೋಡ್ತಿದ್ದ.

''ಯಾಕೋ ಏನಾಯ್ತೋ ಜಗ್ಗು ಊಟ ಮಾಡಿಲ್ವಾ ಇನ್ನು...''

''ಆಗ್ಲೇ ಆಗಿದೆ. ಆದರೂ ಯಾಕೋ ಎರಡು ದಿನದಿಂದ ಯಾಕೋ ಹೀಗೇ... ನಿಮಿಷಕ್ಕೊಂದು ಸಲ ದುರು ದುರು ಅಂತ ಏನನ್ನೋ ನೋಡ್ತಾನೆ... ನನಗಂತೂ ಅರ್ಥವಾಗ್ತಿಲ್ಲ. ನಾಳೆ ನಾಡಿದ್ದರಲ್ಲಿ ಡಾಕ್ಟರರ ಬಳಿಗೆ ಕರೆದುಕೊಂಡು ಹೋಗೋಣ ಅಂತ ಅಂದ್ಕೊಂಡಿದೀನಿ...

''ಸಂಕೇತ್ ಊರಿಗೆ ಹೊರಟು ಹೋಗಿದಾರಲ್ಲ, ಅವರನ್ನು ಮಿಸ್ ಮಾಡ್ತಿದಾನೆ ಅಂತ ಕಾಣಿಸುತ್ತೆ.''

''ಮಿಸ್ ಮಾಡೋಕೆ, ಇವರಿಬ್ಬರ ಮಧ್ಯೆ ಏನು ವಿಶ್ವಾಸವಿದೆ ? ಇವನೊಂದು ತರಹ ಅವಿವೇಕಿ, ಅವನೊಂದು ತರಹ ಅವವೇಕಿ... ಜಗ್ಗೂನ ಒಂದು ದಿನವಾದರೂ, ವಿಶ್ವಾಸದಿಂದ ಕಣ್ಣು ಬಿಟ್ಟು ನೋಡಿದವನಲ್ಲ, ಇವನಿಗೋ, ತನಗೆ ಒಬ್ಬ ಅಣ್ಣ ಇದಾನೆ ಅಂತ ಸಹ ಗೊತ್ತಿದೆಯೋ ಇಲ್ಲವೋ ...? ಜಗ್ಗು ಬಂದು ಸುಮತಿಯ ಬಳಿ ಬಂದು ನಿಂತಿದ್ದ. ಅವಳ ಕೈಯ ಬಳೆಗಳ ಮೇಲೆ ಕೈಯಾಡಿಸಿದ. ಸುಮತಿ ಸರ್‍ರನೆ ಕೈಯನ್ನೆಳೆದುಕೊಂಡಳು... ಜಗ್ಗು ಬೆ... ಬೆ... ಎಂದ.

ಸುಮತಿ ಅವನನ್ನು ಅತ್ತ ಸರಿಸಿ, ಅವನಿಂದ ದೂರ ಹೋಗಿ ನಿಂತಳು. ಅವನು ಹಲ್ಲು ಕಿರಿಯುತ್ತಾ ಅವಳ ಬಳಿಗೆ ಮತ್ತೆ ಬಂದಾಗ, ಅವಳು ಅಲ್ಲಿ ನಿಲ್ಲದೇ ಮಹಡಿ ಹತ್ತಿ ಹೋಗಿ, ತನ್ನ ರೂಮಿನ ಬಾಗಿಲನ್ನು ಹಾಕಿಕೊಂಡಳು.

''ಜಗ್ಗು ಬಾರೋ ಮಲಗೂವಂತೆ...'' ಜಾನಕಿ ಅವನನ್ನು ಬಲವಂತದಿಂದ ಎಳೆದುಕೊಂಡು ಹೋಗಿದ್ದಳು. ಅವಳಿಗೂ ಸುಮತಿಯ ವರ್ತನೆ ವಿಚಿತ್ರವಾಗಿ ಕಂಡಿತ್ತು. ಜಗ್ಗೂ ಹಿಂತಿರುಗಿ ಮಹಡಿಯನ್ನೇ ನೋಡುತ್ತಿದ್ದ.'' ಸಂಕೂ ಊರಿಗೆ ಹೋಗಿದಾನೆ ಕಣೋ... ನೀನು

ಸುಮ್ಮನೇ ಬಾ'' ಮಗನನ್ನು ಎಳೆದುಕೊಂಡು ರೂಮಿಗೆ ಹೋದಳು. ಸುಮತಿ ಉಸಿರು ಬಿಗಿ ಹಿಡಿದು ಮಲಗಿದಳು. ತಾನು ಜಗ್ಗೂಗೆ ಅವಮಾನ ಮಾಡಿದೆನೇನೋ ಅನ್ನೋ ಭಾವನೆ ಕಾಡತೊಡಗಿತು. ಜಗ್ಗು ಹಠ ಮಾಡಿದರೆ, ಆಂಟಿ ಹೊಡೆಯುವಳೆಂದು ಬಲ್ಲಳು. ಆದರೆ ಸಂಕೇತ ಬಾರಿ ಬಾರಿಗೂ ನೆನಪಿಗೆ ಬಂದು ಅವಳನ್ನು ಹಿಂದಕ್ಕೆ ಎಳೆಯುತ್ತಿದ್ದ... ಆಂಟಿಯನ್ನು ನೋಡುವುದೂ ಮುಜುಗರವೆನಿಸುತ್ತಿತ್ತು.

ಸಂಕೇತ ಊರಿಗೆ ಹೋಗಿ ಒಂದು ವಾರವಾಗಿತ್ತು. ಅವನಿಂದ ಫೋನು ಬಂದಿರಲಿಲ್ಲ. ಅದು ಬೇರೆ ಸುಮತಿಯನ್ನು ಚಿಂತಿಸುವಂತೆ ಮಾಡಿತ್ತು... ಸಂಕೇತನಿಗೇನಾಗಿರಬಹುದು ? ಇಲ್ಲಿಂದ ಹೋದ ಮೇಲೆ ಅವನು ತನ್ನನ್ನು ಮರೆತೇ ಬಿಟ್ಟಿರಬಹುದೇ...? ತಾನು ಸಲುಗೆಯಿಂದ ವರ್ತಿಸಿದ್ದು ತಪ್ಪು ಅಂತ ಇದುವೆರಗೂ ಅನ್ನಿಸಿರಲಿಲ್ಲ. ಈಗ ತಾನು ದುಡುಕಿದನೇನೋ ಅಂತ ಅನ್ನಿಸ್ತಿದೆ. ಅವನು ಹತ್ತಿರ ಬಂದಾಗ, ತಾನೇಕೆ ಅವನನ್ನು ದೂರ ಸರಿಸಲಿಲ್ಲ. ತನಗೇಕೆ ಅವನ ಸನಿಹ ಇಷ್ಟವಾಯಿತು ? ಸಂಪ್ರದಾಯಸ್ಥ ದೊಡ್ಡ ಕುಟುಂಬದಲ್ಲಿ ಬೆಳೆದವಳು, ಮದುವೆಗೆ ಮುಂಚೆಯೇ ತಾನು... ಹೀಗೆ ಅಂತ ತನ್ನ ತಂದೆ ತಾಯಿಗಳಿಗೆ ತಿಳಿದರೆ, ಅವರಿಗೆ ಅವಮಾನವಾಗುವುದಿಲ್ಲವೇ... ಗೊತ್ತಾಗಬಾರದು... ತಾನು ಮಾಡಿದ್ದು ತಪ್ಪು, ಆದರೆ ಸಂಕೇತನ ಮೇಲೆ ನನಗೆ ನಂಬಿಕೆ ಇದೆ. ವಿಶ್ವಾಸವಿದೆ... ಅವನೆಂದೂ ತನಗೆ ಮೋಸ ಮಾಡುವುದಿಲ್ಲ ಎಂದು ತನಗೆ ತಾನೇ ಹೇಳಿಕೊಂಡಳು. ಆದಷ್ಟು ಬೇಗ ಅವನು ವಾಪಸ್ಸು ಬರಲಿ... ತಮ್ಮಿಬ್ಬರ ಮದುವೆ ಆದಷ್ಟು ಬೇಗ ನೆರವೇರಲಿ'' ದೇವರಲ್ಲಿ ಪ್ರಾರ್ಥಿಸಿದಳು. ಮನಸ್ಸು ಹಗರವಾಗಿತ್ತು.

"ನಾನು ನೆನ್ನೆ ದಿನ ಜಗ್ಗೂನ ಡಾಕ್ಟರ ಹತ್ತಿರ ಕರೆದುಕೊಂಡು ಹೋಗಿದ್ದ. ಅವನು ಎಷ್ಟೋ ಇಂಪ್ರೂವ್ ಆಗಿದಾನೆ ಅಂತ ಹೇಳಿದರು. ಆದರೆ ಏನೋ ಕನ್‌ಫ್ಯೂಷನ್ ಇದ್ದ ಹಾಗಿದೆ ಅವನ ವರ್ತನೆಯಲ್ಲಿ... ಇತ್ತೀಚೆಗೆ ಏನು ನಡೀತು ಅಂತ ಕೇಳಿದ್ರು... ನಾನು ಸಂಕೇತ ಬಂದು ಹೋದದ್ದನ್ನು ತಿಳಿಸಿದೆ. ಅವನನ್ನು ಮಿಸ್ ಮಾಡ್ತಿರಬಹುದು ಅಂತ ಹೇಳಿದ್ರು, ನನಗೆ ನಂಬೋಕೇ ಆಗ್ತಿಲ್ಲ.'' ಜಾನಕಿ ನುಡಿದಳು.

ಸುಮತಿಗೂ ಆಶ್ಚರ್ಯವಾಗಿತ್ತು. ಸಂಕೇತ ತಮ್ಮನನ್ನು ಪ್ರೀತಿಯಿಂದ ಮಾತನಾಡಿಸಲಿಲ್ಲ. ಗದರಿಸಿದ್ದೇ ಹೆಚ್ಚು, ಅಷ್ಟಾದರೂ ಅಣ್ಣನ ಇರುವಿಕೆಯಿಂದ ಇವನ ವರ್ತನೆಯಲ್ಲಿ ಇಂಪ್ರೂವ್‌ಮೆಂಟ್ ಇದೆ. ಸಂಕೇತ ನಿಜವಾಗಿಯೂ ತಮ್ಮನನ್ನು ಪ್ರೀತಿಯಿಂದ ನೋಡಿಕೊಂಡರೆ, ಜಗ್ಗು ಖಂಡಿತಾ ಬದಲಾಗ್ತಾನೆ. ನಾನು ಎಷ್ಟೋ ಸಾರಿ ಹೇಳಿದರೂ ಸಂಕೇತ ನನ್ನ ಮಾತಿಗೆ ಬೆಲೆ ಕೊಡಲಿಲ್ಲ...... ನಾನು ಈ ವಿಷಯವನ್ನು ಅವನಿಗೆ ತಿಳಿಸಬೇಕು... ಅವನ ಫೋನು ನಂಬರ್ರು ಗೊತ್ತಿಲ್ಲ, ಮನೆ ಅಡ್ರೆಸ್ ಗೊತ್ತಿಲ್ಲ... ತನ್ನಲ್ಲೇ ಪೇಚಾಡಿಕೊಂಡಳು.

"ನಾನು ದಿನೇಶನ ತಂಗಿಯನ್ನು ನೋಡಿಕೊಂಡು ಬರೋಕೇ ಹೋಗಲಿಲ್ಲ. ಅವರುಗಳು ಏನಂದುಕೊಂಡರೋ'' ಜಾನಕಿ ನೊಂದುಕೊಂಡು ನುಡಿದಳು.

"ನೀವು ಹೋಗಿ ಬನ್ನಿ ಆಂಟೀ... ನಾನು ಮನೇಲಿರ್ತೀನಿ."

"ಜಗ್ಗೂನ ಏನು ಮಾಡಲಿ ? ನನಗೆ ಅವನದ್ದೇ ಅಡ್ಡಿ"

"ಅವನನ್ನು ನಾನು ನೋಡಿಕೊಳ್ತೀನಿ... ಒಂದಿಷ್ಟು ತಿನ್ನೋಕೆ, ಕುಡಿಯೋಕೆ ಅವನಿಗೆ ಕೈಗೆ ಸಿಗುವ ಹಾಗೆ ಇಟ್ಟು ಹೋಗಿ. ಅವನೂ ಖುಷಿಯಾಗಿರ್ತಾನೆ."

"ಅದೂ ನಿಜ, ಹೊಟ್ಟೆ ಬಾಕನಿಗೆ ಹೊಟ್ಟೆಗೆ ಒಂದಿಷ್ಟು ಇದ್ದರೆ ಸಾಕು. ಎರಡು ನಿದ್ದೆ ಮಾತ್ರೆಗಳನ್ನು ಕೊಟ್ಟು ಬಿಡ್ತೀನಿ ತಿಂದು ಮಲಗಿರ್ತಾನೆ."ಸುಮತಿ ಅದಕ್ಕೆ ಏನೂ ಆಡಲಿಲ್ಲ.

"ಹಾಗಾದ್ರೆ ನಾನು ಹೋಗಿ ಬರ್ಲಾ ? ಜಾನಕಿ ಸರಸರನೆ ರೆಡಿಯಾದಳು. ಅವಳಿಗೂ ಮನೆಯಿಂದ ಹೊರಗೆ ಹೋಗಬೇಕೆನ್ನಿಸಿತ್ತು. ಒಂದಿಷ್ಟು ಬಿಸ್ಕತ್ತು, ಚಾಕ್ಲೇಟುಗಳನ್ನು ಕಾಣುವಂತೆ ಇಟ್ಟು ಸುಮತಿಗೆ ಮತ್ತೆ ಮತ್ತೆ ಹೇಳಿ ಹೊರಟಳು. ನಿದ್ದೆ ಮಾತ್ರೆಗಳನ್ನು ತಿನ್ನಿಸುವುದನ್ನು ಮರೆತಳು.

ಫೋನು ರಿಂಗಾದಾಗ ಸುಮತಿ ಬಂದು ರಿಸೀವರ್‌ನೆತ್ತಿಕೊಂಡಳು. ಸಂಕೇತ ಫೋನು ಮಾಡಿದ್ದ. ಅವಳ ಹೃದಯ ಗರಿಗೆದರಿ ಕುಣಿಯಿತು."ಹಲೋ ಚುಮ್ಮೀ... ಹೇಗಿದೀಯ ? ಊರಿಗೆ ಹೋಗಲಿಲ್ಲವಾ ? ..." ವಿಚಾರಿಸಿದ್ದ.

"ನೀವ್ಯಾಕೆ ಫೋನು ಮಾಡಲೇ ಇಲ್ಲ... ನಾವೆಲ್ಲಾ ಕಾಯ್ತಾ ಇದ್ದೆವು..."

"ಬರ್ತಿದ್ದ ಹಾಗೇ ನಾನು ಸ್ವಲ್ಪ ಬಿಸಿಯಾಗಿಬಿಟ್ಟೆ.. ಲೆಟರ್ ಬರೀತೀನಿ. ನೀನೂ ಬರೆಯಬೇಕು... ಐ ಮಿಸ್ ಯೂ ಟೂ ಮಚ್ ಚುಮ್ಮೀ..."

"ಸಂಕೇತ್ ಯಾವಾಗ ಬರ್ತಿದೀರಾ ?"

"ಇನ್ನೆರಡು ತಿಂಗಳಿಗೆ ... ನಿನ್ನ ಅಕ್ಕನ ಮದುವೆ ಗೊತ್ತಾಯ್ತಾ ?"

"ಇನ್ನೂ ಇಲ್ಲ.. ಊರಿಗೆ ಹೋದ ಮೇಲೆ ಕಾಗದ ಬರೀತೀನಿ..."

"ಓ....ಕೇ. ಟೇಕ್‌ಕೇರ್... ಮಮ್ಮೀಗೆ ಹೇಳಿಬಿಡು, ಟೈಮು ಮುಗೀತಾ ಇದೆ. ಮುಂದಿನ ವಾರ ಮತ್ತೆ ಮಾಡ್ತೀನಿ."

"ಓ...ಕೇ. ಈಗ ಅಲ್ಲಿ ಬೆಳಿಗ್ಗೇನೋ ರಾತ್ರೀನೋ..."

"ರಾತ್ರಿ ಆಗಿದೆ... ಅಲ್ಲಿಂದ ಬಂದಮೇಲೆ, ರಾತ್ರಿ ಹೊತ್ತು ನಿದ್ದೇನೇ ಬರುಲ್ಲ, ನಿನಗೆ ನಿದ್ದೆ ಬರುತ್ತಾ ?"

"ಹುಂ ಹಾಯಾಗಿ ನಿದ್ದೆ ಮಾಡ್ತೀನಿ" ಕಿಲಕಿಲನೆ ನಕ್ಕಳು. ಅವಳ ಕಿಲ ಕಿಲ ನಗು ಅಲ್ಲೇ ಎಲ್ಲೋ ಮೂಲೆಯಲ್ಲಿ ಮಲಗಿದ್ದ ಜಗ್ಗುವನ್ನು ತಲುಪಿದವು ಮೆಲ್ಲನೆ ಎದ್ದ. ಅಷ್ಟರಲ್ಲಿ ಸಂಕೇತ ಮಾತನ್ನು ಮುಗಿಸಿದ್ದ.

ಅಡ್ಡಾದಿಡ್ಡಿ ನಡೆಯುತ್ತಾ ಜಗ್ಗು ಸುಮತಿಯ ಬಳಿಗೆ ಬಂದ. ಯಾವುದೋ ಗುಂಗಿನಲ್ಲಿದ್ದ ಸುಮತಿಗೆ ಅವನು ಬಂದದ್ದೇ ಗೊತ್ತಾಗಲಿಲ್ಲ. ಜಗ್ಗು ಅವಳ ಕೈ ಬಳೆಗಳನ್ನು ಮೇಲೆ ಕೆಳಗೆ ಸರಿಸಿ ಝಣ ಝಣ ಸದ್ದು ಮಾಡಿದ. ಆವಳು ಬೆಚ್ಚಿ ಬಿದ್ದು ಇತ್ತ ತಿರುಗಿದಳು. ಏನೋ ಜಗ್ಗು... ಎಂದು ಬೇಸರದಿಂದ ನುಡಿದು, ಅವನಿಂದ ದೂರ ಸರಿದಳು. ಇದ್ದಕ್ಕಿದ್ದಂತೆ, ಅವನು ಅವಳ ಕಾಲ ಬಳಿ ಬಾಗಿ, ಅವಳ ಕಾಲನ್ನು ಎತ್ತಿದ. ಅನಿರೀಕ್ಷಿತವಾಗಿ ಅವನು ಕಾಲನ್ನು ಹಿಡಿದೆಳೆದುದರಿಂದ, ಸುಮತಿ ಆಯ ತಪ್ಪಿ ಬಿದ್ದು ಬಿಟ್ಟಳು. ಬಿದ್ದ ರಭಸಕ್ಕೆ, ಟೇಬಲ್ಲಿನ ಅಂಚು ಜೋರಾಗಿ ಅವಳ ತಲೆಗೆ ಬಡಿಯಿತು. ನೋವಿಗಿಂತ ಹೆಚ್ಚಾಗಿ ಗಾಬರಿಯಾಗಿದ್ದಳು. ಕಣ್ಣುಗಳು ಮಂಜಾದವು. ಏನಾಗುತ್ತಿದೆ ಎಂದು ತಿಳಿಯುವ ಮೊದಲೇ ಅವಳಿಗೆ ಜ್ಞಾನ ಹೋಗಿತ್ತು.

ಅವಳಕಾಲ ಬಳಿ ಕುಳಿತ ಜಗ್ಗು ಅವಳ ಕಾಲಿನ ಗೆಜ್ಜೆಯನ್ನು ಘಲ್ ಘಲ್ ಎನಿಸಿದ. ಹೆ ಹೆ ಹೆ ಅಂತ ನಕ್ಕ. ಅವಳ ಕೈಯ ಬಳೆಗಳನ್ನು ಸರಿಸಿದ ಝಣ ಝಣ ಸದ್ದಿಗೆ ಕೇಕೆ ಹಾಕಿದ. ಅಷ್ಟಾದರೂ ಸುಮತಿಗೆ ಎಚ್ಚರವಿರಲಿಲ್ಲ... ಅವಳು ಹಾಗೇ ಬಿದ್ದುಕೊಂಡಾಗ, ಅವನಿಗೆ ಏನು ಮಾಡಬೇಕೋ ತಿಳಿಯದೇ ಅವಳ ಮುಖದ ಮೇಲೆ ಕೈಯಾಡಿಸಿದ. ಅವಳನು ಎಬ್ಬಿಸಲು ಅವಳ ಮೈಮೇಲೆಲ್ಲಾ ಬಿದ್ದು ಹೊರಳಾಡಿದ. ಅವಳ ಮೈಮೇಲಿನ ಬಟ್ಟೆಗಳು ಅಸ್ತವ್ಯಸ್ತವಾಗಿದ್ದವು. ಇಷ್ಟರೊಳಗೆ ಜಗ್ಗುವಿನಲ್ಲಿ ಏನೋ ಒಂದು ಹೊಸ ಚೈತನ್ಯ ಪುಟಿದೆದ್ದಿತು. ಸಂಕೇತ, ಸುಮತಿಯರು ಒಟ್ಟಿಗೇ ಇದ್ದುದನ್ನು ಅನೇಕ ಸಾರಿ ಕದ್ದು ನೋಡಿದ್ದ. ಅದೇ ರೀತಿ ತಾನೂ ಮಾಡಬೇಕೆಂದು ಅನ್ನಿಸಿತೋ, ಅಥವಾ ಬೆಳೆದ ಯುವಕನ ಸುಪ್ತ ಶಕ್ತಿ ಜಾಗೃತವಾಯಿತೋ, ಜ್ಞಾನವಿಲ್ಲದೇ ಮಲಗಿದ್ದ ಸುಮತಿಯ ಮೇಲೆ ಎರಗಿದ. ಅವಳ ನುಣುಪು ಕೆನ್ನೆಗಳಿಗೆ ಮುತ್ತಿಟ್ಟ. ಸಂಕೇತ ಸುಮತಿಯೊಡನೆ ನಡೆದುಕೊಂಡಿದ್ದ ರೀತಿಯೆಲ್ಲಾ ಚಿತ್ತದೊಳಗೆ ಕೆಲಸ ಮಾಡಲು ಪ್ರಾರಂಭಿಸಿದವು. ಅವಳ ಸೀರೆಯನ್ನು ಕಿತ್ತು ಬಿಸಾಡಿದ. ಅವಳ ಅರೆ ನಗ್ನವಾದ ದೇಹವನ್ನು ನೋಡುತ್ತಿದ್ದಂತೆ, ಅಯಸ್ಕಾಂತದ ಸೆಳೆತಕ್ಕೆ ಒಳಗಾದವನಂತೆ, ಅವಳ ಮೇಲೆ ಬಿದ್ದುಕೊಂಡ. ಕ್ಷಣಮಾತ್ರದಲ್ಲಿ ತನಗೇ ಅರಿವಿಲ್ಲದಂತೆ, ತನ್ನ ಹಸಿವನ್ನು ಹಿಂಗಿಸಿಕೊಂಡಿದ್ದ.

ತನ್ನಿಂದ ಏನು ದ್ರೋಹ ನಡೆದಿದೆ ಎಂಬುದರ ಅರಿವೇ ಇಲ್ಲದ ಜಗ್ಗು ಅವಳಿಂದ ದೂರ ಸರಿದು, ಮೆಟ್ಟಿಲ ಕೆಳಗೆ ಹೋಗಿ ಮಲಗಿಕೊಂಡ. ಅಷ್ಟಾದರೂ ಸುಮತಿಗೆ ಎಚ್ಚರವಿಲ್ಲ. ಸ್ವಲ್ಪ ಸಮಯದ ನಂತರ ಜಾನಕಿ ವಾಪಸ್ಸಾಗಿದ್ದಳು. ಮುಂಬಾಗಿಲಿಗೆ ಚಿಲುಕ ಹಾಕಿರಲಿಲ್ಲ ವಾದುದರಿಂದ, ತಳ್ಳಿದ ಕೂಡಲೇ ತೆರೆದುಕೊಂಡಿತು. ಸುಮತಿ ಎಲ್ಲಿಯೂ ಕಾಣಲಿಲ್ಲ. ಜಗ್ಗುವೂ ಕಾಣಲಿಲ್ಲ. ಅಡಿಗೆ ಮನೆಯ ಕಡೆಗೆ ಬಂದಳು. ಅಲ್ಲಿಯೂ ಸುಮತಿ ಇಲ್ಲ. ಮಹಡಿ ಮೆಟ್ಟಿ ಬಳಿಗೆ ಬಂದಳು. ಮೆಟ್ಟಿಲುಗಳ ಕಡೆ ಅಡಗಿ ಮಲಗಿದ್ದ ಜಗ್ಗು ಕಣ್ಣಿಗೆ ಬಿದ್ದ.

"ಇಲ್ಲಿ ಮಲಗಿದೀಯಾ ಎದ್ದು ಬಾ... ಸುಮತೀ ಎಲ್ಲಿ?"

ಜಗ್ಗು ಸುಮತಿ ಬಿದ್ದಿದ್ದ ಕಡೆಗೆ ಕೈ ಮಾಡಿ ತೋರಿದ. ಜಾನಕಿ ಅಲ್ಲಿಗೆ ಓಡಿದಳು. ಸುಮತಿ ಜ್ಞಾನವಿಲ್ಲದೇ ಬಿದ್ದಿದ್ದಾಳೆ. ತಲೆಯಿಂದ ಸ್ವಲ್ಪ ರಕ್ತ ಬಂದಿದೆ. ಅವಳ ಬಟ್ಟೆಯೆಲ್ಲಾ

ಅಸ್ತವ್ಯಸ್ತವಾಗಿದೆ. ಉಟ್ಟಿದ್ದ ಸೀರೆ, ದೂರದಲ್ಲಿ ಬಿದ್ದಿದೆ... ಕ್ಷಣ ಮಾತ್ರದಲ್ಲಿ ಏನಾಗಿರಬಹುದೆಂದು ತಿಳಿದರೂ, ಈ ಅನಾಹುತಕ್ಕೆ ಕಾರಣ ಯಾರು ಎಂದು ಅವಳಿಗೆ ತಿಳಿಯಲಿಲ್ಲ. ಸುಮತೀ... ಸುಮತೀ.. ಎಂದು ಕೆನ್ನೆ ಬಡಿದು ಎಚ್ಚರಿಸಲು ನೋಡಿದಳು. ಅವಳು ಏಳಲಿಲ್ಲ. ಜಗ್‌ನಲ್ಲಿದ್ದ ನೀರನ್ನು ಮುಖಕ್ಕೆ ಎರಚಿದಳು. ಆದರೂ ಅವಳು ಏಳಲಿಲ್ಲ. ಗಾಬರಿಯಿಂದ ಸಮೀಪದಲ್ಲಿದ್ದ ಡಾಕ್ಟರಿಗೆ ಫೋನ್ ಮಾಡಿದಳು. ಅವರು ಬರುವಷ್ಟರಲ್ಲಿ ಸುಮತಿಗೆ ಸೀರೆಯನ್ನು ಉಡಿಸಿದಳು.

ಅಷ್ಟರಲ್ಲಿ ಡಾಕ್ಟರು ಬಂದಿದ್ರು. ಕೆಳಗೆ ಬಿದ್ದಿದ್ದವಳನ್ನು ಪರೀಕ್ಷಿಸಿದರು. ತಲೆಗೆ ಹೆಚ್ಚು ಪೆಟ್ಟೇನೂ ಆಗಿಲ್ಲ. ಏನೋ ಆಘಾತಕ್ಕೆ ಪ್ರಜ್ಞೆ ತಪ್ಪಿ ಬಿದ್ದಿದ್ದಾರೆ. ಭಯವೇನೂ ಇಲ್ಲ. ಇನ್ನೊಂದು ಹತ್ತು ನಿಮಿಷಕ್ಕೆ ಜ್ಞಾನ ಬರುತ್ತೆ ಅಂತ ಹೇಳಿ, ಒಂದು ಇಂಜೆಕ್ಷನ್ ಕೊಟ್ಟು ಹೊರಟರು. ಅವರಿಗೆ, ಜ್ಞಾನ ಬಂದ ಮೇಲೆ ಏನು ನಡೀತು ಅಂತ ನಿಧಾನವಾಗಿ ಕೇಳಿ ತಿಳಿದುಕೊಳ್ಳಿ... ಆದರೆ ? ಯಾವುದೇ ಕಾರಣಕ್ಕೂ ಒತ್ತಾಯ ಮಾಡಬೇಡಿ. ಮತ್ತೆ ನನ್ನ ಅಗತ್ಯವಿದ್ದರೆ ಫೋನು ಮಾಡಿ, ಅಥವಾ ಸಾಯಂಕಾಲ ನನ್ನ ಕ್ಲಿನಿಕ್‌ಗೆ ಬರಲಿ. ನಾನೇ ಮಾತನಾಡ್ತೀನಿ."

ಡಾಕ್ಟರು ಹೊರಟು ಹೋಗಿದ್ದರು. ಜಾನಕಿ ತಲೆಯ ಮೇಲೆ ಕೈ ಹೊತ್ತಳು. ಇದ್ದಕ್ಕಿದ್ದಂತೆ ಇವಳಿಗೆ ಏನಾಯ್ತು ? ಭದ್ರಾವತಿಯಿಂದ ಯಾರಾದ್ರು ಫೋನು ಮಾಡಿದ್ದರೇ... ಅಥವಾ ಯಾರಾದರೂ ಹೊರಗಿನವರು ಬಂದು, ಇವಳನ್ನು ಬೀಳಿಸಿರಬಹುದೇ ? ಆದರೆ ಮನೆಯಲ್ಲಿ ಏನೂ ಕಳ್ಳತನ ನಡೆದಿರುವಂತೆ ಅನಿಸುವುದಿಲ್ಲ. ಈ ಜಗ್ಗೂನು ಒಬ್ಬ ಗಂಡಸು ಹೆಸರಿಗೆ, ಇಂಥೋನು ಇದ್ದರೂ ಒಂದೇ, ಇಲ್ಲದಿದ್ದರೂ ಒಂದೇ... ಸುಮತಿಗೆ ಬೇಗ ಜ್ಞಾನ ಬರಬಾರದೇ... ಏನು ನಡೀತು ಅಂತ ಬೇಗ ಹೇಳಬಾರದೇ ? ಚಡಪಡಿಸಿದಳು.

ಡಾಕ್ಟರು ಹೇಳಿದಂತೆ, ಸ್ವಲ್ಪ ಹೊತ್ತಿನಲ್ಲಿಯೇ ಸುಮತಿಗೆ ಅರಿವು ಬಂದಿತ್ತು. ನಿಧಾನವಾಗಿ ಕಣ್ಣು ಬಿಟ್ಟಳು. ಎದುರಿಗೆ ನಿಂತಿದ್ದ ಜಾನಕಿಯನ್ನು ಕಂಡು ಏಳಲು ನೋಡಿದಳು. ಏಳಲಾಗದಂತೆ, ತಲೆನೋವು, ಮೈಯೆಲ್ಲಾ ಜಜ್ಜಿ ಹೋದ ಅನುಭವ ಕ್ಷಣದಲ್ಲಿ ತನ್ನ ಮೇಲೆ ಅತ್ಯಾಚಾರ ನಡೆದಿದೆ ಎಂದು ಅರ್ಥವಾಗಿತ್ತು... ಮತ್ತೆ ಕಣ್ಣುಗಳನ್ನು ಮುಚ್ಚಿಕೊಂಡಳು.

"ಏನಾಯ್ತು ಸುಮತಿ ? ಏನಾಯ್ತು ? ಯಾರಾದ್ರೂ ಬಂದಿದ್ರಾ ?" ಇಲ್ಲ ಎನ್ನುವಂತೆ ತಲೆಯಾಡಿಸಿ, ಸುಮತಿ ಅಳತೊಡಗಿದಳು. ಈ ಜಗ್ಗು ಒಬ್ಬ ನಾಲಾಯಕ್ಕು ಯಾತಕ್ಕೂ ಉಪಯೋಗವಿಲ್ಲ. ಯಾರು ಬಂದಿದ್ರು ಹೇಳು... ಯಾರಾದ್ದಾದ್ರೂ ಫೋನು ಬಂದಿತ್ತ ? ಸುಮತಿ ಸುಮ್ಮನೇ ಜಗ್ಗುವಿನ ಕಡೆ ನೋಡಿದಳು ಅವಳ ಕಣ್ಣು ನೋಟವೇ ಎಲ್ಲವನ್ನೂ ಅರುಹಿತ್ತು. ಬಾಯಿಬಿಟ್ಟು ಕೇಳಲು ಅಂಜಿದಳು.

ಸುಮತಿಯನ್ನು ಎಬ್ಬಿಸಿ, ನಿಧಾನವಾಗಿ ನಡೆಸಿಕೊಂಡು ಬಂದು ಸೋಫಾದ ಮೇಲೆ ಕೂರಿಸಿದಳು, ಫ್ಲಾಸ್ಕಿನಲ್ಲಿದ್ದ ಬಿಸಿ ಕಾಫಿಯನ್ನು ಬಟ್ಟಲಿಗೆ ಬಗ್ಗಿಸಿ ಕುಡಿಯಲು ಕೊಟ್ಟಳು. ಸುಮತಿ ಅಸಹ್ಯಿಸಿಕೊಂಡಳು.

''ಸ್ವಲ್ಪ ಕಾಫಿ ಕುಡಿ ಸುಮತಿ ಧೈರ್ಯ ಬರುತ್ತೆ. ನಿಧಾನವಾಗಿ ಏನು ನಡೀತು ಅಂತ ಹೇಳು...?'' ಸುಮತಿ ಕಾಫಿಯನ್ನು ಗುಟುಕರಿಸಿದಳು. ಎಷ್ಟು ಕೇಳಿದರೂ ಮಾತನಾಡಲಿಲ್ಲ.

''ನೀನು ಮಾತನಾಡದಿದ್ದರೆ, ನಾನು ಪೋಲಿಸ್ ಕಂಪ್ಲೇಂಟ್ ಕೊಡಬೇಕಾಗುತ್ತದೆ... ಆಗ ಅವರು ಏನೇನೋ ಕೇಳ್ತಾರೆ.''

ಬೇಡ ಬೇಡ ಎನ್ನುವಂತೆ ತಲೆಯಾಡಿಸಿದಳು.

''ಹಾಗಾದರೆ ಏನು ನಡೆಯಿತು ಅಂತ ಹೇಳು'' ಜಾನಕಿ ಬಲವಂತ ಮಾಡಿದಳು.

''ಬೇಡ ಆಂಟಿ... ಏನಾಯ್ತು ಅಂತ ಕೇಳಬೇಡಿ. ಹೇಳಲು ನನಗೆ ಹಿಂಸೆಯಾಗುತ್ತೆ. ನಿಮಗೂ ಮನಸ್ಸಿಗೆ ತುಂಬಾ ನೋವಾಗುತ್ತೆ... ಅಷ್ಟರಲ್ಲಿ ಜಗ್ಗು ಅವಳ ಬಳಿಗೆ ಬಂದಿದ್ದ ಸುಮತಿಯ ಮುಖದ ಕಳೆಯೇ ಬದಲಾಯಿತು.'' ಬರಬೇಡ... ನನ್ನ ಹತ್ತಿರ ಬರಬೇಡ... ದೂರ ಹೋಗು'' ಕಿರುಚಿದಳು. ಜಾನಕಿ ಅವನನ್ನು ಎಳೆದುಕೊಂಡು ಹೋಗಿ ಚೆನ್ನಾಗಿ ಬಡಿದಳು. ಈಗ ಅವಳಿಗೆ ಎಲ್ಲಾ ಗೊತ್ತಾಗಿಬಿಟ್ಟಿತು.

''ಇದೇನು ಅನರ್ಥ ಮಾಡಿ ಬಿಟ್ಟೆಯೋ ! ಇವಳ ಬಾಳನ್ನೇ ಹಾಳು ಮಾಡಿ ಬಿಟ್ಟೆಯಲ್ಲೋ ? ಇವಳೇನು ದ್ರೋಹ ಮಾಡಿದ್ದಳು ನಿನಗೆ ? ನೀನು ನನ್ನ ಮಗನೇ ಅಲ್ಲ. ನನ್ನ ಶತ್ರು... ಎಂದು ಬೈಯುತ್ತಾ ಚೆನ್ನಾಗಿ ಹೊಡೆದಳು. ಸುಮತಿ ಎದ್ದು ಬಂದಿದ್ದಳು.

''ಅವನನ್ನು ಹೊಡೆದರೆ ಏನು ಪ್ರಯೋಜನ ಆಂಟೀ ?... ಕಳೆದು ಹೋದದ್ದು ಮತ್ತೆ ಬರುತ್ತಾ ?''

''ಇವನು ಇಷ್ಟು ಧೂರ್ತ ಅಂತ ನನಗೆ ಗೊತ್ತಾಗ್ಲಿಲ್ಲಮ್ಮಾ.... ಇವನು ದಡ್ಡ ಅಂತ ಅಂದುಕೊಂಡು, ನಿನ್ನ ಜೊತೆ ಬಿಟ್ಟು ಹೋದೆ. ಇವನು ಹೀಗೆ ಪಶು ತರಹ ವರ್ತಿಸುತ್ತಾನೆ ಅಂತ ನಾನಂತೂ ಊಹಿಸಿರಲಿಲ್ಲ. ಈಗ ನಾನೇನು ಮಾಡಲಿ ? ಇವನನ್ನು ನಾಳೇನೇ ಕರೆದುಕೊಂಡು ಹೋಗಿ ಯಾವುದಾದರೂ ಹೋಂಗೆ ಸೇರಿಸಿಬಿಡ್ತೀನಿ. ಸಂಕೂ ಹೇಳ್ತಾ ಇದ್ದುದು ಸರಿ, ಇವನು ಮನೇಲಿರುಕ್ಕೆ ಲಾಯಕ್ಕಿಲ್ಲ. ಬಿದ್ದಿರಲಿ ಅಲ್ಲಿ.''

''ನಾನು ನಾಳೇನೇ ಭದ್ರಾವತಿಗೆ ಹೋಗ್ತೀನಿ.'' ತನ್ನ ನಿರ್ಧಾರವನ್ನು ತಿಳಿಸಿದಳು.

''ನಿನ್ನನ್ನ ಈ ಅವಸ್ಥೇಲಿ ಊರಿಗೆ ಕಳಿಸಿದ್ರೆ ನಿಮ್ಮ ಮನೆಯವರು ಏನಂದು ಕೊಳ್ತಾರೆ... ಒಂದೆರಡು ದಿನ ಸುಧಾರಿಸ್ಕೋ... ನಂತರ ಹೋಗೂವಂತೆ''

''ಇಲ್ಲ ಆಂಟಿ, ನಾನು ನಾಳೇನೇ ಹೋಗ್ತೀನಿ''

''ಹಠ ಮಾಡಬೇಡ ಸುಮತಿ. ನನ್ನ ಮಕ್ಕಳು ಕೆಟ್ಟವರಿರಬಹುದು, ಆದರೆ ನಾನು ಕೆಟ್ಟವಳಲ್ಲ. ನೀನು ನನ್ನ ಮಗಳಿದ್ದ ಹಾಗೆ. ನಿನ್ನ ಕಷ್ಟದಲ್ಲಿ ನಿನ್ನನ್ನು ಬಿಟ್ಟು ಬಿಡೋಕೆ, ನನ್ನ

ಮನಸ್ಸಂತೂ ಒಪ್ಪುತ್ತಿಲ್ಲ.''

ಅಷ್ಟರಲ್ಲಿ ಇದ್ದಕ್ಕಿದ್ದಂತೆ ಹರೀಶ ಪ್ರತ್ಯಕ್ಷನಾಗಿದ್ದ ಯಾರಿಗೂ ಅವನ ಆಗಮನ ಇಷ್ಟವಾಗಿರಲಿಲ್ಲ. ಸುಮತಿಯ ತಲೆಯ ಪಟ್ಟಿಯನ್ನು ಕಂಡು ಹುಬ್ಬೇರಿಸಿದ.

''ಆಕ್ಸಿಡೆಂಟ್ ಎಲ್ಲಾಯ್ತು ಮೇಡಂ ? ಕೇಳಿದ, ಆತಂಕದಿಂದ

''ಬಚ್ಚಲು ಮನೇಲಿ ಜಾರಿ ಬಿದ್ದೆ'' ತಕ್ಷಣವೇ ಅನಿಸಿದ್ದನ್ನು ಹೇಳಿದಳು.

''ಸಂಕೇತನಿಗೆ ಗೊತ್ತಾ...?'' ಅವಳ ನೊಂದಿದ ಮುಖವನ್ನು ಗಮನಿಸಿದ.

''ಇದು ಯಾವ ದೊಡ್ಡ ವಿಷಯ ಅಂತ ಹೇಳಬೇಕು ?'' ಮುಖವನ್ನು ಅತ್ತ ತಿರುಗಿಸಿದಳು.

''ಅವನಿಗೆ ಗೊತ್ತಾದ್ರೆ, ನಾಳೇನೇ ಒಂದು ಫ್ಲೈಟ್ ಹಿಡಿದು ಬರ್ತಾನೆ ಅಷ್ಟೇ'' ಸುಮತಿ ಸಂದೇಹದಿಂದ ಅವನನ್ನೇ ನೋಡಿ, 'ಸುಮ್ಮನಿರು' ಎನ್ನುವಂತೆ ಸಂಜ್ಞೆ ಮಾಡಿದಳು.

''ಓ... ಕೆ... ರಿಲ್ಯಾಕ್ಸ್... ನಾನು ಸಂಕೇತನಿಗೆ ಫೋನು ಮಾಡ್ಲಾ?''

''ಬೇಡ... ಬೇಡ... ನನಗೆ ಒಂದು ಫೇವರ್ ಮಾಡ್ತೀರಾ ?''

''ಏನು ಹೇಳಿ ಮೇಡಂ...''

''ನಾನು ನಾಳೆ ಭದ್ರಾವತಿಗೆ ಹೋಗಬೇಕು. ನನಗೆ ಒಂದು ಬಾಡಿಗೆ ಕಾರನ್ನು ಗೊತ್ತು ಮಾಡಿ ಕೊಡ್ತೀರಾ ? ನನ್ನ ಜೊತೆಗೆ ಬರುಕ್ಕೆ ಆಗುತ್ತಾ ?''

ಹರೀಶ ಸಂತಸದಿಂದ ಉಬ್ಬಿ ಹೋದ... ಸುಮತಿಯ ಜೊತೆ, ತನಗೆ ಭದ್ರಾವತಿಯ ತನಕ ಹೋಗುವ ಅವಕಾಶ. ಓ...ಕೆ. ಎಂದು ಒಪ್ಪಿಕೊಂಡ ಖುಷಿಯಿಂದ.

ಹರೀಶ ಮನೆಯ ಮುಂದೆ ಕಾರನ್ನು ತಂದು ನಿಲ್ಲಿಸಿದಾಗಲೇ, ಜಾನಕಿಗೆ ಸುಮತಿ ಹೊರಟಿದ್ದು ತಿಳಿದಿದ್ದು. ಒಂದು ಗಳಿಗೆ ಮನಸ್ಸು ಛುಳ್ ಎಂದಿತ್ತು. ಆದರೆ ಮರುಗಳಿಗೆಯೇ, ಸುಮತಿಯ ಮನಸ್ಸೂ ಒಡೆದು ಹೋಗಿದೆ. ಇನ್ನು ಯಾವ ವಿಶ್ವಾಸದ ಮೇಲೆ ಇಲ್ಲಿರುತ್ತಾಳೆ. ಈಗ ಇವಳಿಗೆ ಮನೆಯವರ ಸಹಕಾರದ ಅಗತ್ಯವಿದೆ. ಇವಳನ್ನು ಮಾತನಾಡಿಸುವ ಧೈರ್ಯವೇ ನನಗಿಲ್ಲ ಎಂದುಕೊಂಡಳು. ಸುಮತಿ ಎಲ್ಲವನ್ನೂ ನಿರ್ಧರಿಸಿದಂತಾಗಿತ್ತು. ತನ್ನ ಲಗೇಜುಗಳನ್ನೆಲ್ಲಾ ಕಾರಿಗೆ ಇರಿಸಿದಳು.

''ಮತ್ತೆ ಈ ಮನೆಗೆ ಬರುಲ್ಲ ಅಂತ ನಿರ್ಧರಿಸಿ ಬಿಟ್ಟಿದಾಳೆ'' ಎಂದು ಜಾನಕಿ ನೊಂದುಕೊಂಡಳು. ಈ ಹರೀಶನೂ ವಿಶ್ವಾಸಕ್ಕೆ ಅನರ್ಹ. ಇವನ ಜೊತೆ ಯಾಕೆ ಹೊರಟಿದ್ದಾಳೋ... ಎಂದು ಮನಸ್ಸು ಮಿಡುಕಿತು... ಜಗ್ಗು ಎದ್ದಿರಲಿಲ್ಲವಾದುದರಿಂದ ಜಾನಕಿಗೆ ಸಲೀಸಾಗಿತ್ತು. ಸುಮತಿ ಕಾರನ್ನು ಹತ್ತಿದಳು. ಹರೀಶ್ ಡ್ರೈವರ್ ಪಕ್ಕ ಕೂತ. ಕಾರು ಹೊರಟಿತು.

ಸುಮತಿ ಮೌನವಾಗಿದ್ದಳು. ಹರೀಶ, ತನ್ನ ಸಂಕೇತನ ಸ್ನೇಹವನ್ನು ಕುರಿತು ಮಾತನಾಡುತ್ತಲೇ ಇದ್ದ. ಸಂಕೇತ ಲಕ್ಕೀ... ಅವನಿಗೆ ನಿಮ್ಮಂತಹ ಸಂಗಾತಿ ಸಿಕ್ಕಿರುವುದು ಅವನ ಪುಣ್ಯ..." ಸುಮತಿ ಅಚ್ಚರಿಯಿಂದ ಅವನ ಕಡೆ ನೋಡಿದಳು.

"ನನಗೆ ಎಲ್ಲಾ ಗೊತ್ತಾಗಿದೆ. ಸಂಕೇತನೇ ಹೇಳಿದ, ಇನ್ನೆರಡು ತಿಂಗಳಿಗೆ ಮತ್ತೆ ಬರ್ತಾನೆ. ಮದುವೆ ಮಾಡಿಕೊಂಡು ಕರೆದುಕೊಂಡು ಹೋಗ್ತಾನೆ. ನಾವುಗಳೆಲ್ಲ ನಿಮ್ಮನ್ನ ತುಂಬಾ ಮಿಸ್ ಮಾಡ್ಕೋತೀವಿ ಮೇಡಂ..." ಹರೀಶ ನಕ್ಕಾಗ, ಅವಳು ನಗಲಿಲ್ಲ.

"ಒಂದು ತಮಾಷೆ ಹೇಳ್ಲಾ ಮೇಡಂ... ನಿಮ್ಮನ್ನು ಗೋಪೀನೂ ಲವ್ ಮಾಡ್ತಿದ್ದ."

"ಆದರೆ ಈಗ ನಾವುಗಳು ಲಕ್ಷ್ಮಣ, ಭರತ, ಶತೃಘ್ನರಾಗಿದ್ದೇವೆ." ಅವನ ಜೋಕ್ ಅವಳಿಗೆ ಅರ್ಥವಾಗಲಿಲ್ಲ. ಮಧ್ಯೆ ಒಂದು ಊರಿನಲ್ಲಿ ಊಟ ಮಾಡಿದರು. ಮಧ್ಯಾಹ್ನದ ಹೊತ್ತಿಗೆ ಭದ್ರಾವತಿ ತಲುಪಿದರು.

ಮನೆಯವರಿಗೆಲ್ಲ ಅವಳನ್ನು ಆ ಸ್ಥಿತಿಯಲ್ಲಿ ಕಂಡು ಗಾಬರಿ ಆಗಿತ್ತು. ಎಲ್ಲರೂ ಅವಳನ್ನು ಸುತ್ತುವರೆದರು.

"ಪ್ರಯಾಣದ ಆಯಾಸದಿಂದ ಬಳಲಿದ್ದಾಳೆ. ಅವಳಿಗೆ ರೆಸ್ಟ್ ತಗೊಳ್ಳೋಕೆ ಬಿಡಿ" ತಂದೆ ಆದೇಶವಿತ್ತಾಗ ಎಲ್ಲರೂ ಚದುರಿದರು. ಹರೀಶನಿಗೆ ಸುಮತಿ ಮನಃಪೂರ್ವಕವಾಗಿ ಥ್ಯಾಂಕ್ಸ್ ಹೇಳಿದಳು. ಕಣ್ಣುಗಳು ತುಂಬಿ ಬಂದಿದ್ದವು.

"ಯಾವಾಗ ಬರ್ತೀರಿ ಮೇಡಂ..."

"ನಂಗೊತ್ತಿಲ್ಲ, ನಾನು ಕಾಲೇಜಿನ ಕೆಲಸಕ್ಕೆ ರಿಸಿಗ್ನೇಷನ್ ಕೊಟ್ಟು ಬಿಟ್ಟಿದೀನಿ. ಇಲ್ಲೇ ಯಾವುದಾದರೂ ಕೆಲಸಕ್ಕೆ ಸೇರ್ತೀನಿ..."

"ಇನ್ನೆರಡು ತಿಂಗಳಿಗೆ ಸಂಕೇತ ಬಂದು ನಿಮ್ಮನ್ನು ಹಾರಿಸ್ಕೊಂಡುಹೋಗ್ತಾನೆ... ಅಲ್ಲೀವರೆಗೂ ಆರಾಮವಾಗಿರಿ." ಸುಮತಿ ಹರೀಶನಿಗೆ ಹಣಕೊಡಲು ಹೋದಳು. ಹರೀಶ ನಿರಾಕರಿಸಿದ. ಈಗ ಬೇಡ, ನನಗೆ ಬೇಕಾದಾಗ ಕೇಳ್ತೀನಿ." ಹರೀಶ ಎಲ್ಲರಿಗೂ ಹೇಳಿ ಹೊರಬಿದ್ದ. ಕಾರು ಚಲಿಸಿತು.



ಎರಡು ತಿಂಗಳು ಕಳೆಯುತ್ತಿದ್ದಂತೇ ಸಂಕೇತ ವಾಪಸ್ಸಾಗಿದ್ದ. ಮನೆಗೆಫೋನು ಮಾಡಿದ್ದಾಗ, ಸುಮತಿ ಭದ್ರಾವತಿಗೆ ಹೋಗಿರುವಳೆಂದು ತಾಯಿ ಹೇಳಿದ್ದಳು. ಹರೀಶನ ಅಡ್ರೆಸ್ಸಿಗೆ ಕಾಗದಗಳನ್ನು ಬರೆದು, ಅವುಗಳನ್ನು ಸುಮತಿಗೆ ತಲುಪಿಸುವಂತೆ ಕೇಳಿಕೊಂಡಿದ್ದ. ಹರೀಶ

ಅವುಗಳನ್ನು ರಿ ಡೈರೆಕ್ಟ್ ಮಾಡಿದ್ದ. ಸುಮತಿಯಿಂದ ಯಾವ ಉತ್ತರವೂ ಇಲ್ಲ. ಅವಳಿಗೇನು ಭಯವೆಂದು ಅವನಿಗೆ ಅರ್ಥವಾಗಿರಲಿಲ್ಲ. ಸಂಕೇತ ಚಿಂತಿತನಾಗಿದ್ದ.

ಏರ್‌ಪೋರ್ಟಿಗೆ ಬಂದಿದ್ದ ಹರೀಶ, ಸುಮತಿ ಇನ್ನು ಭದ್ರಾವತಿಯಿಂದ ವಾಪಸ್ಸು ಬಂದಿಲ್ಲವೆಂದು ತಿಳಿದೊಡನೆ, ಅಲ್ಲಿಂದಲೇ ಒಂದು ಕಾರನ್ನು ಬಾಡಿಗೆಗೆ ತೆಗೆದುಕೊಂಡು ಹರೀಶನೊಡನೆ ಭದ್ರಾವತಿಗೆ ಹೊರಟ.

ಸುಮತಿಯನ್ನು ಕಂಡೊಡನೆ ಅವನ ಮನ ಕಲಕಿಹೋಯಿತು. ಯಾಕೆ ಹೀಗೆ ಬಿಳುಚಿ ಹೋಗಿದ್ದಾಳೆ. ಏನಾಗಿದೆ ಇವಳಿಗೆ ? ಏನಾದರೂ ಖಾಯಿಲೆಯೇ ಎಂಬ ಅನುಮಾನವೂ ಕಂಡಿತು. ಸುಮತಿಯೇ ಸಂಕೇತನಿಗೆ ಮನೆಯವರ ಪರಿಚಯವನ್ನು ಮಾಡಿಕೊಟ್ಟಳು. ಅವಳ ಮನೆಯವರು ಮೇಲ್ನೋಟಕ್ಕೆ ಚೆನ್ನಾಗಿ ಮಾತುಗಳನ್ನಾಡಿಸಿದರೂ, ಅಂತರಂಗದಲ್ಲಿ ಏನೋ ತಳಮಳವಿದೆ ಎಂದುಕೊಂಡಿದ್ದರು. ಇಬ್ಬರೂ.

''ಯಾಕೋ ಈ ಮನೆಯ ಅಟ್ಮಾಸ್ಫಿಯರ್ ಚೆನ್ನಾಗಿಲ್ಲ ಅಂತೆನ್ನಿಸ್ತಿದೆ. ನಾವು ಬಂದಿದ್ದು ಸರಿ ಹೋಗ್ಲಿಲ್ಲ'' ಎಂದಿದ್ದ ಹರೀಶ.

''ನಾನು ಸುಮತಿಯ ಹತ್ತಿರ ಪರ್ಸನಲ್ ಆಗಿ ಮಾತನಾಡಬೇಕು. ಅವಳಿಗೆ ಹೇಳ್ತೀಯ.''

''ನಾವಿಬ್ಬರೂ ಇಲ್ಲಿಯ ಲಾಡ್ಜ್ ಒಂದರಲ್ಲಿ ಇಳಿದುಕೊಂಡಿದೇವೆ. ಅಲ್ಲಿಗೆ ಬನ್ನಿ. ಸಂಕೇತ ನಿಮ್ಮ ಹತ್ತಿರ ಮಾತನಾಡಬೇಕಂತೆ.'' ಎಂದು ಹೇಳಿ ಸುಮತಿಯನ್ನು ಒಪ್ಪಿಸಿದ.

''ಯಾವುದೋ ಬಿಸಿನೆಸ್ ಮೇಲೆ ಇಲ್ಲಿಗೆ ಬಂದಿದ್ದೆವು. ಹಾಗೇ ಸುಮತಿ ಮೇಡಂನ್ನು ನೋಡಿ ಮಾತನಾಡಿಸಲು ಬಂದೆವು ನಾವಿನ್ನು ಬರ್ತೀವಿ'' ಎಂದು ಇಬ್ಬರೂ ತಿಂಡಿಯನ್ನು ತಿನ್ನುತ್ತಾ ನುಡಿದರು.

''ಎರಡು ದಿನ ಇದ್ದು ಹೋಗಬಹುದಾಗಿತ್ತು. ಬೆಂಗಳೂರಿನಂತಹ ದೊಡ್ಡ ಊರಲ್ಲ ಇದು ಆದರೂ ನೋಡಬಹುದಾದ ಕೆಲವು ಜಾಗಗಳಿವೆ... ಉಳಿದುಕೊಂಡರೆ ನೋಡಬಹುದಾಗಿತ್ತು.'' ಶಾಮಣ್ಣ ಹೇಳಿದರು.

''ಮತ್ತೆ ಎಂದಾದ್ರೂ ಬರ್ತೀವಿ'' ಎಂದು ಹೇಳಿ ಹೊರಟರು. ಸುಮತಿ ಗೇಟಿನ ತನಕ ಬಂದಿದ್ದಳು. ಸಂಕೇತ ಅವಳ ಕೈ ಹಿಡಿದ. ಅವಳು ಕೊಸರಿಕೊಂಡಳು.

''ನಾನು ತುಂಬಾ ಮಾತನಾಡಬೇಕು'' ಈಗಲೇ ನಮ್ಮ ಜೊತೆಯಲ್ಲಿ ಬಾ'' ಎಂದ.

''ನೀವು ಹೋಗಿರಿ ನಾನು ಬರ್ತೀನಿ'' ಎಂದು ಕಳಿಸಿದಳು.

ಅವಳು ಲಾಡ್ಜ್ ಬಳಿಗೆ ಬರುವವರೆಗೂ, ಸಂಕೇತ ಚಡಪಡಿಸುತ್ತಾ ಅಲ್ಲೇ ವೈಯಿಟಿಂಗ್

ಹಾಲ್ ಬಳಿ ನಿಂತಿದ್ದ. ಸುಮತಿಯನ್ನು ಕಂಡೊಡನೆ ಅವಳನ್ನು ತನ್ನ ರೂಮಿಗೆ ಕರೆದುಕೊಂಡು ಹೋದ. ಹರೀಶ ನಾನು ಇಲ್ಲೇ ಸುತ್ತಾಡಿ ಬರ್ತೀನಿ ಎಂದು ಹೊರಗೆ ಬಂದ... ಅವನು ಅತ್ತ ಹೋದ ಕೂಡಲೇ ಸುಮತಿಯನ್ನು ಬಾಚಿ ತಬ್ಬಿಕೊಂಡ. ಅವಳು ಬಿಡಿಸಿಕೊಂಡಳು.

"ಪ್ಲೀಸ್..." ಎಂದಳು. ಮುಖದಲ್ಲಿ ಕಳೆಯೇ ಇರಲಿಲ್ಲ.

"ಯಾಕೆ ಹೀಗಾಗಿದೀಯ ಸುಮತಿ ? ಮನೇಲಿ ಏನಾದ್ರೂ ಪ್ರಾಬ್ಲಂ ?"

" ಏನೂ ಇಲ್ಲ. ಸ್ವಲ್ಪ ಹುಶಾರಿರಲಿಲ್ಲ ಅಷ್ಟೇ."

"ನನಗ್ಯಾಕೆ ಕಾಗದ ಬರೀಲಿಲ್ಲ ನೀನು ?"

"ಏನಂತ ಬರೆಯಬೇಕಾಗಿತ್ತು ?"

"ಮನೇಲಿ ಏನಾದ್ರೂ ಹಗರಣವಾಯಿತಾ ? ಏನಾಯ್ತು ಹೇಳು..." ಒತ್ತಾಯಿಸಿದ.

"ಏನೂ ಇಲ್ಲ ಅಂತ ಅಂದ್ನಲ್ಲ..." ತಲೆಯನ್ನ ಎತ್ತದೇ ನುಡಿದಳು.

"ನಿಮ್ಮ ಅಕ್ಕನಿಗೆ ಮದುವೆ ಆಯಿತಾ ?"

"ಇಲ್ಲ ಎನ್ನುವಂತೆ ತಲೆಯಾಡಿಸಿದಳು." ಅವರಿಗೋಸ್ಕರ ನಾವು ಕಾಯ್ತಾ ಕೂತಿರುವುದು ಮೀನಿಂಗ್‌ಲೆಸ್ ಅಂತ ಅನ್ನಿಸುತ್ತೆ. ನಾನೇ ನಿಮ್ಮ ತಂದೆಯ ಹತ್ತಿರ ಮಾತನಾಡ್ತೀನಿ... ನಾನು ಎಲ್ಲಾ ರೆಡಿ ಮಾಡಿ ಬಂದಿದೀನಿ."

"ಈ ಮದುವೆಗೆ ಯಾರೂ ಒಪ್ಪುಲ್ಲ ಸಂಕೇತ್. ಪ್ಲೀಸ್ ನನ್ನನ್ನು ಮರೆತು ಬಿಡಿ."

"ಇಂಪಾಸಿಬಲ್. ಏನು ಅಂತ ತಿಳಿದುಕೊಂಡಿದೀಯ ? ನಿನಗೋಸ್ಕರ ಮತ್ತೆ ಬಂದಿದೀನಿ. ತಮಾಷೆ ಮಾಡಬೇಡ."

"ತಮಾಷೆಯಲ್ಲ. ಪ್ಲೀಸ್ ನನ್ನನ್ನು ಅರ್ಥ ಮಾಡಿಕೊಳ್ಳಿ..."

"ನನಗೆಲ್ಲಾ ಅರ್ಥವಾಗ್ತಿದೆ. ನನ್ನ ಜೊತೆ ಪ್ರೀತಿಯ ನಾಟಕವನ್ನಾಡಿ, ಈಗ ನಾನು ಬೇಡವಾದೆನಾ ?"

"ಇಲ್ಲ. ಹಾಗಲ್ಲ. ನಾನು ಈಗಲೂ ನಿಮ್ಮನ್ನು ಪ್ರೀತಿಸ್ತೀನಿ. ಆದರೆ ಮದುವೆ ಮಾತ್ರ ಸಾಧ್ಯವಿಲ್ಲ."

"ಯಾಕೆ ಸಾಧ್ಯವಿಲ್ಲ ? ಯಾಕೆ ಸಾಧ್ಯವಿಲ್ಲ ? ಇದು ನೀನೊಬ್ಬಳೇ ನಿರ್ಧರಿಸುವ ವಿಷಯವಲ್ಲ. ನಾನು, ನಿನ್ನ ಪೇರೆಂಟ್ಸ್ ಹತ್ತಿರ ಮಾತಾಡ್ತೀನಿ."

"ಪ್ಲೀಸ್ ಅರ್ಥಮಾಡಿಕೊಳ್ಳಿ... ನನಗೂ ಈ ಮದುವೆ ಇಷ್ಟವಿಲ್ಲ."

"ಏನಂದೆ ? ನನಗೆ ಮೋಸ ಮಾಡ್ತಾ ಇದೀಯ ನೀನು... ನಾನು ನಿನ್ನನ್ನು ಸುಮ್ಮನೆ ಬಿಡೋಲ್ಲ." ಅವಳ ಮುಖವನ್ನು ತನ್ನೆಡೆಗೆ ತಿರುಗಿಸಿಕೊಂಡ.

"ನನ್ನನ್ನು ಕ್ಷಮಿಸಿ ಬಿಡಿ" ಕೈ ಮುಗಿದು ಕೇಳಿಕೊಂಡಳು.

"ಓ, ಮಹಾ ವಿರಾಗಿಣಿ ತರಹ ಮಾತನಾಡಬೇಡ. ನಾನೂ ಸ್ಟಬರ್ನ್... ನಿನಗೆ ಬೇಕಿರಲಿ ಬಿಡಲಿ, ನಿನ್ನನ್ನೇ ಮದುವೆಯಾಗೋದು. ಅದು ಯಾರು ತಪ್ಪಿಸ್ತಾರೋ ನಾನೂ ನೋಡೇ ಬಿಡ್ತೀನಿ." ಹಠದಿಂದ ನುಡಿದ.

"ಹಠ ಮಾಡಬೇಡಿ ಸಂಕೇತ್... ನನಗಿಂತ ಒಳ್ಳೆಯ ಹುಡುಗಿ ನಿಮಗೆ ಖಂಡಿತಾ ಸಿಗ್ತಾಳೆ..." ಕೆಳದನಿಯಲ್ಲಿ ನುಡಿದಳು.

"ಹಾಗಾದ್ರೆ ನನಗಿಂತ ಒಳ್ಳೆಯ ಹುಡುಗ ನಿನಗೆ ಸಿಕ್ಕಿರಬಹುದು... ಯಾರವನು ? ಯಾರವನು ? ಹರೀಶನಾ ? ಅಥವಾ ಇನ್ಯಾರು ?" ಗಟ್ಟಿಸಿ ಕೇಳಿದ.

"ಯಾರೂ ಇಲ್ಲ, ನಾನು ಬೇರೆ ಯಾರನ್ನೂ ಮದುವೆಯಾಗುಲ್ಲ" ಅವಳು ಬಿಕ್ಕಿ ಬಿಕ್ಕಿ ಅಳತೊಡಗಿದಾಗ ಅವನಿಗೂ ಕಸಿವಿಸಿಯಾಗಿತ್ತು. ಏನೋ ನಡೆದಿದೆ ತನ್ನಿಂದ ಮುಚ್ಚಿಡುತ್ತಿದ್ದಾಳೆ ಎಂದು ಖಚಿತವಾಗಿತ್ತು.

"ಓ...ಕೆ... ಅಳಬೇಡ. ಎಷ್ಟೇ ವರ್ಷಗಳಾದರೂ ಪರವಾಗಿಲ್ಲ, ನಾನು ನಿನಗೋಸ್ಕರ ಕಾಯ್ತೀನಿ. ನಿನ್ನನ್ನಲ್ಲದೇ ನಾನೂ ಬೇರೆ ಯಾರನ್ನು ಮದುವೆಯಾಗುಲ್ಲ. ಕಣ್ಣು ಮೂಗು ಒರೆಸ್ಕೋ... ಏಳು ನಿನ್ನನ್ನು ಮನೆಗೆ ಬಿಟ್ಟು ಬರ್ತೀನಿ." ಎಂದ ಅಷ್ಟರಲ್ಲಿ ಹರೀಶನೂ ಬಂದಿದ್ದ. ಇಬ್ಬರೂ, ಸುಮತಿಯನ್ನು ಮನೆಗೆ ತಲುಪಿಸಿದರು. ವಾಪಸ್ಸು ಬೆಂಗಳೂರಿಗೆ ಹೊರಟರು.

ಹರೀಶನಿಗೂ ಏನು ವಿಷಯ ಗೊತ್ತಿಲ್ಲ. ಗೊತ್ತಿದ್ದರೆ ಖಂಡಿತಾ ಹೇಳಿರುತ್ತಿದ್ದ ಅಂತಂದುಕೊಂಡ.

"ಯಾವಾಗಯ್ಯ ಮದುವೆ ? ಸುಮತಿ ಏನಂದ್ರು ?"

"ಅವರ ಅಕ್ಕನಿಗೆ ಮದುವೆಯಾಗಿಲ್ಲ... ಅದನ್ನೇ ಯಾಕೋ ಮನಸ್ಸಿಗೆ ಹಚ್ಚಿಕೊಂಡು ಬಿಟ್ಟಿದಾಳೆ. ನಾನು ಅಲ್ಲೀವರೆಗೂ ಕಾಯ್ತೀನಿ."

"ಅಂದ್ರೆ... ಈಗ ವಾಪಸ್ಸು ಹೊರಟು ಹೋಗ್ತೀಯ !"

"ಹುಂ. ಒಂದೆರಡು ದಿನ ಮನೇಲಿದ್ದು ರಜ ಕ್ಯಾನ್ಸಲ್ ಮಾಡಿಸಿ ಹೊರಟು ಹೋಗ್ತೀನಿ. ಸುಮತಿ ಕರೆದಾಗ ಬರ್ತೀನಿ.... ಇಲ್ಲದಿದ್ದರೆ ಮತ್ತೆ ಬರೋದೇ ಇಲ್ಲ."

"ನೀನ್ಯಾಕೋ ಇಷ್ಟು ಬೇಜಾರು ಮಾಡ್ಕೋತೀಯ ? ಒಂದು ಸಣ್ಣ ಮೈನರ್ ಆಕ್ಸಿಡೆಂಟ್

ಆಗಿತ್ತು ಅಷ್ಟೇ. ನಾನೇ ಆಗ ಸುಮತಿಯನ್ನು ಇಲ್ಲಿಗೆ ಕರೆತಂದು ಬಿಟ್ಟೆ. ಏನೋ ಡಿಪ್ರೆಷನ್ ಇರಬಹುದು. ಕ್ರಮೇಣ ತಾನಾಗೇ ಸರಿಹೋಗುತ್ತೆ."

"ಮೊದ್ಲೇ ನೀನ್ಯಾಕೆ ಹೇಳ್ಲಿಲ್ಲ. ಸುಮತೀ ಕೂಡಾ ಹೇಳ್ಲಿಲ್ಲ."

"ಅವರು ಮರೆತಿರಬಹುದು."

"ಮರೆತಿದ್ದರೆ, ನನ್ನನ್ನು ಮರೆತಿರುತ್ತಿದ್ದಳು. ಅದಲ್ಲ. ಅವಳಿಗೆ ಲೆಕ್ಚರರ್ ಕೆಲಸವನ್ನು ಬಿಡುಕ್ಕೆ ಇಷ್ಟವಿರಲಿಲ್ಲ. ನಾನು ಬೇಡ ಅಂತ ಅಂದಿದ್ದೆ. ಆ ಕೋಪವಿರಬಹುದು."

"ಕೋಪ ಮಾಡಿಕೊಂಡವರ ತರಹ ಕಾಣಲಿಲ್ಲಪ್ಪಾ. ತಲೆಗೆ ಸ್ವಲ್ಪ ಏಟು ಬಿದ್ದಿತ್ತು. ಒಳಗೆ ಏನಾಗಿದೆಯೋ "ಹರೀಶ ಲೊಚಗುಟ್ಟಿದಾಗ ಸಂಕೇತ ಮೌನಿಯಾದ.

ಮಧ್ಯರಾತ್ರಿಯ ಹೊತ್ತಿಗೆ ಮನೆಯನ್ನು ತಲುಪಿದರು. ರಾಜಮ್ಮ ಬಂದು ಬಾಗಿಲನ್ನು ತೆಗೆದಳು. ಆಶ್ಚರ್ಯದಿಂದ ಬಾಯಿ ತೆರೆದಳು." ಅಮ್ಮಾವ್ರನ್ನ ಎಬ್ಬಿಸ್ಲಾ?"

"ಬೇಡ ಲಗೇಜನ್ನು ಮೇಲೆ ಇಟ್ಟು ಬಾ. ಬಾರೋ... ಹರೀ... ಈಗೇನು ಮನೆಗೆ ಹೋಗ್ತೀಯ ! ಬೆಳಿಗ್ಗೆ ಎದ್ದು ಹೋಗೂದಂತೆ..." ಇಬ್ಬರೂ ಮಹಡಿ ಹತ್ತಿದರು. ಅಷ್ಟರಲ್ಲಿ ಜಾನಕಿಯೂ ಎದ್ದು ಬಂದಿದ್ದಳು.

"ಯಾರೇ ರಾಜಮ್ಮ ಯಾರ ಹತ್ರ ಮಾತಾಡ್ತಿದೀಯ ?"

"ಸಂಕಪ್ನೋರು, ಅವರ ಫ್ರೆಂಡು ಅರೀಶಪ್ಪ... ಬಂದವ್ರೆ... ಈಗ್ತಾನೇ ಮೇಲೆ ಓದ್ರು."

"ಸರಿಬಿಡು. ಬೆಳಿಗ್ಗೆ ಮಾತಾಡಿಸ್ತೀನಿ ನೀನು ಮಲಕ್ಕೋ" ಆ ರಾತ್ರಿ, ಹರೀಶ, ಸಂಕೇತ ಒಟ್ಟಿಗೇ ಕುಳಿತು ತುಂಬಾ ಮಾತುಗಳನ್ನಾಡಿದರು. ಡ್ರಿಂಕ್ಸ್ ಆಯಿತು. ಮಧ್ಯೆ ಮಧ್ಯೆ ಸ್ಮೋಕಿಂಗ್ ಸೇವನೆ... ಆದರೂ ಸಂಕೇತನ ಚಿಂತೆ ಕಡಿಮೆ ಆಗಿರಲಿಲ್ಲ. ಬೆಳಿಗ್ಗೆ ಆಯಿತು. ಹರೀಶ ಹೊರಟ. ನೀನು ಮನೇಲೆ ಕೂತು ಟೆನ್ಷನ್ ಮಾಡ್ಕೋಬೇಡ... ನನ್ನ ಜೊತೇಲಿ ಬಾ" ಸ್ನೇಹದಿಂದ ಕರೆದ.

"ಈಗ ಬೇಡ ಆಮೇಲೆ ಬರ್ತೀನಿ. ಮಮ್ಮಿಯ ಜೊತೆ ಮಾತ್ನಾಡೋದಿದೆ" ಇಬ್ಬರೂ ಕೆಳಗಿಳಿದು ಬಂದರು ಅಲ್ಲೇ ಕೂತಿದ್ದ ಜಗ್ಗು ಸಂಕೇತನನ್ನು ನೋಡಿ ಹಲ್ಲು ಕಿರಿದ. ಸಂಕೇತ ಹಲ್ಲುಕಡಿದ. ಆದರೆ ರೇಗಲಿಲ್ಲ.

"ಎದ್ದೇನೋ ಸಂಕೂ... ಅದೇನು ಇದ್ದಕ್ಕಿದ್ದ ಹಾಗೆ ಬಂದು ಬಿಟ್ಟಿದೀಯ." ಎನ್ನುತ್ತಾ ಜಗ್ಗುವಿನ ಕೈ ಹಿಡಿದು ಎಳೆದುಕೊಂಡು ಹೋಗಿ, ರೂಮಿನಲ್ಲಿ ಬಿಟ್ಟು ಬಂದಳು.

"ಹುಂ. ಬರ್ಬೇಕು ಅಂತ ಅನ್ನಿಸ್ತು ಬಂದೆ. ಬಾರೋ ಹರೀಶ... ಕಾಫಿ ಕುಡಿಯೂವಂತೆ." ಇಬ್ಬರೂ, ಜಾನಕಿ ತಂದಿತ್ತ ಕಾಫಿಯನ್ನು ಕುಡಿದರು. ಸಂಕೇತ ತಾಯಿಯನ್ನೇ ಗಮನಿಸುತ್ತಿದ್ದ ಹರೀಶ ಎದ್ದು ಹೋದ ಮೇಲೆ ಸಂಕೇತ ತಾಯಿಯನ್ನು ಪ್ರಶ್ನಿಸಿದ.

"ಎಲ್ಲಿ ನಿನ್ನ ಪೇಯಿಂಗ್ ಗೆಸ್ಟ್ ಕಾಣ್ತಾ ಇಲ್ಲ..."

"ಅವಳು ಭದ್ರಾವತಿಗೆ ಹೋದಳು. ಯಾಕೆ ಹರೀಶ ಹೇಳಲಿಲ್ವಾ ? ಅವನ ಜೊತೆಯೇ ಹೋದಳಲ್ಲ..." ಜಾನಕಿ ಓರೆಗಣ್ಣಿನಿಂದ ಮಗನನ್ನೇ ನೋಡಿದಳು.

"ಇಲ್ಲ, ಅವನು ಹೇಳಲಿಲ್ಲ. ಈಗ ಯಾರೂ ಬೇರೆ ಪೇಯಿಂಗ್ ಗೆಸ್ಟ್ ಇಲ್ವಾ !"

"ಇಲ್ಲ, ಸದ್ಯಕ್ಕೆ ಬೇಡ ಅಂತನ್ನಿಸ್ತು... ಸುಚಿತ್ರಳ ಮಾತಿಗೆ ಬೆಲೆ ಕೊಟ್ಟು ಕೊಟ್ಟೆ. ಈ ಹೆಣ್ಣು ಹುಡುಗಿಯರನ್ನು ನೋಡಿಕೊಳ್ಳುವುದು ಕಷ್ಟ..."

ಮಮ್ಮಿಗೆ ತನ್ನ ಮೇಲೆ ಸಂದೇಹ ಬಂದಿರಬಹುದೇ ಎಂದುಕೊಂಡು ಮತ್ತೆ ಕೇಳಿದ..." ಏನಾಯ್ತು ! ಏನು ಮಾಡಿದಳು ? ನನ್ನ ಮಗಳ ತರಹ, ಹಾಗೇ ಹೀಗೇ ಅಂತ ಹೇಳಿದ್ದೆ, ನೀನೇ..." ವ್ಯಂಗ್ಯವಾಗಿ ಕೇಳಿದ. ಅವಳಿಗೆ ಅರ್ಥವಾಗಿತ್ತು.

"ಅವಳೇನೋ ಒಳ್ಳೆಯವಳೇ... ಆದರೆ ವಯಸ್ಸು ಕೆಟ್ಟದು... ಒಂದು ದಿನ ಏನೋ ಅನಾಹುತ ನಡೆದಿದೆ... ಎಷ್ಟು ಕೇಳಿದರೂ ಹೇಳಲಿಲ್ಲ. ಭದ್ರಾವತಿಗೆ ಹೊರಟೇ ಹೋದಳು ನನಗೆ ಈ ಹರೀಶನ ಮೇಲೇ ಅನುಮಾನ... ನಿನ್ನ ಸ್ನೇಹಿತರೇ ಸರಿಯಿಲ್ಲ." ಸಂಕೇತನ ಎದೆಯ ಬಡಿತ ನಿಂತಂತಾಯಿತು.

"ಹರೀಶ ಅಂಥೋನಲ್ಲ, ಅವನ ಮದುವೆ ಗೊತ್ತಾಗಿದೆ... ಬೇರೆ ಯಾರಿಗೂ ಅಷ್ಟು ಧೈರ್ಯವಿಲ್ಲ..." ಅಂತೂ ಏನೇ ನಡೆಯಬಾರದ್ದು ನಡೆದಿದೆ ಎಂದು ತಿಳಿದಿತ್ತು.

"ಹೋಗಲಿ ಬಿಡು ನಮಗ್ಯಾಕೆ ? ಏನೋ ಆಗಿ ಹೋಯ್ತು. ಪೋಲಿಸ್ ಕಂಪ್ಲೆಂಟ್ ಕೊಡೋಣ ಅಂತಂದ್ರೆ ಸುಮತಿಯೂ ಒಪ್ಪಲಿಲ್ಲ, ನಾನೂ ಹೆದರಿದೆ." ಸಂಕೇತ ಏನನ್ನೋ ಯೋಚಿಸ್ತಿದ್ದ. ಸುಮತಿ ತನಗೇಕೆ ಹೇಳಲಿಲ್ಲ? ಹರೀಶನಂತೂ ಖಂಡಿತಾ ಅಲ್ಲ, ಅವನೇ ಆಗಿದ್ದಿದ್ರೆ ನನ್ನ ಜೊತೆ ಬರುವ ಧೈರ್ಯವಿರಲಿಲ್ಲ. ಅವಳನ್ನು ಮೆಚ್ಚಿದ್ದೇನೆಂದು ಹೇಳಿದ ಮಾತ್ರಕ್ಕೆ ಅವನ ಮೇಲೆ ಅನುಮಾನ ಪಡಬಾರದು... ಅವನಿಗೂ ಗೊತ್ತಿರಲಾರದು. ಗೊತ್ತಿದ್ದರೆ ಖಂಡಿತಾ ಹೇಳಿರುತ್ತಿದ್ದ... ಎಂದುಕೊಂಡಾಗ, ಸುಮತಿಯ ಮೇಲೂ ಕೋಪ ಬಂದಿತ್ತು. ತನ್ನನ್ನು ತಾನು ಸ್ಮಾರ್ಟ್ ಅಂತ ಅಂದುಕೊಳ್ತಾಳೆ. ಕೇರ್‌ಫುಲ್ ಆಗಿ ಇರಲು ಆಗಲಿಲ್ವಾ ! ತನಗೆ ಒಂದು ಮಾತು ತಿಳಿಸದೇ ಹೊರಟು ಹೋಗಿದಾಳಲ್ಲ... ನನ್ನ ಸ್ನೇಹಿತರು ಯಾರೇ ಆಗಿದ್ದರೂ, ಖಂಡಿತಾ ಹೇಳಿರುತ್ತಿದ್ದಳು... ಅವಳು ಮುಚ್ಚಿಡಬೇಕಾದರೆ, ಮನೆಯವರೇ ಯಾರೋ ಇರಬಹುದು... ಯಾರು? ನಮ್ಮ ಮನೆಗೆ ಬೇರೆ ಯಾರೂ ಬರುತ್ತಿರಲಿಲ್ಲ. ಮಮ್ಮಿ ಸದಾ ಮನೆಯಲ್ಲೇ ಇರುತ್ತಿದ್ದಳು. ಇಲ್ಲಿ ಜಗ್ಗು ಒಬ್ಬನನ್ನು ಬಿಟ್ಟು... ಬೇರೆ....

"ಜಗ್ಗೂ... !" ಇದ್ದಕ್ಕಿದ್ದಂತೆ ಅವನ ಎದೆ ಬಡಿತ ತೀವ್ರವಾಯಿತು.

''ಜಗ್ಗೂ ಎಲ್ಲಿ ?'' ಆವೇಶದಿಂದ ಕೇಳಿದ ಜಾನಕಿ ಕುಸಿದವಳಂತೆ ನೆಲದ ಮೇಲೆ ಕುಳಿತಳು.

''ಮಮ್ಮೀ... ನಿಜ ಹೇಳು... ನಿನಗೆ ಎಲ್ಲಾ ಗೊತ್ತಿದೆ... ನಿಜಹೇಳು...'' ಅಲುಗಾಡಿಸಿ ಕೇಳಿದ.

''ಜಗ್ಗೂದು ಏನೂ ತಪ್ಪಿಲ್ಲ ಕಣೋ...'' ಜಾನಕಿ ಅತ್ತಳು. ಸಂಕೇತ ತಣ್ಣಗಾದ.

''ಏನ್ ಮಮ್ಮೀ ಹೀಗೆ ಹೇಳ್ತೀಯ ? ಜಗ್ಗು ಮಾಡಿದ್ದು ತಪ್ಪಲ್ವಾ ? ಸುಮತಿಗೆ ಅನ್ಯಾಯವಾಗಲಿಲ್ವಾ ?'' ಅವನ ಕಣ್ಣುಗಳು ಕೆಂಪಡರಿದ್ದವು. ಅದರುವ ಧ್ವನಿಯಲ್ಲಿ ಕೇಳಿದ.

''ಜಗ್ಗು ಇಷ್ಟು ಬೆಳೆದಿದಾನೆ ನಂಗೆ ಗೊತ್ತಾಗ್ಲಿಲ್ಲ ಕಣೋ...'' ಭಯದಿಂದ ಬೆವತಿದ್ದಳು.

''ಇನ್ನು ಅವನು ಈ ಮನೇಲಿರ ಕೂಡದು... ಅವನನ್ನು ಎಲ್ಲಿಗಾದ್ರೂ ಕರೆದುಕೊಂಡು ಹೋಗಿ ಬಿಟ್ಟು ಬಾ... ಅವನು ಈ ಮನೇಲಿರೋ ತನಕ, ನಾನು ಈ ಮನೆಯೊಳಗೆ ಬರುಲ್ಲ.'' ಎನ್ನುತ್ತಾ ಹೊರಗೆ ಹೋಗಿ ನಿಂತ. ಜಾನಕಿ ಇಕ್ಕಟ್ಟಿಗೆ ಸಿಕ್ಕಿ ಬಿದ್ದಳು. ''ಜಗ್ಗೂ ಪರವಾಗಿ ನಾನು ಕ್ಷಮೆ ಕೇಳ್ತೀನಿ. ನಿನಗೇ ಗೊತ್ತು ಅವನು ತಿಳುವಳಿಕೆ ಇಲ್ಲದವನು...''

''ನಿನ್ನ ಮಗನನ್ನು ಕಂಟ್ರೋಲ್‌ನಲ್ಲಿ ಇಟ್ಟುಕೊಳ್ಳಲು ಆಗದೇ ಇರುವಾಗ ಪೇಯಿಂಗ್ ಗೆಸ್ಟನ್ನು ಯಾಕೆ ಇಟ್ಟುಕೊಂಡೆ... ಮೊದಲು ಓಡಿಸು ಇವನನ್ನು...''

''ಎಲ್ಲಿಗೆ ಹೋಗ್ತಾನೆ ನೀನೇ ಹೇಳು. ನಿನಗಾದರೆ ವಿದ್ಯೆ ಇದೆ, ಬುದ್ಧಿ ಇದೆ. ಕೆಲಸ ಇದೆ. ಸಂಪಾದನೆ ಇದೆ. ಈ ನತದೃಷ್ಟನಿಗೆ ನನ್ನ ಹೊರತು ಬೇರೆ ಯಾರಿದಾರೆ ...?'' ಜಾನಕಿ ಬಿಕ್ಕಿ ಬಿಕ್ಕಿ ಅತ್ತರೂ ಅವನ ಮನ ಕರಗಲಿಲ್ಲ.

''ಅದೆಲ್ಲ ನನಗೆ ಗೊತ್ತಿಲ್ಲ. ಪೊಲೀಸ್ ಕೇಸ್ ಆದರೆ, ನಿನ್ನ ಮಗನಿಗೆ ಜೈಲು ಶಿಕ್ಷೆ ಆಗುತ್ತೆ... ಅಂತಹ ಕೆಲಸ ಮಾಡಿದಾನೆ... ನೀನು ಯಾವುದಾದರೂ ಒಂದನ್ನು ಡಿಸೈಡ್ ಮಾಡಲೇಬೇಕು... ಅಲ್ಲಿವರೆಗೂ ನಾನು ಈ ಮನೆಯೊಳಕ್ಕೆ ಬರುವುದಿಲ್ಲ'' ಎಂದು ಹೇಳಿ, ಹೊರಗೆಲ್ಲೋ ಹೊರಟು ಹೋದ. ಜಾನಕಿ ಹೆದರಿ ನಡುಗಿದಳು. ಆವೇಶದಲ್ಲಿ ಜಗ್ಗೂನ ಹೊಡೆದಳು.

ಸಂಕೇತ ಸೀದಾ ಹರೀಶನ ಮನೆಗೆ ಬಂದ. ಅವನ ಮುಖದ ಪ್ರೇತ ಕಳೆಯನ್ನು ಹರೀಶ ಗಮನಿಸಿದ. ಅವನನ್ನು ತನ್ನ ರೂಮಿಗೆ ಕರೆದುಕೊಂಡು ಹೋದ... ಸಂಕೇತ ಸ್ನೇಹಿತನ ಕೈಯನ್ನು ಹಿಡಿದುಕೊಂಡು, ಎಲ್ಲವನ್ನು ಹೇಳಿ ಅತ್ತುಬಿಟ್ಟ.

''ನನ್ನಿಂದ ಸುಮತಿಗೆ ಅನ್ಯಾಯವಾಯಿತು... ಈ ಜಗ್ಗು ಇಂತಹ ಲೋಫರ್ ಅಂತ ನನಗೆ ಗೊತ್ತಿರಲಿಲ್ಲ...'' ಎಂದ.

''ನನಗೂ ಅದೇ ಆಶ್ಚರ್ಯ... ಅಲ್ಲ ತಿಳುವಳಿಕೆಯೇ ಇಲ್ಲದವನಿಗೆ ಈ ಆಸೆ ಹೇಗೆ ಬಂತು ಅಂತ ?''

"ಪ್ರಾಣಿ, ಪಕ್ಷಿಗಳಿಗೂ ಈ ಆಸೆ ಇರುತ್ತೆ ಅಲ್ವಾ ? ಅವನು ಮನುಷ್ಯನೇ ಅಲ್ಲ, ದನ, ಪಶು... ಒಟ್ನಲ್ಲಿ ಸುಮತಿಯನ್ನು ಹಾಳು ಮಾಡಿಬಿಟ್ಟ, ಅದಕ್ಕೇ ಅವಳು ಹಾಗಿರುವುದು. ಮದುವೆ ಬೇಡಾಂತ ಹೇಳಿದ್ದು, ನನಗೆ ಒಂದು ಚೂರೂ ಅನುಮಾನ ಬರಲಿಲ್ಲ. ಈಗ ಏನು ಮಾಡಬೇಕೂಂತ ತಿಳೀತಾನೇ ಇಲ್ಲ. ಮನೆಗೂ ಹೋಗೋಕೆ ಇಷ್ಟವಿಲ್ಲ. ನಾನು ವಾಪಸ್ಸು ಹೊರಟು ಹೋಗ್ತೀನಿ."

"ನೀನು ವಾಪಸ್ಸು ಹೊರಟು ಹೋದರೆ, ಸುಮತಿಯ ಬಾಳು ಸರಿ ಹೋಗುತ್ತಾ ಸಂಕೇತ್ ... ನೀನು ಅವಳನ್ನು ಮನಸಾರೆ ಪ್ರೀತಿಸ್ತೀನಿ ಅಂತೀಯ. ಈಗ ನೀನು ಅವಳ ಕೈ ಬಿಡಬಾರದು... ಅವಳಿಗೆ ಬಾಳು ಕೊಡಬೇಕು..." ಸಂಕೇತ ಮಿಕಿ ಮಿಕಿ ಅವನನ್ನೇ ನೋಡಿದ...

"ಯಾಕೆ ಹಾಗೆ ನೋಡ್ತೀಯಾ ? ನಾನು ಹೇಳಿದ್ದರಲ್ಲಿ ತಪ್ಪೇನಿದೆ ? ನೀನು ನಿಜವಾಗಿಯೂ ಅವಳನ್ನು ಪ್ರೀತಿಸುವುದಾದರೆ, ಅವಳನ್ನು ಮದುವೆಯಾಗಿ ಅಮೆರಿಕಾಕ್ಕೆ ಕರೆದುಕೊಂಡು ಹೋಗು... ಕ್ರಮೇಣ ಎಲ್ಲಾ ಸರಿ ಹೋಗುತ್ತದೆ." ಅವನ ಕೈ ತಟ್ಟಿದ

"ನೀನು ಹೇಳೋದು ಸರಿ, ಹರೀ... ನನಗ್ಯಾಕೆ ಇದು ಹೊಳೆಯಲೇ ಇಲ್ಲ ಅಂತ."

"ನೀನು ಬೇಗ ಅಪ್ಸೆಟ್ ಆಗಿ ಬಿಡ್ತೀಯ... ಜಗ್ಗೂ ಮೇಲಿನ ಕೋಪದಿಂದ ಅನ್ಯಾಯವಾಗೋದು ಸುಮತಿಗೆ. ನಿನ್ನ ಜಾಗದಲ್ಲಿ ನಾನೇ ಇದ್ದಿದ್ದರೆ, ಹಿಂದು ಮುಂದು ಯೋಚಿಸದೇ ಈ ನಿರ್ಧಾರಕ್ಕೆ ಬರ್ತಿದ್ದೆ."

"ಯೂ ಆರ್ ಗ್ರೇಟ್... ಥ್ಯಾಂಕ್ ಯೂ ವೆರಿಮಚ್" ಕೈಗಳನ್ನು ಅಮುಕಿದ.

"ಮೊದಲು ಸುಮತೀನ ಒಪ್ಪಿಸಬೇಕು... ಅವರು ಇಲ್ಲಿಗೇ ಬರೋ ಹಾಗೆ ಏನಾದ್ರೂ ಪ್ಲಾನ್ ಮಾಡಬೇಕು ಎಲ್ಲರೆದುರಿಗೆ ಮಾತನಾಡಲು ಆಗುವುದಿಲ್ಲ."

"ಈಗ ನೀನೇ ಏನಾದ್ರೂ ಪ್ಲಾನ್ ಹುಡುಕಪ್ಪಾ ನನ್ನ ತಲೆಯಂತೂ ಹೊಗೆಯಿಂದ ತುಂಬಿ ಹೋಗಿದೆ. ಈ ಜಗ್ಗೂಗೆ ಏನು ಮಾಡಬೇಕೂಂತ ತಿಳೀತಿಲ್ಲ."

"ನಿಮ್ಮ ಮಮ್ಮೀನೂ ಹೇಳೋದು ನಿಜ. ಅವನಿಗೆ ತಾನೇ ಬೇರೆ ಯಾರಿದಾರೆ ?"

"ಅವನಂಥೋರಿಗೆ ಅಂತ ಬೇಕಾದಷ್ಟು 'ಹೋಂ'ಗಳಿವೆ. ಅಲ್ಲಿ ಬಿದ್ದಿರಲಿ... ಮನೇಲಿದ್ದು ಅವನು ಯಾರನ್ನೂ ಉದ್ಧಾರ ಮಾಡಬೇಕಾಗಿಲ್ಲ. ಮಮ್ಮಿ ಅವನನ್ನು ಎಲ್ಲಿಗೂ ಸೇರಿಸದೇ ಇದ್ದರೆ, ನಾನು ಅವನನ್ನು ಜೈಲಿಗೆ ಕಳಿಸ್ತೀನಿ." ಮನದ ಕಹಿಯನ್ನು ಉಗುಳಿದ.

"ನಿಮ್ಮ ಮನೆಯ ಮರ್ಯಾದೆಯೇ ಹೋಗುತ್ತಲ್ಲೋ. ಸುಮತಿಯ ಮೇಲೆ ಅಪವಾದ ಬರುತ್ತೆ. ನಿಮ್ಮ ತಾಯಿಗೆ ಕೆಟ್ಟ ಹೆಸರು ಬರುತ್ತೆ."

"ಈಗ ಏನು ಮಾಡೂಂತ ಅಂತೀಯ ? ಸುಮತಿ ಮದುವೆಗೆ ಒಪ್ಪದಿದ್ದರೆ ನಾನು ಆತ್ಮಹತ್ಯೆ ಮಾಡಿಕೊಳ್ತೇನೆ ಅಷ್ಟೇ..."

"ಇದರಿಂದ ಪ್ರಾಬ್ಲಂ ಇನ್ನು ಹೆಚ್ಚಾಗುತ್ತೆ. ಹುಚ್ಚುಹುಚ್ಚಾಗಿ ಮಾತನಾಡಬೇಡ. ಒಂದು ನಾಲ್ಕು ದಿನ ನಮ್ಮ ಮನೆಯಲ್ಲಿರು. ಯಾವುದಾದರೂ ಪ್ಲಾನ್ ತಾನಾಗಿಯೇ ಕಾಣಬಹುದು... ಏಳು ಊಟ ಮಾಡೋಣ..." ಎಬ್ಬಿಸಿದ.

"ಏನಪ್ಪಾ ಯಾವಾಗ ಬಂದೆ ? ಏನು ವಿಷಯ ?" ಹರೀಶನ ತಾಯಿ ಕೇಳಿದರು. ಹರೀಶನೇ ಏನೋ ಒಂದು ಉತ್ತರಕೊಟ್ಟ.

"ನೀನಾದ್ರೂ ಹರೀಶನಿಗೆ ಸ್ವಲ್ಪ ತಿಳುವಳಿಕೆ ಹೇಳಪ್ಪಾ... ನಮ್ಮ ಅಣ್ಣ ಅಂತೂ ಯಾವಾಗ ಮದುವೇನ ಇಟ್ಟುಕೊಳ್ಳೋಣ ಅಂತ ಕೇಳ್ತಾನೇ ಇದಾನೆ."

"ಇದನ್ನೆಲ್ಲ ಇವನಿಗೆ ಯಾಕೆ ಹೇಳ್ತೀಯಮ್ಮ ? ಅದು ನನ್ನ ಮದುವೆಯ ವಿಷಯ. ನಾನು ಹೂಂ ಅಂತಂದಾಗ ಮದುವೆ, ಅವಾಂತರವೇನು ?

"ನಿನ್ನ ಮಾವನಿಗೆ ಅವಾಂತರ... ಅವನ ಗಂಡು ಮಕ್ಕಳೂ ಮದುವೆ ವಯಸ್ಸಿಗೆ ಬಂದಿದಾರೆ..."

"ನಾನು ಮಾವನ ಹತ್ತಿರ ಮಾತಾಡ್ತೀನಮ್ಮ. ನೀನು ಯೋಚಿಸಬೇಡ" ಸಂಕೇತ ಕೇಳದಿದ್ದರೂ ಹರೀಶನೇ ಮಾತನಾಡಿದ್ದ." ನಾನು ನಾಳೆ ಚಿಂತಾಮಣಿಗೆ ಹೊರಟಿದೀನಿ ನೀನೂ ಬರ್ತೀಯಾ ?"

"ಯಾವ ಊರು ? ಅದೇ ಕೋಲಾರ ಜಿಲ್ಲೆಯಲ್ಲಿದೆಯಲ್ಲ ಚಿಂತಾಮಣಿ ಅದಾ !"

"ಹೂಂ. ಅದೇ ಅಲ್ಲಿ ನನ್ನ ಮಾವನ ಮಗಳಿದ್ದಾಳೆ. ನಮ್ಮತ್ತೆ ಮಗಳು ಚಿಂತಾಮಣಿ ಅಲ್ಲ, ನಮ್ಮ ಮಾವನ ಊರು ಚಿಂತಾಮಣಿ... ಅಷ್ಟೇ" ನಕ್ಕ. ಸುಮತಿಯ ಬಗ್ಗೆ ಸಂಕೇತ ಚಿಂತಿಸುತ್ತಿದ್ದ. ಅವನ ಮಾತಿಗೆ ನಕ್ಕಂತೆ ಮಾಡಿದ.

"ಹರೀಶ, ಜಾನಕಿಗೆ ಫೋನು ಮಾಡಿದ್ದ ಸಂಕೇತ ಯಾಕೋ ಅಪ್ಸೆಟ್ ಆಗಿದಾನೆ ಒಂದೆರಡು ದಿನಗಳು ನಮ್ಮ ಮನೇಲಿರುತ್ತಾನೆ. ನೀವು ಆತಂಕ ಪಡಬೇಡಿ" ಅಂದಿದ್ದ.

"ಜಗ್ಗೂನ ಯಾವುದಾದ್ರೂ 'ಹೋಂ'ಗೆ ನಾಳೆ ನಾಡಿದ್ದರಲ್ಲಿ ಸೇರಿಸ್ತೀನಿ. ಹಾಗಂತ ಸಂಕೇತನಿಗೆ ಹೇಳಿ ಬಿಡು ಎಂದಿದ್ದಳು. ಹರೀಶ ಸಂಕೇತನಿಗೆ ತಿಳಿಸಿದ. ಆದರೆ ಅವನು ಯಾವ ಪ್ರತಿಕ್ರಿಯೆಯನ್ನೂ ತೋರಲಿಲ್ಲ.



ಚಿಂತಾಮಣಿಗೆ ಹೋಗುವ ಬಸ್ಸನ್ನು ಹತ್ತಿ ಕುಳಿತರು. ಸಂಕೇತ ಅಗತ್ಯಕ್ಕಿಂತ ಹೆಚ್ಚಿನ ಮೌನಿಯಾಗಿದ್ದ. ಯಾಕೆ ಹೀಗಾಯ್ತು! ಸುಮತಿ ದೊರೆಕಿದ್ರೂ ನನ್ನ ದೈವಕ್ಕೆ ಇಷ್ಟವಾಗಲಿಲ್ಲವೇ ?

ತನ್ನನ್ನು ವಿಪರೀತ ಪ್ರೀತಿಸುತ್ತಿದ್ದ ತಂದೆ ತನ್ನಿಂದ ದೂರವಾಗಿದ್ದರು. ಆಗ ವ್ಯಾಸಂಗದ ನಡುವೆ ತನ್ನ ದುಃಖವನ್ನು ಮರೆಯಲು ಪ್ರಯತ್ನಿಸಿದ್ದ. ಜಗ್ಗೂ ತನಗಿಂತ ಹೆಚ್ಚಾಗಿ ತಾಯಿಗೆ ಬೇಕಾದವನು ಅಂತಂದುಕೊಂಡಾಗ ಮನದಲ್ಲಿ ಕತ್ತಲೆ ತುಂಬಿಕೊಂಡಂತಾಗಿತ್ತು. ಬೆಳಕನ್ನು ಅರಸಿ, ಅಮೆರಿಕಾಕ್ಕೆ ಹೊರಟು ಹೋಗಿದ್ದ. ಅಲ್ಲಿಯ ಜೀವನವೂ ಅವನಿಗೆ ಹೊಂದಿಕೆ ಆಗಿರಲಿಲ್ಲ. ಸ್ನೇಹಿತರುಗಳನ್ನು ಬಿಟ್ಟು ಪರದೇಶದಲ್ಲಿ ಪರದೇಶಿಯಂತಾಗಿದ್ದ ತಂದೆ ಸತ್ತ ದುಃಖ, ಜಗ್ಗುವಿನಿಂದಾದ ನಿರಾಸೆಯನ್ನು ಸ್ನೇಹಿತರೊಂದಿಗೆ ಬೆರೆತು, ಆದಷ್ಟು ತನ್ನ ದುಗುಡವನ್ನು ಮುಚ್ಚಿಟ್ಟುಕೊಳ್ಳುತ್ತಿದ್ದ. ಒಮ್ಮೆಗೇ ಸುಮತಿಯನ್ನು ಕಂಡಾಗ ಅವನಲ್ಲಿ ಹೊಸ ಆಸೆ ಉದಯಿಸಿತ್ತು. ಮದುವೆಯಾಗುವ ಹಂಬಲ ಹಣಿಕಿತ್ತು. ಅವಳನ್ನು ಪ್ರೀತಿಸಿದ ಪ್ರೀತಿಯಿಂದ ತನ್ನವಳನ್ನಾಗಿ ಮಾಡಿಕೊಂಡ ಅದರಲ್ಲಿ ಸ್ವಾರ್ಥತೆಯೂ ಇತ್ತು. ಒಮ್ಮೆ ಅವಳು ನನ್ನವಳಾಗಿ ಬಿಟ್ಟರೇ, ಅವಳಿಗೆ ನನ್ನವಳಾಗದೇ, ನನ್ನನ್ನು ಮದುವೆಯಾಗದೇ ಬೇರೆ ವಿಧಿಯೇ ಇಲ್ಲ ಎಂದುಕೊಂಡಿದ್ದ. ಸುಮತಿಯ ಅನು ಮೋದನೆಯೂ ಸಿಕ್ಕಿತ್ತು. ಸ್ನೇಹ, ಪ್ರೀತಿಯ ಜೊತೆಗೆ ಸಂಬಂಧವೂ ಬಲವಾಯಿತು... ಆಗ ಎಂದೂ ತಾವಿಬ್ಬರೂ ತಪ್ಪು ಮಾಡುತ್ತಿದ್ದೇವೆಂದು ಇಬ್ಬರಿಗೂ ಅನಿಸಿರಲಿಲ್ಲ. ಸುಮತಿ ಎಂದೂ ವಿರೋಧಿಸಿರಲಿಲ್ಲ. ಆದರೆ, ತಾವು ಮಾಡಿದ್ದು ತಪ್ಪು ಅಂತ ತನಗೆ ಈಗ ಅನ್ನಿಸ್ತಿದೆ. ಜಗ್ಗು ತಿಳುವಳಿಕೆ ಇಲ್ಲದವನು, ಅಂತ ತಿಳಿದಿದ್ದು ತಪ್ಪು. ಅವನ ಎದುರಿಗೇ ಅವನಿಗೆ ಏನೂ ಗೊತ್ತಾಗುಲ್ಲ ಅಂತ, ನಾನು ಸುಮತಿಯೊಂದಿಗೆ ಸರಸವಾಡಿದ್ದು ತಪ್ಪು. ಅವನಿಗಂತೂ ಬುದ್ಧಿ ಸಾಲದು. ನನಗಾದರೂ ಬುದ್ಧಿ ಬೇಡವೆ ? ಸುಮತಿ, ಜಗ್ಗು ನೋಡ್ತಿದಾನೆ ಅಂತ ಹೇಳಿದಾಗಲೆಲ್ಲಾ, ಅದರ ಕಡೆ ಗಮನವೇ ಕೊಡಲಿಲ್ಲ. ಜಗ್ಗು ನಮ್ಮನ್ನು ಸಾಕಷ್ಟು ಗಮನಿಸಿದ್ದಾನೆ. ಅದಕ್ಕೇ, ಸುಮತಿ ಒಬ್ಬಳೇ ಸಿಕ್ಕಾಗ ಹಾಗೆ ಮಾಡಿದಾನೆ... ಆದರೂ, ಅನ್ಯಾಯವಾದದ್ದು ನನ್ನ ಸುಮತಿಗೆ... ಸುಮತೀ ಪ್ಲೀಸ್ ನನ್ನನ್ನು ಕ್ಷಮಿಸಿಬಿಡು. ತಪ್ಪೆಲ್ಲಾ ನನ್ನದೇ ಜಗ್ಗು ಪರವಾಗಿ ನಾನು ನಿನ್ನನ್ನು ಕ್ಷಮೆ ಕೇಳಬೇಕು... ಒಂದೇ ಒಂದು ಸಾರಿ ನೀನು ನಮ್ಮ ಮನೆಗೆ ಬಾ... ನಾನು ನಿನ್ನ ಹತ್ತಿರ ತುಂಬಾ ಮಾತನಾಡಬೇಕು...''

''ಏನೋ ನಿನಗೆ ನೀನೇ ಮಾತನಾಡಿಕೊಳ್ತಿದೀಯ.. ಏಳು ಇನ್ನೇನು ಚಿಂತಾಮಣಿ ಬಂತು.'' ಸಂಕೇತ ಪೆದ್ದನಂತೆ ಸುಮ್ಮನೇ ನೋಡಿದ.

''ಪೆದ್ದನ ಮುಖ ಮಾಡಬೇಡ. ನಮ್ಮ ಗುಂಪಿನಲ್ಲಿ ನೀನೇ ಹ್ಯಾಂಡ್ಸಮ್... ಮಾವ ಸಹಾ ಹೊಗಳ್ತಾನೆ. ವಿಮ್ಮಿ ಏನಾದ್ರೂ ನಿನ್ನನ್ನು ನೋಡಿದರೆ...'' ಮುಂದೆ ಮಾತನಾಡದೇ ಅರ್ಧಕ್ಕೆ ನಿಲ್ಲಿಸಿದ. ರಿಕ್ಷಾದಲ್ಲಿ ಇಬ್ಬರೂ ಸದಾನಂದನ ಮನೆ ತಲುಪಿದರು.

''ಇವರು ಸದಾನಂದ ಮಾವ... ಪರಿಚಯ ಮಾಡಿಸಿದ. ಸಂಕೇತ ಅವರ ಕೈ ಕುಲುಕಿದ. ನಾನು ಈ ಮುಂಚೆ ನಿಮ್ಮನ್ನು ನೋಡಿದೀನಿ'' ಎಂದ.

''ಹೌದು ಹರೀ ಮನೆಗೆ ಆಗಾಗ ಬರ್ತಿರ್ತೀನಿ... ನೀವು ಸಂಕೇತ... ಅಲ್ವಾ ?''

ಹೌದು ಎನ್ನುವಂತೆ ತಲೆಯಾಡಿಸಿದ. ಏಳಿ ಕೈಕಾಲು ತೊಳೆದುಕೊಳ್ಳಿ. ಊಟದ

ಸಮಯವಾಗಿದೆ ಊಟ ಮಾಡೋರಂತೆ. ಇಬ್ಬರೂ ಎದ್ದರು. ಹರೀಶನ ಸೋದರ ಮಾವನ ಹೆಂಡತಿ ಎಲೆ ಹಾಕಿ, ನೀರಿನ ಲೋಟಗಳನ್ನಿಟ್ಟರು.

''ಅತ್ತೇ... ಇವನು ನನ್ನ ಫ್ರೆಂಡು... ನೋಡಿದ್ರಾ ? ಸ್ವಲ್ಪ ಎತ್ತರದ ಧ್ವನಿಯಲ್ಲಿ ಹೇಳಿದ... ಅತ್ತೆ ಅವನ ಕಡೆ ಮುಗುಳ್ನಗೆ ಬೀರಿದಳು'' ಅವರಿಗೆ ಸ್ವಲ್ಪ ಕಿವಿ ಮಂದ ಜೋರಾಗಿ ಮಾತನಾಡಬೇಕು'' ಎಂದ.

''ವಿಮಲ ಎಲ್ಲಿ ಮಾವ ?''

''ಒಳಗೆ ರೂಮಿನಲ್ಲಿದ್ದಾಳೆ. ರೇಡಿಯೋ ಹಾಕಿಕೊಂಡು ಕೇಳ್ತಾ ಇರಬಹುದು. ಹರೀಶ ಒಳಕ್ಕೆ ಹೋದ. ಕೆಲವೇ ನಿಮಿಷಗಳಲ್ಲಿ ವಿಮಲಳ ಕೈ ಹಿಡಿದು ಒಳಗಿನಿಂದ ಹೊರಕ್ಕೆ ಕರೆತಂದ. ಕೂತಿದ್ದ ಸಂಕೇತ ಎದ್ದು ನಿಂತ. ಕೆಲವೇ ನಿಮಿಷಗಳಲ್ಲಿ ಅವನಿಗೆ ಅರಿವಾಗಿತ್ತು ವಿಮಲಳಿಗೆ ಕುರುಡು ! ಏಕೋ ಏನೋ ಒಂದು ತರಹ ಸಂಕಟವಾದಂತಾಗಿತ್ತು. ಹರೀಶನ ಕಡೆ ನೋಡಿದ. ಅವನು ಗೆಲುವಿನಿಂದ ಇದ್ದ. ಯಾವುದೇ ರೀತಿ ಮುಖ ಕೆಡಿಸಿಕೊಂಡಿರಲಿಲ್ಲ.

''ವಿಮ್ಮೀ... ನನ್ನ ಫ್ರೆಂಡ್ ಬಂದಿದಾನೆ. ಸಂಕೇತ್ ಅಂತ. ಹಲೋ ಹೇಳು.''

ಅವಳು ಕೈ ಮುಗಿದು 'ನಮಸ್ಕಾರ' ಎಂದಳು. ಗರ ಬಡಿದವನಂತೆ, ಸಂಕೇತ ಹಾಗೇ ನಿಂತಿದ್ದ.

''ಇವಳೇ ನನ್ನ ಚಿಂತಾಮಣಿ...'' ವಿಶ್ವಾಸದಿಂದ ಅವಳ ಬೆನ್ನ ಮೇಲೆ ಕೈ ಇಟ್ಟು ಸಂಕೇತನ ಕಡೆ ನೋಡಿದ.

''ನಮಸ್ಕಾರ ಚಿಂತಾಮಣಿಯವರೇ...'' ಸಂಕೇತ ಕೈ ಮುಗಿದಾಗ, ಇಬ್ಬರೂ ಗೊಳ್ಳನೆ ನಕ್ಕಿದ್ದರು. ಆಗ ಅವನಿಗೆ ತನ್ನ ತಪ್ಪಿನ ಅರಿವಾಗಿತ್ತು ''ಸಾರಿ... ವಿಮಲ'' ಎಂದಿದ್ದ.

''ನಿನ್ನ ಊಟ ಆಯ್ತಾ ವಿಮ್ಮೀ...?'' ಹೂಂ. ಎಂದಳು.

''ಅಶೋಕ, ಅರವಿಂದ ಎಷ್ಟು ಹೊತ್ತಿಗೆ ಬರ್ತಾರೆ ?''

''ಈಗ್ತಾನೇ ಹೋದ್ರು ಇನ್ನು ರಾತ್ರಿಗೇ ಬರುವುದು.''

''ನಾನು ಆಮೇಲೆ ಅಲ್ಲೇ ಹೋಟೆಲಿನಲ್ಲೇ ಅವರನ್ನು ನೋಡ್ತೀನಿ'' ಎಂದ. ಇಬ್ಬರೂ ಊಟಕ್ಕೆ ಕುಳಿತರು.

ಹರೀಶ ತನ್ನ ಸೋದರ ಮಾವನ ಜೊತೆ ಏನೋ ಮಾತನಾಡುತ್ತಿದ್ದ ಆ ಮಾತಿನ ಮೇಲೆ ಇವನಿಗೆ ಗಮನವಿರಲಿಲ್ಲ. ವಿಮಲಳ ಬಗ್ಗೆಯೇ ಚಿಂತಿಸುತ್ತಿದ್ದ. ಹರೀಶ ಚಿನಕುರುಳಿಯಂತೆ. ಪಟಪಟನೆ ಮಾತಾಡ್ತಾನೆ. ಚೆಲ್ಲು ಚೆಲ್ಲಾಗಿ ಆಡ್ತಾನೆ. ಆದರೆ ಇವನಲ್ಲಿ ಇಷ್ಟು ದೊಡ್ಡ ಹೃದಯವಿದೆ

ಅಂತ ತಿಳಿದಿರಲೇ ಇಲ್ಲ. ಹರೀಶ್, ರಿಯಲಿ ಯೂ ಆರ್ ಗ್ರೇಟ್ ಮನದಲ್ಲೇ ಸ್ನೇಹಿತನನ್ನು ಹೊಗಳಿದ.

ಬಸ್‌ಸ್ಟಾಪ್‌ಗೆ ಬರುವ ಮೊದಲು ಹೋಟೆಲ್ಲಿಗೆ ಹೋದರು. ಅಲ್ಲಿ ಅಶೋಕ, ಅರವಿಂದರನ್ನು ಸಂಕೇತನಿಗೆ ಪರಿಚಯ ಮಾಡಿಕೊಟ್ಟ. ಬೇಡ ಬೇಡವೆಂದರೂ, ಅಶೋಕ ತಿಂಡಿ ಕಾಫಿಯನ್ನು ತರಿಸಿ ಕೊಟ್ಟಿದ್ದ.

''ಮದುವೆ ವಿಚಾರ ಏನು ಯೋಚನೆ ಮಾಡ್ದೆ ಹರೀಶ...'' ಅಶೋಕ ಕೇಳಿದ.

''ಅದನ್ನೇ ಮಾತನಾಡುಕ್ಕೆ ಅಂತ ಬಂದೆ. ನನಗೂ ಸ್ವಲ್ಪ ಫೈನಾನ್ಷಿಯಲ್ ಪ್ರಾಬ್ಲಂ ಇದೆ. ನಮಗೋಸ್ಕರ ಕಾಯಬೇಡಿ. ಎಂದಿದ್ದರೂ, ವಿಮಲ ನನ್ನ ಹೆಂಡತೀನೇ ನೀವುಗಳು ಬೇಗ ಮದುವೆಯಾಗಿ ನನ್ನ ಮದುವೆಗೆ ಅವಾಂತರವಿಲ್ಲ'' ಎಂದಿದ್ದ.

''ವಿಮಲನ ಸ್ಥಿತಿ ನಿನಗೆ ಗೊತ್ತೇ ಇದೆ. ತಂಗಿಗೆ ಕುರುಡು ಅಂತ ಗೊತ್ತಾದ ಕೂಡಲೇ ಹೆಣ್ಣಿನ ಮನೆಯವರು ಹಿಂದೆ ಮುಂದೆ ನೋಡ್ತಾರೆ. ಅವಳ ಮದುವೆಯಾಗದೇ ನಮ್ಮ ಮದುವೆಯಾಗುವಂತೆಯೇ ಇಲ್ಲ.''

''ಸರಿ. ಇನ್ನೊಂದೆರಡು ತಿಂಗಳು ಕಳೆಯಲಿ. ನನಗೆ ಒಂದು ಪ್ರಮೋಷನ್ ಸಿಗುವುದಿದೆ. ತಕ್ಷಣ ಮದುವೆ ಮಾಡಿಕೊಳ್ತೀನಿ.''

''ಲಗ್ನ ಪತ್ರಿಕೆಯನ್ನಾದರೂ ಮಾಡಬಹುದಾಗಿತ್ತು.''

''ನೋಡೋಣ ಅಮ್ಮನ ಹತ್ತಿರ ಮಾತನಾಡಿ ತಿಳಿಸ್ತೀನಿ. ನಾವು ಬರ್ತೀವಿ.'' ಸಂಕೇತ ಇಬ್ಬರಿಗೂ ಕೈ ಮುಗಿದು ನಮಸ್ಕಾರ ಎಂದ. ಇಬ್ಬರೂ ಮತ್ತೆ ಬಸ್ಸು ಹತ್ತಿದರು.

''ಯಾಕೋ ಸಂಕೇತ ಮಾತನ್ನೇ ಆಡ್ತಿಲ್ಲ... ನಿನಗೆ ಡೌಟ್ಸ್‌ಗಳಿಲ್ಲವಾ ?''

''ನಾನು ನಿನ್ನ ಬಗ್ಗೇನೇ ಯೋಚಿಸ್ತಿದ್ದೆ. ಯೂ ಆರ್ ಗ್ರೇಟ್...''

''ಯಾರಾದ್ರೂ ಹೊಗಳಲಿ ಅಂತ, ನಾನು ಈ ಮದುವೆಗೆ ಒಪ್ಪಿಲ್ಲ. ಚಿಕ್ಕವಯಸ್ಸಿನಲ್ಲೇ ನಮ್ಮಿಬ್ಬರಿಗೆ ಮದುವೆ ಅಂತ ಹಿರಿಯರು ನಿಶ್ಚಯಿಸಿದ್ದರು. ಈಚೆಗೆ ವಿಮಲ ಹೈಸ್ಕೂಲಿನಲ್ಲಿ ಓದುತ್ತಿದ್ದಾಗ, ಮಹಡಿಯಿಂದ ಬಿದ್ದುದಕ್ಕೆ ಹೀಗಾಗಿದೆ. ಮೊದಮೊದಲು ಮಾವ ಅನೇಕ ಮಂದಿ ಡಾಕ್ಟರಿಗೆ ತೋರಿಸಿದ. ಯಾರೂ ನೋಡಿದರೂ ಆಪರೇಷನ್ನು ಮಾಡಿದರೆ ಸರಿ ಹೋಗಬಹುದು ಅಂತ ಅಂದ್ರಂತೆ. ಆಪರೇಷನ್ನು ಅಂತ ಅಂದರೆ ಹೆದರುತ್ತಾರೆ. ಅಲ್ಲದೇ ಅವರೂ ಶ್ರೀಮಂತರಲ್ಲ. ಇಲ್ಲಿ ಹೋಟೆಲ್ಲಿನ ಬಿಸಿನೆಸ್ ಇನ್ನೆಷ್ಟು ಚೆನ್ನಾಗಿ ನಡೆಯುತ್ತೆ ನೀನೇ ನೋಡಿದೆಯಲ್ಲ?''

''ಹೋಗಲಿ ಅಂತಂದ್ರೆ, ನಮ್ಮ ಮನೇಲೂ ಯಾವಾಗಲೂ ತಾಪತ್ರಯ ತಪ್ಪಿದ್ದಲ್ಲ. ಅಪ್ಪನ ಖಾಯಿಲೆಗೇ ಸಿಕ್ಕಾಬಟ್ಟೆ ಖರ್ಚಾಗಿತ್ತು. ಅಮ್ಮನಿಗೆ ಯಾವ ಪೆನ್ಶನ್ನೂ ಬರುಲ್ಲ. ನನ್ನ

ಸಂಪಾದನೆಯಲ್ಲಿ ಸಂಸಾರ ನಡೀತಿದೆ. ನನ್ನ ತಂಗಿ, ತಮ್ಮಂದಿರು ಇನ್ನೂ ಚಿಕ್ಕವರು. ಅವರ ಜವಾಬ್ದಾರಿಯೂ ನನ್ನ ಮೇಲಿದೆ.''

ಎಂದೂ ತನ್ನ ಮನೆಯ ಕಥೆಯನ್ನಾಗಲೀ, ವ್ಯಥೆಯನ್ನಾಗಲೀ ತನ್ನ ಸ್ನೇಹಿತರೊಡನೆ ಹೇಳಿಕೊಂಡವನಲ್ಲ. ಸಂಕೇತನಿಗೆ ತಿಳಿದ ಆ ಹರೀಶನೇ ಬೇರೆ. ಸದಾ ನಗು, ಹರಟೆ, ಚೆಲ್ಲುತನದ ಮಾತುಗಳು, ಜೋಕುಗಳನ್ನಾಡಿ ಎಲ್ಲರನ್ನು ಮುದಗೊಳಿಸುವ ಹರೀಶನಿಗೆ, ಇಷ್ಟು ಜವಾಬ್ದಾರಿ ಇದೆ ಎಂದು ಸಂಕೇತನಿಗೆ ತಿಳಿದಿರಲಿಲ್ಲ. ತಾನೂ ತನ್ನ ಮನೆಗೆ ಹಿರಿಯಮಗ, ತನಗೂ ತಂದೆ ಇಲ್ಲ, ಆದರೂ ತಾನು ತನ್ನ ಕರ್ತವ್ಯಗಳನ್ನು ಮರೆತು, ಕೇವಲ ತನ್ನ ಸುಖ ಸಂತೋಷಕ್ಕಾಗಿ ವಿದೇಶಕ್ಕೆ ಹಾರಿ ಬಿಟ್ಟಿದ್ದ. ಹರೀಶ ಮನಸ್ಸು ಮಾಡಿದ್ದರೆ, ತನ್ನಂತೇ ವಿದೇಶದಲ್ಲಿರಬಹುದಾಗಿತ್ತು. ಆದರೆ ಹರೀಶ ಹಾಗೆ ಮಾಡಿಲ್ಲ. ಅವನ ಜವಾಬ್ದಾರಿಯ ಅರಿವು ಅವನಿಗಿದೆ. ಅವನೆಷ್ಟು ಎತ್ತರದಲ್ಲಿದಾನೆ. ಅವನೆದುರಿಗೆ ನಾನು ಕುಬ್ಜ...'' ತನ್ನ ಅಳತೆಯನ್ನು ಕಂಡುಕೊಂಡಿದ್ದ.

''ನನ್ನ ಕತೆ ಕೇಳಿ ಮೂಡ್ ಆಫ್ ಆಯ್ತೇನೋ ? ಏನೋ ಹೇಳಬೇಕು ಅಂತ ಅನ್ನಿಸ್ತು ಇವತ್ತು ಹೇಳಿಬಿಟ್ಟೆ 'ಫರ್ಗೆಟಿಟ್'' ಎಂದ.

''ಇಲ್ಲ ಹರೀಶ ನಿನ್ನ ಬಗ್ಗೆ ನಾವೆಲ್ಲಾ ತಪ್ಪು ತಿಳಿದುಕೊಂಡಿದ್ದೆವು. ನೀನೇಕೆ ಈ ಮೊದಲೇ ಇದನ್ನು ನಮಗೆ ಹೇಳಲಿಲ್ಲ? ಇದೇನಾ ನಿನ್ನ ಫ್ರೆಂಡ್‌ಷಿಪ್ ?''

''ಏಯ್ ಬಿಡೋ... ನಿನಗೆ ಯಾವತ್ತು ಇಷ್ಟು ಪುರಸೊತ್ತು ಇತ್ತು ? ನನ್ನ ಕಥೆ ಕೇಳಿ ವ್ಯಥೆ ಪಡೋಕೆ ? ಈ ದಿನ ನಿನ್ನ ಚಿತ್ರಾಂಗದೆಯ ದೆಸೆಯಿಂದ, ನನ್ನ ಚಿಂತಾಮಣಿಯ ಪ್ರೇಮಕತೆ ಹೊರಬಂತು ಅಷ್ಟೇ. ಇಲ್ಲದೇ ಇದ್ದರೆ, ನಾನು ನನ್ನ ಮದುವೆಯ ದಿನದವರೆಗೂ ಯಾವ ವಿಷಯವನ್ನೂ ಯಾರಿಗೂ ಹೇಳುತ್ತಿರಲಿಲ್ಲ.''

''ಚಿತ್ರಾಂಗದೆ ಅನ್ನೋ ಹೆಸರು ಯಾವುದೋ ಪುರಾಣ ಕಾಲದ್ದು. ಅದಕ್ಕಿಂತ ಸುಮತಿ ಅನ್ನೋ ಹೆಸರೇ ಚೆನ್ನಾಗಿದೆ... ಇನ್ನು ಮುಂದೆ ಚಿತ್ರಾಂಗದೆ ಅಂತ ಕರೆಯಬೇಡ.''

''ಸುಮತಿ ಅನ್ನೋ ಹೆಸರು ಷಾರ್ಟ್ ಆಗಿ ಚೆನ್ನಾಗಿದೆ. ಚುಮ್ಮೀ ಅನ್ನೋ ಹೆಸರು ಇನ್ನೂ ಮುದ್ದಾಗಿದೆ. ಸ್ವೀಟ್ ಆಗಿದೆ. ಅಲ್ವಾ ?'' ಸ್ನೇಹಿತನನ್ನು ರೇಗಿಸಿದ.

''ಏಯ್ ಗುದ್ದು ಬಿಡ್ತೀನಿ ನೋಡು... ಚುಮ್ಮೀ ಅಂತ ಕರೆಯೋ ಅಧಿಕಾರ ನನಗೆ ಮಾತ್ರ ಇರೋದು'' ಇದ್ದಕ್ಕಿದ್ದಂತೆ ಸಂಕೇತ ಮೌನಿಯಾದಾಗ, ಹರೀಶ ಅರಿತವನಂತೆ ಅವನ ಭುಜದ ಮೇಲೆ ಕೈಯನ್ನಿಟ್ಟ.

ಅವರಿಬ್ಬರೂ ಮನೆಯಂಗಳವನ್ನು ಪ್ರವೇಶಿಸುತ್ತಿದ್ದಂತೆಯೇ ಹರೀಶನ ತಂಗಿ ಓಡಿ ಬಂದು ಅರುಹಿದಳು. ಜಾನಕಿ ಆಂಟಿ ಫೋನು ಮಾಡಿದ್ದರು... ಅರ್ಜೆಂಟಂತೆ...'' ಏನಾಯಿತೋ

ಅಂತ ಇಬ್ಬರಿಗೂ ಗಾಬರಿಯಾಗಿತ್ತು. ತಕ್ಷಣವೇ ಇನ್ನೊಂದು ಆಟೋ ಹಿಡಿದು ಸಂಕೇತನ ಮನೆಯ ದಾರಿ ಹಿಡಿದರು. ಜಾನಕಿಯೇ ಇಬ್ಬರನ್ನು ಎದುರುಗೊಂಡಳು. ಸಂಕೇತ ತಲೆ ತಗ್ಗಿಸಿದ.

''ಸುಮತಿ ಬಂದಿದಾಳೆ...'' ಕೆಳದನಿಯಲ್ಲಿ ನುಡಿದಳು.

''ಹೌದಾ ? ಎಲ್ಲಿ'' ಎನ್ನುತ್ತಾ ಆತುರಾತುರವಾಗಿ ಒಳಗೆ ಬಂದರು.

''ಮೇಲೆ ಮಹಡಿ ಮೇಲಿದ್ದಾಳೆ... ಅವಳ ತಂದೆಯೂ ಬಂದಿದಾರೆ...'' ಸಂಕೇತನ ಮುಖ ಸಂತಸದಿಂದ ಅರಳಿದುದನ್ನು ಜಾನಕಿ ಗಮನಿಸಿದಳು.

''ಅವಳು ಜಗ್ಗೂನ ಮದುವೆಯಾಗ್ತಾಳಂತೆ'' ಸಂಕೇತನ ಹೃದಯ ಬಾಯಿಗೆ ಬಂದಂತಾಗಿತ್ತು...

''ಅವಳ ತಲೆ ಸರಿಯಾಗಿದೆ ತಾನೇ''... ಕಣ್ಣು ಕಣ್ಣು ಬಿಟ್ಟ.

''ಏನೋ ನಂಗೊತ್ತಿಲ್ಲ. ಅದೇ ಹಠ ಹಿಡಿದು, ತಂದೆಯೊಂದಿಗೆ ಬಂದಿದಾಳೆ. ನೀವುಗಳಾದ್ರೂ ಅವಳಿಗೆ ತಿಳುವಳಿಕೆ ಹೇಳಿ...'' ಜಾನಕಿ ಅತ್ತಳು.

''ಸುಮತಿ ಎಲ್ಲಿ? ಅವಳ ತಂದೇನೂ ಅಲ್ಲಿದಾರಾ ?''

''ಇಲ್ಲ. ಆತ ಎಲ್ಲೋ ಹೊರಗೆ ಹೋಗಿದಾರೆ. ಇನ್ನು ಇವಳ ಜವಾಬ್ದಾರಿ ನಿಮ್ಮದು. ಇವಳಿಗೆ ಅದೇನು ತಿಳುವಳಿಕೆ ಹೇಳ್ತೀರೋ ಹೇಳಿ, ಅಂತ ಹೇಳಿ ಹೊರಟು ಹೋದರು.''

''ಮಮ್ಮೀ... ನಾನು ಸುಮತಿಯ ಹತ್ತಿರ ಮಾತಾಡ್ತೀನಿ, ನೀನೂ ಬಾ'' ಎಂದ ಹರೀಶನ ಕಡೆ ತಿರುಗಿ.

''ಬೇಡ ನೀನೊಬ್ನೇ ಹೋಗು'' ಎನ್ನುವಂತೆ ಸಂಜ್ಞೆ ಮಾಡಿ, ತಾನು ಆಂಟಿಯೊಡನೆ ಮಾತನಾಡುತ್ತಾ ಕುಳಿತ. ತನ್ನ ಉತ್ಸಾಹವನ್ನು ಉದ್ವೇಗಗಳನ್ನು ಕಡಿಮೆ ಮಾಡಿಕೊಳ್ಳುವ ವನಂತೆ ಸಂಕೇತ ನಿಧಾನವಾಗಿ ಮೆಟ್ಟಿಲುಗಳನ್ನು ಹತ್ತಿದ.

ಮಂಚದ ಮೇಲೆ ಕುಳಿತಿದ್ದ ಸುಮತಿ, ಸಂಕೇತನನ್ನು ಕಂಡೊಡನೆ ಎದ್ದು ನಿಂತಳು. ಖಾಯಿಲೆಯಿಂದ ಎದ್ದವಳಂತೆ ಕಂಡಳು. ಅವನಿಗೆ ದುಃಖವಾಗಿತ್ತು.

''ಯಾಕೆ ಹೀಗಾಗಿದೀಯ ಸುಮತೀ... ಇದೆಲ್ಲಾ ಏನು ನಡೀತು ಅಂತ ನನಗೂ ಹೇಳಬಾರದಾಗಿತ್ತಾ ನೀನು ? ನೋಡು ಎಷ್ಟು ಕಂಗೆಟ್ಟು ಹೋಗಿದೀಯ... ಯಾರ ಕಾಕದೃಷ್ಟಿ ನಿನ್ನ ಮೇಲೆ ಬಿತ್ತೋ... ಸಧ್ಯ ಹಿಂತಿರುಗಿ ಬಂದೆಯಲ್ಲಾ ನೋಡ್ತಿರು ಒಂದು ವಾರದಲ್ಲಿ ನಿನ್ನನ್ನು ಛೇಂಜ್ ಮಾಡಿ ಬಿಡ್ತೀನಿ.'' ಅವಳ ಬಳಿಗೆ ಬಂದ. ಅವಳು ಹಿಂದೆ ಸರಿದಳು.

''ಇನ್ನು ಯಾರೂ ಛೇಂಜ್ ಮಾಡೋಕೆ ಆಗುಲ್ಲ...''

''ಯಾಕೆ ಆಗುಲ್ಲ, ಛಾಲೆಂಜ್... ನೆಕ್ಸ್ಟ್‌ವೀಕ್‌ನಲ್ಲಿ ಮದುವೆ ಆಗೋಣ. ಒಂದೇ ವಾರದಲ್ಲಿ ನಿನ್ನನ್ನು ಇಲ್ಲಿಂದ ಕರೆದುಕೊಂಡು ಹೋಗ್ತೀನಿ. ಪಾಸ್‌ಪೋರ್ಟ್ ರೆಡಿಯಾಗಿದೆ ತಾನೇ...?''

''ನನಗೆ ಯಾವ ಪಾಸ್‌ಪೋರ್ಟು ಬೇಡ. ನಾನು ನಿಮ್ಮ ಜೊತೆ ಎಲ್ಲಿಗೂ ಬರುಲ್ಲ.''

''ಮತ್ತೆ ಹಾಗಾದ್ರೆ ಈಗ ಇಲ್ಲಿಗೆ ಯಾಕೆ ಬಂದೆ ? ಮತ್ತೆ ನನಗೆ ಆಸೆ ತೋರಿಸೋಕೆ ?''

''ನಿಮಗೆ ಆಸೆ ತೋರಿಸೋಕೆ ನಾನು ಇಲ್ಲಿಗೆ ಬರಲಿಲ್ಲ, ನನ್ನ ಮುಖ ಮುಚ್ಚಿಕೊಳ್ಳೋಕೆ ಬಂದಿದೀನಿ.'' ಕಣ್ಣುಗಳಿಂದ ನೀರು ಹರಿಯಿತು.

''ಅಂದ್ರೆ... ನನಗೆ ಅರ್ಥವಾಗಲಿಲ್ಲ.''

''ನಾನು... ನಾನು ಪ್ರೆಗ್ನೆಂಟ್ ಆಗಿದೀನಿ...''

''ಆಂ ಏನಂದೆ ? ಇದು ಆಂಟಿಸಿಪೇಟೆಡ್... ನಾನೂ ನೀನೂ ನವದಂಪತಿಗಳಂತೆ ಜಾಲಿಯಾಗಿದ್ದೆವು ಅಲ್ವಾ ? ನೋ ಪ್ರಾಬ್ಲಂ...'' ಸಂಭ್ರಮವನ್ನು ಪ್ರಕಟಿಸಿದ.

''ನನಗೆ ಪ್ರಾಬ್ಲಂ ಸಂಕೇತ್... ಜಗ್ಗೂ ನನ್ನನ್ನು ಕೆಡಿಸಿದಾನೆ...''

''ಓ.ಕೆ. ಅದೊಂದು ಟ್ರಾಜಿಡಿ, ಅದನ್ನು ಮರೆತು ಬಿಡು... ನಿನಗೆ ಯಾವುದೂ ನೆನಪಿಗೆ ಬರದಂತೆ ನಾನು ನಿನ್ನನ್ನು ನೋಡಿಕೊಳ್ತೀನಿ.''

''ಅದು ಅಷ್ಟು ಸುಲಭವಲ್ಲ ಸಂಕೇತ್... ಪ್ಲೀಸ್ ನನ್ನ ಪಾಡಿಗೆ ನನ್ನನ್ನು ಬಿಟ್ಟುಬಿಡಿ.'' ಸುಮತಿ ಮುಖವನ್ನು ಕೈಗಳಿಂದ ಮುಚ್ಚಿಕೊಂಡಳು. ಸಂಕೇತ ಅವಳ ಕೈಗಳನ್ನು ತೆಗೆದ. ''ಇಲ್ಲಿ ನೋಡು, ನನ್ನನ್ನ ನೀನು ಮರೆಯುವುದು, ಅಥವಾ ನಾನು ನಿನ್ನನ್ನು ಮರೆಯುವುದು ಈ ಜನ್ಮದಲ್ಲಿ ಸುಲಭವಲ್ಲ.''

''ಇಲ್ಲ ಸಂಕೇತ್. ನಾವು ಮದುವೆಯಾಗುವುದು ಬೇಡ. ನಾವು ಹೀಗೇ ಸ್ನೇಹಿತರಾಗಿಯೇ ಇರೋಣ. ನನಗೆ ಈಗ ನಿಮ್ಮ ಮನೆಯಲ್ಲಿ ಆಶ್ರಯಬೇಕು. ಒಬ್ಬ ಅವಿವಾಹಿತೆ ತಾಯಿದಾದರೆ, ಸಮಾಜ ತುಚ್ಛವಾಗಿ ನೋಡುತ್ತದೆ... ಹುಟ್ಟುವ ಮಗುವಿಗೆ ಒಬ್ಬ ತಂದೆಯ ಹೆಸರು ಬೇಕಾಗುತ್ತದೆ... ಅದಕ್ಕೇ...''

''ಅದಕ್ಕೇ ನೀನು ಜಗ್ಗೂನ ಮದುವೆಯಾಗ್ತೀಯ ? ಆ ಅಯೋಗ್ಯನಿಗೆ ತಾನು ಏನು ಮಾಡಿದೆ ಅಂತ ಕೂಡಾ ಜ್ಞಾನವಿಲ್ಲ, ಅವನಿಗೆ ತಂದೆ ಎನ್ನೋ ಪದದ ಅರ್ಥ ಗೊತ್ತಾ ? ನಿನ್ನ ಲೈಫ್ ಅನರ್ಥವಾಗಿ ಹೋಗುತ್ತೆ... ನನ್ನ ಪ್ರೀತಿಗೆ ಅವಮಾನ ಮಾಡ್ತಾ ಇದೀಯ ನೀನು'' ತಲೆ ಕೊಡವಿಕೊಂಡ. ಕಣ್ಣುಗಳಲ್ಲಿ ಅಸಹನೆ ತುಳುಕಿತ್ತು.

''ಪ್ಲೀಸ್ ನನ್ನನ್ನು ಕ್ಷಮಿಸಿಬಿಡಿ...'' ಕೈ ಮುಗಿದಳು.

''ಕ್ಷಮೆ... ಹುಂ. ನನ್ನ ಲೈಫನ್ನೇ ಕಿತ್ತುಕೊಂಡು ಕ್ಷಮೆ ಕೇಳ್ತೀಯಲ್ಲ.'' ತುಟಿಸೊಟ್ಟ ಮಾಡಿದ.

''ನಿಮ್ಮ ಲೈಫನ್ನ ಹಾಳು ಮಾಡಲು ನನಗಿಷ್ಟವಿಲ್ಲ.. ಸಧ್ಯಕ್ಕೆ ನನಗೆ ಇಲ್ಲಿ ನಿಮ್ಮ ಮನೇಲಿರುಕ್ಕೆ ಅವಕಾಶ ಮಾಡಿಕೊಡಿ... ಡೆಲಿವರಿ ಆಗೋವರೆಗೆ ಮಾತ್ರ ನಿಮ್ಮ ತಾಯಿಯನ್ನು ಒಪ್ಪಿಸಿ... ಆಮೇಲೆ ನಾನು ಹೊರಟು ಹೋಗ್ತೀನಿ''

''ನಾನು ಮಮ್ಮಿಯನ್ನು ಒಪ್ಪಿಸ್ತೀನಿ. ಇದುವರೆಗೂ ನಾವಿಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸುತ್ತಿದೇವೆ ಅಂತ ಸಹ ತಿಳಿಯದು ಅವಳಿಗೆ. ಅವಳು ಖಂಡಿತಾ ನಮ್ಮಿಬ್ಬರ ಮದುವೆಗೆ ಒಪ್ಪುತ್ತಾಳೆ...''

''ಇಲ್ಲ ನಿಮ್ಮ ಮಮ್ಮಿ ನಮ್ಮಿಬ್ಬರ ಮದುವೆಗೆ ಖಂಡಿತಾ ಒಪ್ಪಲ್ಲ.''

''ನೀನು ಪ್ರೆಗ್ನೆಂಟ್ ಅಂತ ಗೊತ್ತಾ ಅವಳಿಗೆ ?''

''ಹುಂ. ಗೊತ್ತು... ಅವರು ಅಬಾರ್ಷನ್ ಮಾಡಿಸ್ಕೋ ಅಂತಂದ್ರು...''

''ಅವಳಿಗೆ ಹೀಗೆ ಹೇಳೋಕೆ ನಾಚಿಕೆಯಾಗಲಿಲ್ವಾ !'' ಒರಟಾಗಿ ಕೇಳಿದ.

''ಅವರು, ಈ ಮಗು ಜಗ್ಗೂದು ಅಂತ ತಿಳಿದುಕೊಂಡಿದಾರೆ.'' ಸಂಕೇತನ ಮುಖದ ಬಣ್ಣ ಬದಲಾಯಿಸಿತು. ಎರಡು ಹೆಜ್ಜೆ ಹಿಂದೆ ಸರಿದ.

''ನೋಡಿದ್ರಾ ನಿಮಗೂ ಈ ನ್ಯೂಸ್, ಷಾಕ್‌ದು... ಆದರೆ ನನಗೆ ಗೊತ್ತು ಈ ಮಗು ಜಗ್ಗೂದಲ್ಲ ಅಂತ... ನಮ್ಮದೇ ಅಂತ.

''ಮತ್ತಿನ್ನೇನು ಪ್ರಾಬ್ಲಂ... ಬೇಕಾದರೆ ಡಿಎನ್‌ಎ ಟೆಸ್ಟ್ ಮಾಡಿಸಿ, ನಮ್ಮದೇ ಮಗು ಅಂತ ಪ್ರೂವ್ ಮಾಡೋಣ.''

''ಆಗ ಮದುವೆಗೆ ಮುಂಚೆಯೇ ನಮ್ಮಿಬ್ಬರಿಗೆ ಸಂಬಂಧವಿತ್ತು ಅಂತ ಅವರಿಗೆ ತಿಳಿಯುಲ್ವಾ ? ನನ್ನ ಮೇಲೆ ಒಳ್ಳೆಯ ಅಭಿಪ್ರಾಯ ಉಳಿಯುತ್ತಾ ? ನೀವೇ ಹೇಳಿ''

''ಅದಕ್ಕೆಲ್ಲ ಯಾರೂ ಕೇರ್ ಮಾಡ್ತಾರೆ ? ನೀನು ನನ್ನವಳು. ಈ ಮಗು ನಮ್ಮ ಪ್ರೀತಿಯ ಫಲ... ಯಾರು ಏನಾದ್ರೂ ಅಂದುಕೊಳ್ಳಲಿ, ನಮ್ಮಿಬ್ಬರ ಮದುವೆ ನಡೆದೇ ನಡೆಯುತ್ತೆ. ಇದೇ ಫೈನಲ್'' ಎಂದು ಹೇಳಿ ಅವಳ ಉತ್ತರಕ್ಕೆ ಕಾಯದೇ ಕೆಳಗಿಳಿದು ಬಂದ. ಹರೀಶ, ಜಾನಕಿ ಅವನನ್ನೇ ನೋಡಿದರು.

''ಮಮ್ಮೀ ನಾನು ಸುಮತಿಯನ್ನು ಮದುವೆಯಾಗ್ತೀನಿ.....'' ಜಾನಕಿ ದಂಗಾದಳು.

''ಸುಮತೀನ ? ಅವಳೊಂದಿಗೆ ಏನು ನಡೆದಿದೆ ಅಂತ ನಿನಗೆ ಗೊತ್ತಲ್ವಾ ? ಅವಳೀಗ

ಪ್ರೆಗ್ನೆಂಟ್... ಅವಳನ್ನು ಮದುವೆಯಾದರೆ, ನಿನ್ನ ಲೈಫ್‌ನಲ್ಲಿ ಸುಖವೇ ಇರುವುದಿಲ್ಲ... ಅಬಾರ್ಷನ್ ಮಾಡಿಸ್ಕೋ ಅಂತ ಹೇಳಬೇಕಾಗಿತ್ತು ನೀನು'' ಒಂದೇ ಉಸಿರಿಗೆ ನುಡಿದಳು.

''ಆ ಮಗು, ನಿನ್ನ ಮೊಮ್ಮಗು. ಆ ಮಗು ಹುಟ್ಟುವ ಮೊದಲೇ ಕೊಂದು ಹಾಕುಕ್ಕೆ ನಿನಗೆ ಮನಸ್ಸಾದರೂ ಬರುತ್ತಾ?''

''ಏನು ಮೊಮ್ಮಗುವೋ... ಮಗನೇ ಇಷ್ಟು ಚೆನ್ನ... ಇನ್ನು ಅವನ ಮಗು, ಇನ್ನೂ ಎಷ್ಟು ಚೆನ್ನಾಗಿರುತ್ತೋ... ನನ್ನ ಹಾಗೆ ಸುಮತಿಯೂ ಲೈಫ್ ಲಾಂಗ್ ಕಷ್ಟ ಪಡುತ್ತಾಳೆ... ಅವಳಿಗೆ ತಿಳುವಳಿಕೆ ಹೇಳೋದು ಬಿಟ್ಟು ಅವಳನ್ನು ಮದುವೆಯಾಗ್ತೀನಿ ಅಂತೀಯಲ್ಲ, ನಿನ್ನಂತಹ ಮೂರ್ಖ ಇನ್ನೊಬ್ಬನಿಲ್ಲ.'' ಮಗನನ್ನು ಗದರಿದಳು.

''ನನ್ನನ್ನು ಏನು ಬೇಕಾದರೂ ಅನ್ನು... ನಾನು ಸುಮತಿಯನ್ನು ಪ್ರೀತಿಸ್ತಿದೀನಿ. ಅವಳನ್ನೇ ಮದುವೆಯಾಗ್ತೀನಿ.''

''ಅದೇನು ಇದ್ದಕ್ಕಿದ್ದ ಹಾಗೆ, ಅವಳ ಮೇಲೆ ಪ್ರೀತಿ ಹುಟ್ಟಿ ಬಿಡ್ತಾ ?''

''ಇಲ್ಲ... ನಾನು ಅವಳನ್ನು ಕಂಡ ಮೊದಲನೇ ದಿನದಿಂದ ಪ್ರೀತಿಸ್ತಿದೀನಿ. ಬೇಕಾದರೆ ಹರೀಶನ್ನೇ ಕೇಳು...''

''ನೀನು ಸುಮತಿಯನ್ನು ಪ್ರೀತಿಸ್ತಿದೀಯ ? ಈ ಮುಂಚೇನೇ ಯಾಕೆ ಹೇಳಲಿಲ್ಲ. ಹೇಳಿದ್ದಿದ್ರೆ ಆಗಲೇ ಮದುವೆ ಮಾಡಿ, ನಿನ್ನ ಜೊತೆ ಅಮೆರಿಕಾಕ್ಕೆ ಕಳಿಸಿಬಿಡ್ತಿದ್ದೆ. ಆಗಲೇ ಯಾಕೆ ಹೇಳಲಿಲ್ಲ?'' ಜಾನಕಿ ಗಟ್ಟಿಸಿ ಕೇಳಿದಳು. ಸಂಕೇತ ಹರೀಶನ ಕಡೆ ನೋಡಿದ.

''ನನ್ನ ವೀಸಾ ಎಲ್ಲಾ ಸರಿ ಮಾಡಿಕೊಂಡು, ಸ್ಪಾನ್ಸರ್ ಮಾಡುಕ್ಕೆ ಕಂಪೆನಿಯವರ ಸಹಕಾರಬೇಕಾಗಿತ್ತು. ಅದೆಲ್ಲ ಸಿದ್ಧವಾದ ಮೇಲೆ ಹೇಳೋಣ ಅಂತಿದ್ದೆ...''

''ಒಂದ್ಮಾತು ಮುಂಚೇನೇ ಹೇಳದೇ ಎಂತಹ ಕೆಲಸ ಮಾಡಿದೆ ನೀನು ? ಹರೀಶ ನೀನಾದ್ರೂ ಹೇಳಬಹುದಾಗಿತ್ತಲ್ಲ''ಜಾನಕಿ ರೋಧಿಸಿದಳು.

''ಈಗ್ಯಾಕೆ ಅಳ್ತೀಯ ...? ಏನೂ ಆಗಿಲ್ಲ. ಸುಮತಿ ಈಗಲೂ ನನ್ನವಳೇ ನೀನು ಬೇಡ ಅಂದರೂ ನಾನು ಅವಳ ಕೈ ಬಿಡುವವನಲ್ಲ.'' ಜಾನಕಿ ಅಭಿಮಾನದಿಂದ ಸಂಕೇತನನ್ನೇ ನೋಡಿದಳು.

''ನೀನ್ಯಾವಾಗ ಇಷ್ಟು ಬೆಳೆದೆಯೋ ನನಗೆ ಗೊತ್ತಾಗ್ಲೇ ಇಲ್ಲ'' ಅನುಮಾನದಿಂದ ನುಡಿದಳು.

''ಇದೆಲ್ಲ ಸುಮತಿಯದೇ ಟ್ರೈನಿಂಗ್...'' ಹರೀಶ ಸ್ನೇಹಿತನ ಬೆನ್ನು ತಟ್ಟಿದ.

''ಸುಮತಿ ಒಳ್ಳೆಯ ಹುಡುಗಿ ಅಂತ ನನಗೆ ಚೆನ್ನಾಗಿ ಗೊತ್ತು. ಆದರೆ... ಜಗ್ಗು ಅವಳನ್ನು ಕೆಡಿಸಿಬಿಟ್ಟಿದಾನಲ್ಲೋ... ಅವಳೀಗ ಬಸಿರಿಯಾಗಿದ್ಧಾಳೆ... ಮೊದಲು ಅಬಾರ್ಷನ್ ಮಾಡಿಸಿ ಬಿಡು. ಆಮೇಲೆ ಮದುವೆ ಮಾಡಿಕೊಳ್ಳುವಂತೆ...''

''ಇಲ್ಲ ಮಮ್ಮೀ ನಾನಿದಕ್ಕೆ ಒಪ್ಪುಲ್ಲ. ನನಗೆ ಆ ಅಧಿಕಾರವಿಲ್ಲ. ಸುಮತಿಗೂ ಇಷ್ಟವಿಲ್ಲ. ಸುಮತಿ ಈ ಮಗುವಿಗೆ ಜನ್ಮಕೊಡುತ್ತಾಳೆ. ಇದೇ ಫೈನಲ್.''

''ಏನಾದ್ರೂ ಮಾಡ್ಕೋ... ನೀನು ಎಂದೂ ನನ್ನ ಮಾತುಗಳನ್ನು ಕೇಳಿದವನಲ್ಲ.'' ಜಾನಕಿ ಕೋಪದಿಂದ ನುಡಿದಾಗ, ಹರೀಶ ನೆರವಿಗೆ ಬಂದ.

''ಸಂಕೇತ ಹೇಳೋದು ಸರಿ ಆಂಟೀ... ಸುಮತಿಯ ಇಷ್ಟಕ್ಕೆ ಬೆಲೆ ಕೊಡಬೇಕಾಗುತ್ತದೆ. ಇಲ್ಲದಿದ್ದರೆ ಅವರ ಹೆಲ್ತ್ ಕೆಡುತ್ತದೆ. ಅಲ್ಲದೇ ಸಂಕೇತ ಯಾವ ರೀತಿಯಿಂದಲೂ ಬಲವಂತ ಮಾಡುವಂತಿಲ್ಲ. ಅದು ಅಪರಾಧವಾಗುತ್ತದೆ.''

''ಎಷ್ಟಾಗಲೀ ನೀನು ಸಂಕೇತನ ಸ್ನೇಹಿತ. ಏನಾದ್ರೂ ಮಾಡ್ಕೊಳ್ಳಿ'' ಜಾನಕಿ ಒರಟಾಗಿ ನುಡಿದರೂ ಜಾನಕಿಯ ಒಪ್ಪಿಗೆ ಸಿಕ್ಕಿತ್ತು... ಅಷ್ಟರಲ್ಲಿ ಸುಮತಿಯ ತಂದೆಯೂ ಬಂದಿದ್ದರು. ಅವರು ತಾವೇ ಅಪರಾಧ ಮಾಡಿದವರಂತೆ ಪೆಚ್ಚಾಗಿದ್ದರು. ಹರೀಶನೇ ಆತನೊಡನೆ ಮಾತನಾಡಿದ. ಆತನಿಗೆ ಸಮಾಧಾನವಾಗಿತ್ತು. ಸಂಕೇತನ ಕೈಗಳನ್ನು ಹಿಡಿದರು.

''ನೀವು ನನ್ನ ಭಾಗದ ದೇವರು. ನಮ್ಮ ಮರ್ಯಾದೆಯನ್ನು ಉಳಿಸಿದಿರಿ.''

''ಇದೆಲ್ಲ ದೊಡ್ಡ ಮಾತಾಯಿತು. ಇದರಲ್ಲಿ ನನ್ನ ಸೆಲ್ಫಿಷ್‌ನೆಸ್ ಇದೆ. ನಾನು ಸುಮತಿಯನ್ನು ಪ್ರೀತಿಸ್ತಿದೀನಿ.''

''ನನಗೆ ಆ ದಿನವೇ ಅನ್ನಿಸಿತ್ತು. ಆದರೆ ನೀವು ಅವಳಿಗೆ ಹೊಸ ಬಾಳನ್ನು ಕೊಡ್ತಿದೀರಿ. ಜೀವಮಾನವೆಲ್ಲಾ ನಾನು ನಿಮ್ಮ ಋಣಿಯಾಗಿರುತ್ತೀನಿ... ಮದುವೆ ಯಾವಾಗ ಇಟ್ಟುಕೊಳ್ಳೋಣ ? ಆತ ಆತುರವನ್ನು ವ್ಯಕ್ತಪಡಿಸಿದರು.

''ಯಾವಾಗ ಆದರೂ ಪರವಾಗಿಲ್ಲ. ಆದರೆ ಆದಷ್ಟುಬೇಗ.''

''ನನ್ನ ಹಿರಿಯ ಮಗಳ ಮದುವೆ ಆದ ಮೇಲೆ, ಸುಮತಿಯ ಮದುವೆ ಮಾಡುವ್ದುದೆಂದು ಕೊಂಡಿದ್ದೆವು. ಆದರೆ ಈಗ ಸುಮತಿಯ ಮದುವೆಯನ್ನು ಅರ್ಜೆಂಟಾಗಿ ಮಾಡಬೇಕಾಗಿದೆ... ಅದೇ ಒಂದು ಕೊರತೆ.'' ತನ್ನ ಮನಸ್ಸಿಗೆ ಅನ್ನಿಸಿದ್ದನ್ನು ನುಡಿದಿದ್ದರು. ಹರೀಶ ಮತ್ತೆ ಮುಂದೆ ಬಂದ.

''ನನ್ನ ಸೋದರ ಮಾವನ ಮಗ ಒಬ್ಬ ಮದುವೆಗಿದಾನೆ. ನೀವು ವಿಚಾರಿಸಬಹುದು'' ಅಂತ ಹೇಳಿ ಸದಾನಂದನ ವಿಳಾಸವನ್ನು ಕೊಟ್ಟ, ಹರೀಶ ಅದೇ ದಿನ ಮಾವನಿಗೆ, ಹೇಮಳ

ವಿವರಗಳನ್ನು ಹೇಳಿ, ಭದ್ರಾವತಿಗೆ ಹೋಗಿ ಹೇಮಳನ್ನು ನೋಡಿ ಬರಬೇಕೆಂದು ಹೇಳಿದ. ಅದೇ ದಿನ ಸುಮತಿಯ ತಂದೆ ಭದ್ರಾವತಿಗೆ ವಾಪಸ್ಸು ಹೊರಟರು. ಸುಮತಿಯೂ ಹೊರಟು ನಿಂತಾಗ ಸಂಕೇತ ಅವಳಿಗೆ ಉಳಿದುಕೊಳ್ಳುವಂತೆ ಕೇಳಿಕೊಂಡ. ಆದರೆ ಅವಳು ಇರಲು ಒಪ್ಪಲಿಲ್ಲ.

"ನಾನೀಗ ಊರಿಗೆ ಹೋಗುವುದೇ ವಾಸಿ."

"ಯಾಕೆ ನನ್ನ ಮೇಲೆ ನಂಬಿಕೆ ಇಲ್ವಾ ?"

"ನಂಬಿಕೆ ಇದೆ. ತುಂಬಾ ನಂಬಿಕೆ ಇದೆ. ಆದರೆ ನನ್ನ ಮನಸ್ಸೇ ಸರಿಯಾಗಿಲ್ಲ. ಆಂಟಿಗೆ ಈಗ ಎಲ್ಲಾ ಗೊತ್ತಾಗಿದೆ. ಅವರ ಎದುರಿಗೆ ಹೇಗೆ ಓಡಾಡಲಿ ?

"ಸರಿ. ನಿನ್ನಿಷ್ಟ ನಾಳೆ ಅಥವಾ ನಾಡಿದ್ದು ನಾನು ಹರೀಶ ನಿಮ್ಮ ಊರಿಗೆ ಬಂದರೂ ಬರಬಹುದು. ಹರೀಶನ ಕಸಿನ್ ಒಬ್ಬ ನಿನ್ನ ಅಕ್ಕನನ್ನು ನೋಡಲು ಬರಬಹದು. ಒಬ್ಬರನ್ನೊಬ್ಬರು ಒಪ್ಪಿಕೊಂಡರೆ, ಎರಡೂ ಮದುವೆಯೂ ಒಟ್ಟಿಗೆ ನೆರವೇರುತ್ತದೆ..." ಸುಮತಿ ಸಂತಸವನ್ನೇನೂ ವ್ಯಕ್ತಪಡಿಸಲಿಲ್ಲ.

"ನೀನು ನನಗೆ, ಒಂದು ಪ್ರಾಮಿಸ್ ಮಾಡಬೇಕು... ನಮ್ಮಿಬ್ಬರ ಮದುವೆಯಾಗೋ ವರೆಗೂ, ನಿನ್ನ ಹೆಲ್ತ್‌ನ್ನ ಚೆನ್ನಾಗಿ ನೋಡ್ಕೋಬೇಕು. ನಮ್ಮ ಬೇಬಿ ಹೆಲ್ತಿಯಾಗಿರಬೇಕು... ಹೊತ್ತು ಹೊತ್ತಿಗೆ ಊಟ ತಿಂಡಿ ತಿನ್ನಬೇಕು. ಚೆನ್ನಾಗಿ ನಿದ್ದೆ ಮಾಡಬೇಕು. ಒಳ್ಳೆಯ ಯೋಚನೆಗಳನ್ನು ಮಾಡಬೇಕು. ಡಾಕ್ಟರ ಬಳಿಗೆ ರೆಗ್ಯುಲರ್ ಆಗಿ ಹೋಗಬೇಕು" ಅವನ ಮಾತುಗಳಿಂದ ಸುಮತಿಯ ವ್ಯಥೆ ಅಧಿಕವಾಗಿತ್ತು.

"ನನ್ನನ್ನ ಯಾಕೆ ಇಷ್ಟು ಪ್ರೀತಿಸ್ತೀರಿ ಸಂಕೇತ್... ನಾನು ಅದಕ್ಕೆ ಅರ್ಹಳಲ್ಲ."

"ನೀನು ಹೀಗೆಲ್ಲಾ ಮಾತಾಡಿದರೆ, ನನಗೆ ಕೋಪ ಬರುತ್ತೆ." ಎನ್ನುತ್ತಾ ಅವಳನ್ನು ಹಿಡಿದುಕೊಂಡ. ಅವಳ ಮೈ ಕೊರಡಿನಂತೆ ನೆಟ್ಟಗಾಯಿತು. ಸಂಕೇತ ನಿಧಾನವಾಗಿ ಹಿಡಿತವನ್ನು ಸಡಿಲಗೊಳಿಸಿದ. ಸುಮತಿ ತಲೆತಗ್ಗಿಸಿದಳು.

ಸುಮತಿಯ ತಂದೆ ಜಾನಕಿಗೆ ಕೈ ಮುಗಿದು, ತಮ್ಮ ಕೃತಜ್ಞತೆಯನ್ನು ತಿಳಿಸಿದರು. "ಇಂಥಾ ಮಗನನ್ನು ಪಡೆದ ನೀವು ಪುಣ್ಯವಂತೆ. ಈ ದಿನ ನಿಮ್ಮಿಂದ ನಮ್ಮ ಮನೆಯ ಮರ್ಯಾದೆ ಉಳಿಯಿತು. ಇಲ್ಲದಿದ್ದರೆ ನೆಂಟರಿಷ್ಟರಲ್ಲಿ ತಲೆ ಎತ್ತಿ ತಿರುಗಾಡುವುದ್ಕಕೇ ಕಷ್ಟವಾಗುತ್ತಿತ್ತು..."

"ಅದೆಲ್ಲ ದೊಡ್ಡ ಮಾತಾಯಿತು. ನಾನು ಸುಮತಿಯನ್ನು ಮಗಳಂತೆಯೇ ನೋಡಿಕೊಂಡೆ. ಆದರೆ ನಡೆಯಬಾರದ್ದು ನಡೆದುಹೋಯಿತು. ಅದನ್ನು ಸರಿಪಡಿಸುವುದು ನಮ್ಮ ಧರ್ಮ. ನಮ್ಮ ಸಂಕೇತನದು ದೊಡ್ಡ ಹೃದಯ. ನಿಮ್ಮ ಮಗಳನ್ನು ಚೆನ್ನಾಗಿಟ್ಟುಕೊಳ್ತಾನೆ. ನಿಮಗೆ ಯಾವ ಆತಂಕವೂ ಬೇಡ" ತನ್ನ ದೊಡ್ಡತನವನ್ನು ಕಾಪಾಡಿಕೊಂಡಳು.

ಸುಮತಿಯನ್ನು ನಗುನಗುತ್ತಾ ಬೀಳ್ಕೊಟ್ಟಳು. ''ಮತ್ತೆ ಈ ಮನೆಗೆ ಕಾಲಿಡುವಾಗ, ಈ ಮನೆಯ ಒಡತಿಯಾಗಿ ಬರಬೇಕು.'' ಸುಮತಿ ನಕ್ಕಂತೆ ಮಾಡಿದಳು. ಹರೀಶ ಸಂಕೇತ ಇಬ್ಬರೂ ಬಸ್‌ಸ್ಟ್ಯಾಂಡ್‌ಗೆ ಹೋಗಿ, ಬಸ್ಸು ಹೊರಡುವವರೆಗೂ ಇದ್ದು ಅವರವರ ಮನೆಗೆ ವಾಪಸ್ಸಾದರು. ಜಾನಕಿ ಅಲ್ಲೇ ಸೋಫಾದ ಮೇಲೆ ಮಲಗಿದ್ದಳು. ಜಗ್ಗು ಮೆಟ್ಟಿಲ ಬಳಿ ನೆಲದ ಮೇಲೆ ಉರುಳಿದ್ದ ''ಮಮ್ಮಿ ಇವನ್ಯಾಕೆ ಇಲ್ಲಿ ಬಿದ್ಕೊಂಡಿದಾನೆ ಒಳಕ್ಕೆ ಕರೆದುಕೊಂಡು ಹೋಗು.'' ಸಂಕೇತ ಕಿಡಿ ಕಾರಿದ.

''ಯಾವಾಗ ಇಲ್ಲಿ ಬಂದು ಬಿದ್ಕೊಂಡ್ನೋ... ಏಳೋ. ಜಗ್ಗು ಏಳೋ...''

ಸಂಕೇತ, ಕೆಳಗೆ ಬಿದ್ದುಕೊಂಡಿದ್ದ ಜಗ್ಗುವನ್ನು ದಾಟಿಕೊಂಡು ಮಹಡಿಯನ್ನೇರಿದ. ಜಾನಕಿಗೆ ಕಸಿವಿಸಿಯಾಗಿತ್ತು. ಹಾಗೆ ಮಲಗಿದ್ದವರನ್ನು ದಾಟಬಾರದು ಎಂದು ಹೇಳಬೇಕೆಂದೆನಿಸಿದ್ದರೂ, ಹೇಳಲಾಗಿರಲಿಲ್ಲ ಹೇಳಿದ ಮಾತನ್ನು ಕೇಳುತ್ತಾನೆ ಅಂತ ಏನು ಗೊತ್ತು ! ಬೇಡ ಎಂದಿದ್ದನ್ನು ಮಾಡಿಯೇ ತೋರುವವನು, ನನ್ನ ಮಾತನ್ನು ಬೇಕು ಬೇಕೂಂತ ವಿರೋಧಿಸುತ್ತಾನೆ. ಏನಾದ್ರೂ ಮಾಡಿಕೊಳ್ಳಲಿ, ಇವನೂ ಅಷ್ಟೇ, ಉಪಯೋಗವಿಲ್ಲದವನು, ಇಲ್ಲೇ ಬಿದ್ದಿರಲಿ, ಹೇಗೂ ತಾನೇನು ಕಾವಲು ಕಾಯಿಬೇಕಾಗಿಲ್ಲ, ಸುಮತಿಯೂ ಹೊರಟು ಹೋಗಿದಾಳೆ ಎಂದುಕೊಂಡು ತನ್ನ ಪಾಡಿಗೆ ತಾನು ಮಲಗಲು ಹೊರಟು ಹೋದಳು.

ಸುಮತಿಯನ್ನು ಬಲವಂತವಾಗಿ ಮದುವೆಗೆ ಒಪ್ಪಿಸಿದ್ದಾಗಿತ್ತು. ಆದರೆ ಅವಳ ಮನದಲ್ಲಿ ಏನಿದೆ ಎನ್ನುವುದನ್ನು ತಿಳಿಯಲಾಗಿರಲಿಲ್ಲ. ತಾನು ಅವಳನ್ನು ಹಿಡಿದುಕೊಂಡಾಗ, ಅವಳ ಶರೀರ ಕೊರಡಿನಂತೆ ಬಿಗಿಯಾದುದನ್ನು ಅರಿತಿದ್ದ. ಅವಳು ಆ ಆಘಾತದಿಂದ ಇನ್ನೂ ಹೊರಬಂದಿಲ್ಲ. ಹೊರಬರಲು ಸಾಕಷ್ಟು ಸಮಯಬೇಕು ಅಲ್ಲಿಯವರೆಗೂ ತಾನು ಸಂಯಮದಿಂದ ಕಾಯಬಲ್ಲೆ ಎಂಬ ವಿಶ್ವಾಸ ಅವನಿಗಿತ್ತು. ಸುಮತಿಯ ರೂಮಿಗೆ ಬಂದ. ಟೇಬಲ್ ಮೇಲೆ ಹರಡಿದ್ದ ವಸ್ತುಗಳ ಕಡೆ ಗಮನ ಹರಿಸಿದ ಮುತ್ತಿನ ನೆಕ್ಲೆಸ್, ಓಲೆಗಳ ಬಾಕ್ಸ್ ಕಣ್ಣಿಗೆ ಬಿತ್ತು. ಆ ದಿನ ನೆನಪಿಗೆ ಬಂದಿತ್ತು... ಅಲ್ಲೇ ಕಂಡ, ಸುಚಿತ್ರಳ ವೆಡ್ಡಿಂಗ್ ಕಾರ್ಡನ್ನು ಎತ್ತಿಕೊಂಡು, ತಾನೇ ತಿದ್ದಿ ಬರೆದದ್ದನ್ನು ಓದಿಕೊಂಡ 'ಸುಮತಿ ವೆಡ್ಸ್ ಸಂಕೇತ್'... ನಿಟ್ಟುಸಿರು ಹೊರಬಂತು. ಕೇವಲ ಈ ಎರಡು ಎರಡೂವರೆ ತಿಂಗಳಲ್ಲಿ ಏನೇನು ನಡೆದುಹೋಯಿತು... ತಾನು ಅಂದುಕೊಂಡೇ ಇರಲಿಲ್ಲ... ಈಗ ಸುಮತಿ ಏನು ಯೋಚಿಸುತ್ತಿರಬಹುದು ? ಮನಸ್ಸು ಅವಳ ಬಳಿಗೆ ಓಡಿ ಹೋಗಿತ್ತು.

ಬಸ್ಸಿನಲ್ಲಿ ಕಿಟಕಿಯ ಬಳಿ ಕುಳಿತಿದ್ದ ಸುಮತಿಗೆ ನಿದ್ದೆ ಬಂದಿರಲಿಲ್ಲ, ಕಿಟಕಿಯಿಂದ ಬೀಸಿ ಬರುತ್ತಿರುವ ಕೊರೆಯುವ ಗಾಳಿ, ಆದರೆ ಮನದೊಳಗೆ ಎದ್ದಿರುವ ಬಿರುಗಾಳಿ... ತಾನೇಕೆ ಇನ್ನು ಬದುಕಿದ್ದೇನೆ, ತಾನೇಕೆ ಆತ್ಮಹತ್ಯೆ ಮಾಡಿಕೊಳ್ಳಲಿಲ್ಲ, ತನಗೆ ಇನ್ನು ಬದುಕುವ ಆಸೆ ಇದೆ... ಯಾವ ಆಸೆ ! ಸಂಕೇತನನ್ನು ಮದುವೆಯಾಗುವ ಆಸೆಯೆ ? ಅವನ ಮಗುವಿನ ತಾಯಿಯಾಗುವ ಆಸೆಯೆ ? ... ಏನೇನೆಲ್ಲಾ ನಡೆದು ಹೋಯಿತಲ್ಲ, ತಾನು ಈ ಮನೆಗೆ ಪೇಯಿಂಗ್ ಗೆಸ್ಟ್ ಆಗಿ

ಬರದೇ ಇದ್ದಿದ್ದರೇ ಚೆನ್ನಾಗಿತ್ತೆನಿಸಿತ್ತು. ಜಗ್ಗೂ ಮೇಲೆ ಕನಿಕರ ತೋರಬಾರದಾಗಿತ್ತು. ಸಂಕೇತನನ್ನು ಪ್ರೀತಿಸಬಾರದಾಗಿತ್ತು... ಹೀಗೇ ತಾನು ಮಾಡಿದ್ದೆಲ್ಲಾ ತಪ್ಪು ಅಂತ ಅನ್ನಿಸತೊಡಗಿತ್ತು.

ಹರೀಶನ ಜೊತೆ, ಭದ್ರಾವತಿಗೆ, ಇದ್ದಕ್ಕಿದ್ದಂತೆ ಬಂದು ಸೇರಿದಾಗಲೇ ಮನೆಯವರು ಅನೇಕ ಪ್ರಶ್ನೆಗಳನ್ನು ಕೇಳಿದ್ದರು. ತಲೆಗೆ ಪೆಟ್ಟಾಗಿರುವುದು ಒಂದು ನೆವ, ಕಾಲೇಜಿನಲ್ಲಿ ಏನೋ ನಡೆದಿದೆ, ನಮಗೆ ಹೇಳುತ್ತಿಲ್ಲ ಅಷ್ಟೆ ಎಂದೇ ಸೂರಿ ಗಲಾಟೆ ಮಾಡಿದ್ದ. ಅವಳು ಮಂಕಾಗಿದ್ದುದನ್ನು ಗಮನಿಸಿ ಹೇಮ ಅನೇಕ ಬಾರಿ ಕೇಳಿದರೂ, ಸುಮತಿ ನಡೆದುದನ್ನು ಹೇಳಿರಲಿಲ್ಲ.

''ತಲೆಗೆ ಪೆಟ್ಟು ಬಂದಿದೆ. ಏನೋ ಎತ್ತೋ ಡಾಕ್ಟರರ ಬಳಿಗೆ ಹೋಗಿ ಚಕಪ್ ಮಾಡಿಸ್ಕೊಂಡು ಬಾ'' ತಂದೆ ನುಡಿದಿದ್ದರು. ಅವಳು ಹೋಗಿರಲಿಲ್ಲ.

''ನೋಡು ಹೀಗೇ ಇದ್ದರೆ, ನೋಡಿದವರು ಏನಾದ್ರೂ ಆಡಿಯೇ ಆಡ್ತಾರೆ... ಇಲ್ಲೇ ಯಾವುದಾದರೂ ಕೆಲಸಕ್ಕೆ ಸೇರ್ಕೋ...'' ಹೇಮ ಸಲಹೆ ನೀಡಿದ್ದಳು.

''ಯಾಕೋ ಮನಸ್ಸೇ ಸರಿಯಿಲ್ಲ...'' ಎಂದಿದ್ದಳು. ಏನೋ ನಡೆಯಬಾರದ್ದು ನಡೆದಿದೆ ಎಂದು ಎಲ್ಲರೂ ಊಹಿಸಿದ್ದರು ಸೂರಿ ಆಡಿಯೇ ಬಿಟ್ಟ.

''ಬಹಳ ಜಂಭ ಆಡ್ತಿದ್ದೆ... ಹೊರಗೆ ಕೆಲಸ ಮಾಡಿ ಸಂಪಾದನೆ ಮಾಡೋದು ಅಷ್ಟು ಸುಲಭ ಅಂತ ಅಂದ್ಕೊಂಡ್ಯಾ, ಅದೂ ಹೆಣ್ಣು ಹುಡುಗಿಯರಿಗೆ... ಏನು ನಡೀತು ಅಂತ ಹೇಳು... ಯಾರು ಏನೇ ಮಾಡಿರಲಿ, ಅವನ ಕೈಕಾಲು ಮುರಿದು ಬರ್ತೀನಿ'' ಅಂತ.

''ಅವಳ ತಲೆಗೆ ಪೆಟ್ಟು ಬಿದ್ದಿದೆ ಅದಕ್ಕೆ ಮಂಕಾಗಿದಾಳೆ ಸುಮ್ಮನೇ ಏನೇನೋ ಆಡಿ ಸತಾಯಿಸಬೇಡಿ'' ತಂದೆ ಅವಳ ಪರವಹಿಸಿ ಮಾತನಾಡಿದಾಗ, ತಲೆ ತಗ್ಗಿಸುವಂತಾಗಿತ್ತು. ತನ್ನ ತಂದೆಯ ನಂಬಿಕೆಗೆ ತಾನು ದ್ರೋಹ ಬಗೆಯುತ್ತಿದ್ದೇನೆಂದೇ ಅನ್ನಿಸಿತ್ತು ಆತ್ಮಹತ್ಯೆಯ ಆಲೋಚನೆಯೂ ಬಂದಿತ್ತು. ಅದರಿಂದ ತನಗೇನೋ ಮುಕ್ತಿ ಸಿಗಬಹುದು. ಆದರೆ ಈ ಮನೆಗೆ ತನ್ನಿಂದ ಅವಮಾನವಾಗುವುದಿಲ್ಲವೆ ? ಮನೆಯಲ್ಲಿ ಮದುವೆಯಾಗದೇ ಇರುವ ಹೇಮಳಿಗೆ ತೊಂದರೆಯಾಗುತ್ತದೆ... ಹೀಗೆ ನಾನಾ ಆಲೋಚನೆಗಳಲ್ಲಿ ದಿನಗಳನ್ನು ಕಳೆದಳು. ಸಂಕೇತನಿಂದ ಬಂದಿದ್ದ ಪತ್ರಗಳಿಗೆ ಉತ್ತರ ಬರೆಯಬೇಕೆಂದೆನಿಸಿರಲಿಲ್ಲ. ಸಂಕೇತನ ಪ್ರೀತಿಗೆ ತಾನು ಅನರ್ಹಳು, ಅವನಿಗೆ ಜಗ್ಗೂನ ಕಂಡರೆ ಮೊದಲೇ ದ್ವೇಷ, ಈ ವಿಷಯ ತಿಳಿದರೆ, ಅವನನ್ನು ಕೊಂದೇ ಬಿಡುತ್ತಾನೆ, ನನ್ನ ಮೇಲಿನ ಪ್ರೀತಿಯೂ ಕಡಿಮೆ ಆಗುತ್ತದೆ, ತಾನು ಸುಮ್ಮನಿದ್ದು ಬಿಟ್ಟರೆ, ಕ್ರಮೇಣ ಸಂಕೇತ ನನ್ನನ್ನು ಮರೆತು ಬಿಡುತ್ತಾನೆ ಎಂದು ಭಾವಿಸಿದಳು. ಇದ್ದಕ್ಕಿದ್ದಂತೆ ಸಂಕೇತ ಹರೀಶನೊಡನೆ, ಬಂದಿಳಿದಾಗ ಎದೆ ಢವ ಢವ ಹೊಡೆದುಕೊಂಡಿತ್ತು. ತನಗಾಗಿ ಸಂಕೇತ ಬಂದಿದಾನೆ ಎನ್ನುವ ಖುಷಿಯೇ ಇರಲಿಲ್ಲ. ಇವನಿಂದ ತಪ್ಪಿಸಿಕೊಳ್ಳುವುದು ಹೇಗೇ ಎಂದೇ ಚಿಂತಿಸುತ್ತಿದ್ದಳು. ಅವನನ್ನು ಕಳಿಸಿಯಾಗಿತ್ತು.

ಬೆಳಿಗ್ಗೆ ಏಳುತ್ತಿದ್ದಂತೆ ತಲೆ ಧಿಂ ಎನ್ನುತ್ತಿತ್ತು ವಾಕರಿಕೆ, ವಾಂತಿ ಆದಾಗ, ಮನೆಯವರಿಗೆಲ್ಲ ಏನೋ ಅನುಮಾನದಿಂದ ಆತಂಕವಾಗಿತ್ತು. ಹೇಮ ಡಾಕ್ಟರ ಬಳಿ ಕರೆದುಕೊಂಡು ಹೋದಳು ಡಾಕ್ಟರು, ಅವಳನ್ನು ಪರೀಕ್ಷಿಸಿ, ಅವಳು ತಾಯಿಯಾಗಲಿದ್ದಾಳೆಂದು ತಿಳಿಸಿದಾಗ ಅನುಮಾನ ನಿಜವಾಗಿತ್ತು. ಸುಮತಿ ಹೇಮಳ ಕೈ ಹಿಡಿದುಕೊಂಡಳು. ಜಗ್ಗು ಮಾಡಿದ ಅನಾಹುತ, ಮನೆಯವರಿಗೆಲ್ಲ ತಿಳಿಯಿತು. ತಾಯಿ ತಲೆಯ ಮೇಲೆ ಕೈ ಹೊತ್ತಳು. ಈಗ ಈ ಸಂಕಟದಿಂದ ಪಾರಾಗುವುದು ಹೇಗೆ? ಮೊದಲು ಅಬಾರ್ಷನ್ ಮಾಡಿಸಬೇಕು. ಆದರೆ ಇಲ್ಲಿ ಬೇರೆಯವರಿಗೆ ಗೊತ್ತಾಗಬಹುದು. ಬೆಂಗಳೂರಿಗೇ ಹೋಗಿ ಮಾಡಿಸಿಕೊಂಡು ಬರಬೇಕು. ಈಗ ಜಾನಕಿಯೇ ಸಹಾಯಕ್ಕೆ ಬರಬೇಕೆಂದುಕೊಂಡು, ಸುಮತಿಯೊಡನೆ ತಂದೆಯೂ ಬೆಂಗಳೂರಿಗೆ ಹೊರಟರು. ಆದರೆ ಸುಮತಿಗೆ, ತನ್ನ ಗರ್ಭದಲ್ಲಿ ಬೆಳೆಯುತ್ತಿರುವ ಮಗು ಸಂಕೇತನದೇ ಎಂದು ಖಚಿತವಾಗಿತ್ತು. ಹಾಗಾಗಿ ಅವಳು ಅಬಾರ್ಷನ್ ಬಗ್ಗೆ ಚಿಂತಿಸಲೇ ಇಲ್ಲ.

ಆದರೆ ತಾನೀಗ ಸಂಕೇತನನ್ನು ಮದುವೆಯಾದರೆ, ಅವನನ್ನು ವಂಚಿಸಿದಂತಾಗುತ್ತದೆ. ಆದರೂ, ತಾನೀಗ ಈ ಮಗುವನ್ನು ಹೆತ್ತು, ಪಾಲಿಸಬೇಕು, ಬೆಳೆಸಬೇಕು, ಸಂಕೇತನ ಪ್ರೀತಿಯ ಕುರುಹು, ಒಂದೇ ಜೀವನಕ್ಕೆ ಆಧಾರ... ಆದರೆ, ಮದುವೆಯಾಗದೇ ತಾನು ತಾಯಿಯಾದರೆ, ತನ್ನ ಮನೆಯ ಮರ್ಯಾದೆ ಹೋಗುತ್ತದೆ, ಹೇಗೂ ಜಗ್ಗು ತನ್ನನ್ನು ಕೆಡಿಸಿದಾನಲ್ಲವೇ, ಈ ವಿಷಯ ಆಂಟಿಗೂ ಗೊತ್ತು... ಆಂಟಿಯನ್ನು ಒಪ್ಪಿಸಿ, ಜಗ್ಗುವಿನ ಪತ್ನಿಯಾಗುವುದೊಂದೇ ಉಳಿದಿರುವ ದಾರಿ... ಕೆಲವರು ಆಡಿಕೊಂಡು ನಗಬಹುದು, ಕೆಲವರು ಹೊಗಳಬಹುದು... ಆದರೆ, ಅದೇ ಮನೆಯಲ್ಲಿ ತಾನು, ತನ್ನ ಮಗುವಿನೊಂದಿಗೆ ಜೀವಿಸಿರಲು ಅನುಕೂಲವಾಗುತ್ತದೆ ಎಂದು ತನ್ನಲ್ಲೇ ಯೋಚಿಸಿಕೊಂಡಳು.

ಜಾನಕಿಗೆ, ಸುಮತಿ ಬಂದಾಗಲೇ ಏನೋ ವಾಸನೆ ಬಂದಿತ್ತು. ಅವಳು ವಿಷಯವನ್ನು ತಿಳಿಸಿದಾಗ, ಹಿಂದು ಮುಂದೆ ನೋಡದೇ 'ಅಬಾರ್ಷನ್ ಮಾಡಿಸ್ಕೋ' ಎಂದಿದ್ದಳು. ಎಷ್ಟು ಹಣ ಖರ್ಚಾದರೂ ಪರವಾಗಿಲ್ಲ ನಾನು ಕೊಡ್ತೀನಿ... ಎಷ್ಟು ದಿನ ಬೇಕಾದ್ರೂ ಇಲ್ಲಿರು ನಾನು ನೋಡಿಕೊಳ್ತೀನಿ'' ಎಂದಿದ್ದಳು. ಸಂಕೇತನಿಗೆ ಯಾವ ವಿಷಯವನ್ನು ತಿಳಿಸಿಲ್ಲವೆಂದೇ ಭಾವಿಸಿದಳು. ತಾನೂ ಅವರಿಬ್ಬರ ನಡುವಿನ ಪ್ರೀತಿಯ ವಿಷಯವನ್ನು ಹೇಳಲಿಲ್ಲ. ''ನಾನು ಜಗ್ಗೂನ ಮದುವೆಯಾಗ್ತೀನಿ... ಕೇವಲ ಈ ಮಗುವಿಗೋಸ್ಕರ'' ಎಂದಿದ್ದಳು.

''ನಿನಗೆಲ್ಲೋ ಹುಚ್ಚು ಹಿಡಿದಿದೆ. ನಾನು ಇದಕ್ಕೆ ಒಪ್ಪುವುದಿಲ್ಲ.'' ಎಂದು ಹೇಳಿದರೂ, ಸುಮತಿ ತನ್ನ ನಿಲುವನ್ನು ಬದಲಾಯಿಸಿಕೊಳ್ಳಲಿಲ್ಲ. ಸಮಯದಲ್ಲಿ ಸಂಕೇತನೂ ಇಲ್ಲ. ಅವನು ಖಂಡಿತಾ ಈ ಮದುವೆಗೆ ಒಪ್ಪುವುದಿಲ್ಲ. ಸುಮತಿಗೆ ತಿಳುವಳಿಕೆ ಹೇಳಿ ಒಪ್ಪಿಸುತ್ತಾನೆಂದುಕೊಂಡು ಹರೀಶನಿಗೆ ಫೋನು ಮಾಡಿದ್ದಳು ಜಾನಕಿ.

ಈಗ ಮನೆಗೆ ಹೋದಾಗ, ಮತ್ತೆ ಏನೇನು ಮಾತುಗಳನ್ನು ಕೇಳ ಬೇಕಾಗುತ್ತದೋ...

ಬಸ್ಸು ಇಲ್ಲಿಯೇ ಯಾವುದಾದರೂ ಹಳ್ಳಕ್ಕೆ ಬೀಳಬಾರದೇ, ಅಲ್ಲಿಗೆ ಎಲ್ಲಾ ಮುಗಿಯುತ್ತದೆ ಅಂತ ಸಹ ಅನ್ನಿಸಿತ್ತು, ಸುಮತಿಗೆ.

ಸಂಕೇತ ಮದುವೆಯಾಗಲು ಒಪ್ಪಿರುವ ವಿಷಯ ತಿಳಿದು, ಮನೆಯವರಿಗೆಲ್ಲ ಸಮಾಧಾನವಾಗಿತ್ತು 'ಎಷ್ಟಾಗಲೀ ದೊಡ್ಡ ಮನೆತನದವರು, ದೊಡ್ಡ ಹೃದಯದವರು, ಅಂತೂ ಭಗವಂತ ನಮ್ಮ ಕೈ ಬಿಡಲಿಲ್ಲ" ತಾಯಿ ದೇವರಿಗೆ ಕೈ ಮುಗಿದಿದ್ದಳು.

"ನಮ್ಮ ಸುಮತಿ ಅದೃಷ್ಟವಂತೆ, ಸಂಕೇತ, ದೇವರಂತೆ ನಮಗೆ ಸಹಾಯ ಮಾಡ್ತಿದಾನೆ... ಇಲ್ಲದಿದ್ದರೆ ನಮ್ಮ ಗತಿ ಏನಾಗುತ್ತಿತ್ತು ?" ತಂದೆ ಸಂಕೇತನನ್ನು ಬಾಯಿ ತುಂಬ ಹೊಗಳಿದಾಗಲೂ ಅವಳು ಉಬ್ಬಿರಲಿಲ್ಲ ಹೇಮಳೊಂದಿಗೆ ಹೇಳಿಕೊಂಡು ಅತ್ತಿದ್ದಳು.

"ಈ ಮದುವೆ ನೆರವೇರುತ್ತದೆ ಅಂತ ನನಗೇನೂ ಸಂತಸವಾಗುತ್ತಿಲ್ಲ. ನನ್ನನ್ನು ಮನಸಾರೆ ಪ್ರೀತಿಸಿದ ಸಂಕೇತನಿಗೆ ದ್ರೋಹ ಮಾಡ್ತಿದಿನೇನೋ ಅಂತೆನ್ನಿಸುತ್ತಿದೆ." ಅಂತ.

"ಹಾಗೆಲ್ಲ ಏನೇನೋ ಯೋಚಿಸಿ ಕೊರಗಬೇಡ... ಮೈಮೇಲೆ ಗಲೀಜು ಅಂಟಿಕೊಂಡಾಗ, ಚೆನ್ನಾಗಿ ನೀರು, ಸೋಪು ಹಾಕಿ ತೊಳೆದುಕೊಳ್ತೀವಿ. ಆ ಭಾಗವನ್ನೇ ಕಿತ್ತು ಬಿಸಾಡುವುದಿಲ್ಲ. ಹಾಗೇ ಈ ಘಟನೆ ಎಂಬ ಕೊಳೆಯನ್ನು ನಿನ್ನ ಮನಸ್ಸಿನಿಂದ, ಈ ಸುಸಮಯವನ್ನು ಉಪಯೋಗಿಸಿಕೊಂಡು ತೊಳೆದು ಹಾಕು. ಕ್ರಮೇಣ ಎಲ್ಲಾ ಸರಿ ಹೋಗುತ್ತದೆ."

"ಏನು ಸರಿ ಹೋಗುತ್ತೋ ಏನೋ... ಸಧ್ಯ ಈ ಮನೆಯವರ ಮರ್ಯಾದೆ ಉಳಿಯಿತು.ಅದೊಂದೇ ಸಮಾಧಾನ."

"ಸಾಕು ಮುದುಕಿಯ ತರಹ ಮಾತನಾಡಬೇಡ... ಇದು ನಡೆದದ್ದು ಒಂದು ಆಕಸ್ಮಿಕ. ಇದರಲ್ಲಿ ನಿನ್ನ ತಪ್ಪು ಏನೂ ಇಲ್ಲ ಅಂತ ಮನೆಯವರಿಗೆಲ್ಲ ಗೊತ್ತು." ಹೇಮ ಸಮಾಧಾನ ಹೇಳಿದ್ದಳು.

"ನಾಳೆ, ಹರೀಶ, ಸಂಕೇತ ಇಬ್ಬರೂ ಬರುತ್ತಿದಾರೆ... ಹರೀಶನ ಸೋದರ ಮಾವನ ಮಗ, ಹೇಮಳನ್ನು ನೋಡಲು ಬರುತ್ತಾನಂತೆ." ಎಂದು ವಿಷಯವನ್ನು ತಂದೆ ತಿಳಿಸಿದಾಗ, ಮನೆಯ ವಾತಾವರಣ ಸ್ವಲ್ಪ ಮಟ್ಟಿಗೆ ಬದಲಾಗಿತ್ತು ವರನ ಕಡೆಯವರು ಬರುತ್ತಿದ್ದಾರೆ. ಈ ಸಾರಿಯಾದರೂ, ನಮ್ಮ ಹೇಮಳಿಗೆ ಕಂಕಣ ಬಲ ಕೂಡಿಬರಲಿ ಎಂದು ತಾಯಿ ದೇವರಲ್ಲಿ ಪ್ರಾರ್ಥಿಸಿದಳು.

ಹರೀಶ, ಸಂಕೇತರವರು ಬಂದ ಕೆಲವೇ ಸಮಯದ ನಂತರ, ಅಶೋಕ ಅರವಿಂದರೂ ಬಂದರು. ಪರಸ್ಪರ ಪರಿಚಯ ಮಾಡಿಕೊಟ್ಟ ಹರೀಶ. ಸುಮತಿ ಹೊರಕ್ಕೇ ಬಂದಿರಲಿಲ್ಲ. ಹೇಮಳನ್ನು ನೋಡಿದ ಕೂಡಲೇ ಅಶೋಕ ಒಪ್ಪಿಕೊಂಡಿದ್ದ. ಕಾಫಿ ತಿಂಡಿಯ ಉಪಚಾರದ ನಂತರ, ಹೇಮ ತಂಗಿಯೊಡನೆ ಪಿಸುಗುಟ್ಟಿದ್ದಳು.

"ಅಶೋಕ, ಸಂಕೇತನಷ್ಟು ಸ್ಫುರದ್ರೂಪಿಯಲ್ಲ, ಶ್ರೀಮಂತನೂ ಅಲ್ಲ, ಆದರೂ ನಾನು ಅವನನ್ನು ಒಪ್ಪಿದೀನಿ. ಯಾಕೆ ಗೊತ್ತಾ ? ನೀನೂ ಮದುವೆಯಾಗಿ ಹೊರಟು ಹೋದರೆ, ನಾನು ಇಲ್ಲಿ ಒಂಟಿಯಾಗಿ ಹೇಗಿರಲಿ ? ಅಮ್ಮನ ಕಿರಿ ಕಿರಿ ಮಾತುಗಳನ್ನು ಕೇಳೀ ಕೇಳೀ ತಲೆ ಚಿಟ್ಟು ಹಿಡಿದು ಹೋಗಿದೆ...

ವಧೂವರರು ಪರಸ್ಪರ ಒಪ್ಪಿದ್ದರು. ಮದುವೆಗೆ ತಡಮಾಡುವುದರಲ್ಲಿ ಅರ್ಥವಿರಲಿಲ್ಲ. ಇಬ್ಬರು ಹೆಣ್ಣು ಮಕ್ಕಳ ಮದುವೆಯನ್ನು ಒಟ್ಟಿಗೇ ನೆರವೇರಿಸಿ ಬಿಡುವುದೆಂದು ನಿರ್ಧರಿಸಿದರು. ಜಾನಕಿ ಮನೆ ಬಿಟ್ಟು ಬರಲಾಗುವುದಿಲ್ಲವೆಂದು ತಿಳಿಸಿದುದರಿಂದ ಬೆಂಗಳೂರಿನಲ್ಲೇ ಮದುವೆ ನಡೆಯಲಿ ಎಂದು ಎಲ್ಲರೂ ಅಭಿಪ್ರಾಯಪಟ್ಟರು. ಮೊದಲ ಮುಹೂರ್ತದಲ್ಲಿ ಸುಮತಿ-ಸಂಕೇತರ ವಿವಾಹ, ಎಂಟು ದಿನಗಳ ನಂತರ ಹೇಮ- ಅಶೋಕರ ಮದುವೆ ಎಂದು ತಾರೀಖನ್ನು ಗೊತ್ತು ಮಾಡಿದರು.

ಊರಿಗೆ ಹೊರಡುವ ಮೊದಲು ಸಂಕೇತ ಸುಮತಿಯೊಡನೆ ಮಾತನಾಡಬೇಕು ಎಂದು ಬಯಸಿದ. ಹೇಮ ಸುಮತಿಯನ್ನು ಒಪ್ಪಿಸಿ ಹೊರಬಂದಳು. ಸಂಕೇತ ರೂಮಿಗೆ ಬಂದ. ಬೆಳಕು ಸಾಲದ, ಕತ್ತಲೆ ಕೋಣೆ... ಒಂದುಗಳಿಗೆ ಹಿಡಿಯಿತು, ಆ ರೂಮಿಗೆ ಹೊಂದಿಕೊಳ್ಳಲು." ಹೀಗೆ ಕತ್ತಲೆಯಲ್ಲೇ ಕೂತಿದ್ರೆ ಬೂಷ್ಟು ಹಿಡಿದು ಹೋಗ್ತೀಯ ಅಷ್ಟೇ. ನಡೀ ನನ್ನ ಜೊತೆ. ನಾನು ನಿನ್ನ ತಂದೆಯ ಹತ್ತಿರ ಮಾತಾಡ್ತೀನಿ" ಎಂದ. ಸುಮತಿ ನಿರಾಕರಿಸಿದಳು ಮನೇಲಿ ತುಂಬಾ ಕೆಲಸಗಳಿರುತ್ತವೆ. ಎಲ್ಲಾವನ್ನು ತಪ್ಪಿಸಿಕೊಂಡು ಅಲ್ಲಿಗೆ ಬಂದರೆ, ಮನೆಯವರು ಏನೆಂದುಕೊಳ್ತಾರೆ ?" ಎಂದಳು.

"ಕೆಲಸ ಕೆಲಸ ಅಂತ ಆಯಾಸ ಮಾಡಿಕೊಳ್ಳಬಾರದು... ನನ್ನ ಮಗುವಿಗೆ ತೊಂದರೆ ಆಗುತ್ತೆ" ಎಂದಿದ್ದ.

"ಷ್ ಮೆಲ್ಲಗೆ ಮಾತಾಡಿ. ಯಾರಿಗಾದ್ರೂ ಕೇಳಿಸಿದರೆ ?"

"ಕೇಳಿಸಿದರೆ ಕೇಳಿಸಲಿ. ಈ ಮಗು ನಮ್ಮಿಬ್ಬರದು, ನನಗೆ ಹಕ್ಕಿದೆ..." ಎಂದ ಸುಮತಿ ಮಾತನಾಡಲಿಲ್ಲ.

"ಓ...ಕೆ... ಟೇಕ್ ಕೇರ್..." ಎಂದು ಅವಳ ತಲೆ ಸವರಿದ. ಸುಮತಿ ಅವನ ಕೈ ಹಿಡಿದಳು.

"ಥ್ಯಾಂಕ್‌ಯೂ ಸಂಕೇತ್..." ಎಂದು ಹೇಳುವಾಗ ಧ್ವನಿ ಗದ್ಗದವಾಗಿತ್ತು.

"ಛಿ. ಹುಚ್ಚಿ... ಅಳೋದೇಕೆ ? ... ನನ್ನ ಮೇಲೆ ನಂಬಿಕೆ ಇದೆ ತಾನೇ... ಐ ಲವ್‌ಯೂ ಎಂದು ಹೇಳುವಷ್ಟರಲ್ಲಿ ಹರೀಶ ಹೊರಗಿನಿಂದ ಕರೆದಿದ್ದ.

"ಇವನೊಬ್ಬ, ಶಿವಪೂಜೇಲಿ ಕರಡಿಗೆ ಬಿಟ್ಟ ಹಾಗೆ... ಮಧ್ಯೆ ಬಾಯಿ ಹಾಕದೇ ಇದ್ದರೆ, ಇವನಿಗೆ ನಿದ್ದೇನೇ ಬರುಲ್ಲ" ಎಂದು ಗೊಣಗಿ, ಸುಮತಿಯ ಕೆನ್ನೆ ಸವರಿ ಹೊರ ಬಂದ ಬಾಗಿಲಲ್ಲೇ

ನಿಂತಿದ್ದ ಹರೀಶ ಚುಡಾಯಿಸದೇ ಬಿಡಲಿಲ್ಲ.

"ಮುಗಿತೇನಯ್ಯಾ ನಿನ್ನ ರೋಮಾನ್ಸು...?"

"ಬೀ ಕ್ವೈಟ್" ಎಂದು ಗದರಿ ಅವನೊಡನೆ ಹೆಜ್ಜೆ ಹಾಕಿದ. ಮದುವೆಯ ಮಾತುಕತೆಗಳು ಮುಗಿದಿದ್ದವು. ಸದಾನಂದ ದಂಪತಿಗಳು ಬಂದು, ಲಗ್ನ ಪತ್ರಿಕೆಯ ಶಾಸ್ತ್ರವನ್ನು ಮುಗಿಸಿಕೊಂಡು ಹೋಗುವುದಾಗಿ ಫೋನಿನಲ್ಲೇ ತಿಳಿಸಿದ್ದರು. ಹರೀಶ ತಾನು ಮತ್ತೆ ತಾಯಿಯನ್ನು ಕರೆದುಕೊಂಡು ಬರುವುದಾಗಿ ಹೇಳಿದ. ಆ ಸಂಜೆಯೇ ಎಲ್ಲರೂ ವಾಪಸ್ಸು ಊರಿಗೆ ಹೊರಟು ಹೋದರು.

ಸಂಕೇತನಿಗೆ ಗ್ರ್ಯಾಂಡ್ ಆಗಿ ಮದುವೆ ಮಾಡಿಕೊಳ್ಳಬೇಕೆಂಬ ಆಸೆ ಇದ್ದರೂ ಈಗ ಬದಲಾಗಿದ್ದ. ಸುಮತಿಯ ಮನಃಸ್ಥಿತಿ ಸರಿ ಇಲ್ಲ, ಅಲ್ಲದೇ ಅವರ ಮನೆಯಲ್ಲಿ ಎರಡೆರಡು ಮದುವೆಗಳು, ಹೇಗೋ ಒಂದು ಮದುವೆ ಕಾರ್ಯ ನಡೆದರೆ ಸಾಕು, ಸುಮತಿ ತನ್ನ ಪತ್ನಿಯಾಗಿ ಬಂದರೆ ಸಾಕು ಎಂದುಕೊಂಡ.

ಸುಮ್ಮನೇ ಸಾಲ ಸೋಲ ಮಾಡಿ, ದುಂದು ವೆಚ್ಚ ಮಾಡೋದುಬೇಡ. ಸರಳವಾಗಿ ಮದುವೆ ಮಾಡಿಕೊಡಿ. ನಮ್ಮ ಕಡೆಯ ನೆಂಟರೂ ಕಡಿಮೆ ಎಂದು ಸದಾನಂದರೂ ಹೇಳಿದ್ದರು. ಸುಮತಿಯ ತಂದೆ, ಹರೀಶ ಹಾಗೂ ಸಂಕೇತನ ಸಹಾಯದಿಂದ, ಬೆಂಗಳೂರಿನ ಛತ್ರ ಒಂದನ್ನು ಗೊತ್ತು ಮಾಡಿ, ಮದುವೆಯ ತಯಾರಿಗಳನ್ನು ನಡೆಸಿದರು. ಮದುವೆಯ ಹಿಂದಿನ ರಾತ್ರಿಯೇ ಭದ್ರಾವತಿಯಿಂದ ಹೆಣ್ಣಿನ ಮನೆಯವರು, ಛತ್ರಕ್ಕೆ ಬಂದಿಳಿದಿದ್ದರು. ಎಲ್ಲಾ ವ್ಯವಸ್ಥೆಯೂ ಆಗಿತ್ತು. ಸಂಕೇತ ಬಂದು ಎಲ್ಲರನ್ನೂ ಮಾತನಾಡಿಸಿಕೊಂಡು ಹೋಗಿದ್ದ... ಸುಮತಿಯಲ್ಲಿ ಯಾವ ಬದಲಾವಣೆಯೂ ಇಲ್ಲ. ಕಲ್ಲು ಬೊಂಬೆಯಂತೆ ಕುಳಿತಿದ್ದವಳನ್ನು ಕಂಡು ರೇಗಿ ಹೋಯ್ತು.

"ಏನಾಗಿದೆ ನಿನಗೆ ? ನಡೀ ಡಾಕ್ಟರ ಹತ್ತಿರ ಹೋಗಿ ಬರೋಣ..."

"ಬೇಡ. ಯಾಕೋ ಈಗಲೂ ನನಗೆ ಸಮಾಧಾನವೇ ಇಲ್ಲ" ಎಂದಳು.

"ಸರಿ ಹಾಗಾದ್ರೆ ... ನಾನು ನಿಮ್ಮ ತಂದೆಗೆ ಹೇಳ್ತೀನಿ. ನನಗೂ ಈ ಬಲವಂತದ ಮದುವೆ ಬೇಡ..." ಹೊರಟವನನ್ನು ತಡೆದಳು.

"ಸಾರಿ ಸಂಕೇತ್... ನನ್ನನ್ನು ಅರ್ಥ ಮಾಡಿಕೊಳ್ಳಿ."

"ಅಲ್ಲ ಸುಮತಿ... ಸ್ವಲ್ಪ ಗೆಲುವಾಗಿರುಕ್ಕೆ ಪ್ರಯತ್ನ ಪಡು... ಯಾರಾದ್ರೂ ನೋಡಿದ್ರೆ ಏನಂದುಕೊಳ್ತಾರೆ ? ನಿನಗೆ ನಮ್ಮ ಮನೆಯಲ್ಲಿ ರಕ್ಷಣೆ ಬೇಕು ತಾನೇ... ಅದು ಯಾವಾಗಲೂ ನಿನಗೆ ಸಿಗುತ್ತೆ. ನನ್ನ ಕಡೆಯಿಂದ ನಿನಗೆ ಯಾವ ಆಕ್ಷೇಪಣೆಯೂ ಇಲ್ಲ, ತೊಂದರೆಯೂ ಇಲ್ಲ ಪ್ರಾಮಿಸ್..." ಎಂದು ತನ್ನ ಕತ್ತನ್ನು ಮುಟ್ಟಿಕೊಂಡ.

"ಏನು ಮಾಡ್ತಿದೀರಿ ಇಬ್ಬರೂ ಈ ಅಂತಃಪುರದಲ್ಲಿ ?" ಹರೀಶ ಇಬ್ಬರನ್ನೂ ನಗಿಸಲು ನೋಡಿದ.

"ನಿನಗೇ ಕಾಯ್ತಾ ಇದ್ದೆ... ಯಾಕಪ್ಪಾ ಹರೀಶ ಇನ್ನೂ ಬಂದಿಲ್ಲಾ ಅಂತ" ಎಂದು ಸಂಕೇತನೂ ಗೇಲಿ ಮಾಡಿದ. ಸುಮತಿ ನಕ್ಕಂತೆ ಮಾಡಿದಳು ಒಂದು ಪಕ್ಕಕ್ಕೆ ಹರೀಶನನ್ನು ಕರೆದು ಪಿಸುದನಿಯಲ್ಲಿ ನುಡಿದ.

"ನೀನು ಇವಳ ಜೊತೆ ಜೊತೇಲೇ ಇರು... ತಮಾಷೆಯಾಗಿ ಮಾತನಾಡಿ, ಅವಳಲ್ಲಿ ಗೆಲುವು ಮೂಡುವಂತೆ ಮಾಡು... ಪ್ಲೀಸ್."

"ನಾನೇನು ವಿದೂಷಕಾನಾ ?"

"ಹೌದು... ನೀನು ಈ ಚಿತ್ರಾಂಗದೆಯ ಅಂತಃಪುರದ ವಿದೂಷಕ. ಇದು ನನ್ನ ಆರ್ಡರ್" ಸಂಕೇತ ಗಂಭೀರತೆಯನ್ನು ನಟಿಸಿ ನುಡಿದ.

"ಮಹಾರಾಜ ನೀವು ಇತ್ತ ದಯಮಾಡಿಸಿ... ನಾನು ಮಹಾರಾಣಿ ಚಿತ್ರಾಂಗದೆಯವರ ಬಳಿ ಕುಳಿತುಕೊಳ್ಳುತ್ತೇನೆ" ಎಂದು ಹರೀಶ ಅತ್ತ ನಡೆದಾಗ, ಸಂಕೇತ ಒರಟಾಗಿ ಎಳೆದ.

"ದೂರ ದೂರ... ಮಹಾರಾಣಿಯವರನ್ನು ದೂರದಿಂದಲೇ ಮಾತನಾಡಿಸಬೇಕು"

"ಏ... ಹೋಗೆಲೇ ... ಈ ರೆಸ್ಟ್ರಿಕ್ಷನ್ ಎಲ್ಲಾ ನನ್ನ ಹತ್ತಿರ ನಡೆಯೋಲ್ಲ"ಸುಮತಿ ಅವರಿಬ್ಬರ ಸಂಭಾಷಣೆಯನ್ನು ಆಲಿಸಿ ನಕ್ಕಳು. ಅಂತೂ ಹೇಗಾದ್ರೂ ಸರಿ, ತಾನು ಗೆಲುವಾಗಿರಬೇಕೆಂದು ಸಂಕೇತ ಬಯಸುತ್ತಾನೆ. ಹರೀಶನ ಮೇಲೆ ಇವನಿಗೆ ನಂಬಿಕೆ ಇರಲಿಲ್ಲ, ಆದರೆ ಇಬ್ಬರೂ ಪರಮ ಸ್ನೇಹಿತರು... ಹರೀಶ ನನಗೂ ಬೇಕಾದವನೇ... ನನಗೆ ಸಹಾಯ ಮಾಡಿದ್ದಾನೆ... ಇವರಿಬ್ಬರ ಸಹಾಯವನ್ನು ನಾನು ಈ ಜನ್ಮದಲ್ಲಿ ಮರೆಯುವಂತಿಲ್ಲ ಎಂದುಕೊಂಡಳು ಅವರಿಬ್ಬರ ಹುಸಿ ಜಗಳವನ್ನು ಆಲಿಸುತ್ತಾ ಕುಳಿತಳು. ಆಗಾಗ್ಗೆ ಅವಳ ಮುಖದ ಮೇಲೆ ನಗುವಿನ ಛಾಯೆ ಮೂಡುವುದನ್ನು ಇಬ್ಬರೂ ಗಮನಿಸಿದ್ದರು.

"ಅವನ್ಯಾಕೆ ಜೋಕರ್ ಥರ ಹಾಗಾಡ್ತಾನೆ ?" ಹೇಮ ಪ್ರಶ್ನಿಸಿದಳು.

"ಅವನು ಸಂಕೇತ ಇಬ್ಬರೂ ಸೇರಿ ನನ್ನನ್ನು ನಗಿಸಲು ಪ್ರಯತ್ನಿಸುತ್ತಿದಾರೆ."

"ಹಾಗಾದರೆ ನಕ್ಕು ಬಿಡು. ಹೀಗೆ ಗುಂ ಅಂತ ಯಾಕೆ ಕೂತಿದೀಯ ?"

"ಹುಂ. ನಗಲೇ ಬೇಕು... ನನಗೋಸ್ಕರ ಅಲ್ಲವಾದರೂ, ಸಂಕೇತನಿಗೋಸ್ಕರ, ಅವನ ಮಗುವಿಗೋಸ್ಕರ ನಗಲೇಬೇಕು..." ಹೇಮ ತಂಗಿಯನ್ನು ವಿಚಿತ್ರವಾಗಿ ನೋಡಿದಳು.

ಮಾರನೇ ಬೆಳಿಗ್ಗೆ ವಿವಾಹದ ವಿಧಿಗಳು ಪ್ರಾರಂಭವಾದವು ಆಹ್ವಾನಿತ ನೆಂಟರಲ್ಲಿ ಕೆಲವರು ಹಾಜರಾಗಿದ್ದರು. ಹಸೆಮಣೆಯ ಮೇಲೆ ಕುಳಿತಿದ್ದ ಸುಮತಿ ಯಾವ ಭಾವನೆಯನ್ನು

ತುಳುಕಿಸದೆ, ಅಗತ್ಯಕ್ಕಿಂತ ಹೆಚ್ಚಿನ ಗಂಭೀರವನ್ನು ಪ್ರಕಟಿಸಿದ್ದಳು. ಸಂಕೇತನ ಮಾತುಗಳಿಗೆ ಅವಳು ಪ್ರತಿಕ್ರಿಯೆಯನ್ನೇ ತೋರಿರಲಿಲ್ಲ. ಸಂಕೇತನಿಗೆ ಹೂಮಾಲೆ ಹಾಕುವಾಗ, ಅವಳು ಬೆವೆತು ಹೋಗಿದ್ದಳು. ಕೊರಳಿಗೆ ತಾಳಿಯನ್ನು ಕಟ್ಟುವಾಗ, ಅವಳು ಕಂಪಿಸುತ್ತಿರುವಳೆಂಬ ಅನುಭವ ಸಂಕೇತನಿಗಾಗಿತ್ತು ಸಪ್ತಪದಿ ತುಳಿಯುವಾಗ ಅವಳು ನಿದ್ದೆಯಲ್ಲಿ ನಡೆಯುವವಳಂತೆ, ಯಾವುದೋ ಲೋಕದಲ್ಲಿದ್ದಳು.

ಇದನ್ನು ಗಮನಿಸಿದ್ದ ಅಶೋಕ ಹೇಮಳನ್ನು ಕೇಳಿದ್ದ.

''ನಿನ್ನ ತಂಗಿಗೆ ಏನಾಗಿದೆ ? ಹುಶಾರಿಲ್ವಾ ?''

''ಹುಂ. ಎರಡು ಮೂರು ದಿನಗಳಿಂದ ಜ್ವರ ಇತ್ತು ಇಂಜೆಕ್ಷನ್ ಕೊಡಿಸಿದೇ, ಅದಕ್ಕೇ ಸುಸ್ತಾಗಿದಾಳೆ.''

''ನೀನು ಹುಶಾರಾಗಿರಮ್ಮ ಇನ್ನೆರಡು ದಿನಕ್ಕೆ ನಮ್ಮ ಮದುವೆ...'' ಹೇಮ ಉತ್ತರಿಸಲಿಲ್ಲ ನಕ್ಕಳು. ಸಾಯಂಕಾಲ ರಿಸೆಪ್ಶನ್ ಸಮಯದಲ್ಲಿ ಸಂಕೇತನ ಸ್ನೇಹಿತರು ಬಂದಿದ್ದರು. ಕೆಲವರಿಗೆ ಸುಮತಿ ಮೊದಲೇ ಪರಿಚಿತಳು. ದಿನೇಶ ಹರೀಶನನ್ನು ಕೇಳಿದ್ದ.

''ಇದ್ಯಾಕೋ, ಸುಮತಿ ಹೀಗಾಗಿದಾರೆ ...? ಎಷ್ಟು ಚಾರ್ಮಿಂಗ್ ಆಗಿದ್ದರು...''

''ಸಂಕೇತನ ಪ್ರೀತಿ ಹೆಚ್ಚಾಯಿತು...''

''ಅಂತೂ ಕಳ್ಳ... ನಮಗ್ಯಾರಿಗೂ ತಿಳಿಸದೇ ಲವ್, ಮದುವೆ ಎಲ್ಲಾ ಮಾಡಿಕೊಂಡ.

''ನಿನಗೇನು ನಷ್ಟ ಆಯಿತು ...?''

''ನನಗಲ್ಲ, ನಿನಗೆ... ನೀನೂ ಸುಮತಿ ಅಂದ್ರೆ ಬಾಯಿ ಬಾಯಿ ಬಿಡುತ್ತಿದ್ದೆ ಅಲ್ವಾ ?''

''ಆ ಕಾಲ ಹೋಯ್ತು. ನಾನು ಈಗ ಲಕ್ಷ್ಮಣ... ಸೀತಾದೇವಿಯವರ ಪಾದಗಳನ್ನು ಮಾತ್ರ ನೋಡಲು ನನಗೆ ಪರ್ಮಿಷನ್'' ಬಾಯಿ ತುಂಬಾ ನಕ್ಕ''

''ಯಾರೋ ಲಕ್ಷ್ಮಣ... ಯಾರು ಸೀತಾ ದೇವಿ... ಒಗಟೊಗಟಾಗಿ ಮಾತ್ನಾಡುವುದನ್ನು ಬಿಟ್ಟಿಲ್ಲ ನೀನಿನ್ನೂ...''

''ಹೇಗೆ ಬಿಡುಕ್ಕೆ ಆಗುತ್ತೆ ? ನಾನು ಹುಟ್ಟುವಾಗ ನೂರಾರು ವಿದೂಷಕರು ಅತ್ತಿದ್ದರಂತೆ.... ನಮ್ಮನ್ನೆಲ್ಲ ಮೀರಿಸುವ ಪ್ರಚಂಡ ಹುಟ್ಟಿಬಿಟ್ಟ ಅಂತ'' ಹರೀಶ ತನ್ನ ಜೋಕಿಗೆ ತಾನೇ ನಕ್ಕ. ಸಂಕೇತ ಹರೀಶನನ್ನು ಸಂಜ್ಞೆಯಿಂದ ಕರೆದ....

''ಇಷ್ಟು ಹೊತ್ತಾದ್ರೂ ಮಮ್ಮಿ ಮದುವೆ ಮಂಟಪಕ್ಕೆ ಬಂದೇ ಇಲ್ಲ, ಹೋಗಿ ಕರೆದುಕೊಂಡು ಬಾ... ಒಂದು ಗಳಿಗೆ ಇದ್ದ ಶಾಸ್ತ್ರ ಮಾಡಿ ಹೊರಟೇ ಹೋಗಿದಾಳೆ''

''ಅವರನ್ನು ಮನೆಗೆ ಹೋಗುಕ್ಕೆ ಬಿಡಬಾರದಾಗಿತ್ತು. ನೀನು''

''ಹೇಳಿದರೆ ಕೇಳಲಿಲ್ಲ. ಜಗ್ಗೂಗೋಸ್ಕರ ಹೋಗಿದಾಳೆ. ಊಟದ ಹೊತ್ತಿಗಾದರೂ ಬರಲಿ'' ನಾನು ಈಗಲೇ ಹೊರಟೆ ಅಂತ ಹೊರಟ. ಜಾನಕಿ ಮತ್ತೆ ಬರಲು ಒಪ್ಪಲಿಲ್ಲ. ಹರೀಶನಿಗೆ ಹೇಳಿದಳು

''ಮುಖ್ಯವಾಗಿ ಆಗಬೇಕಾದ ಕೆಲಸ, ನಿರ್ವಿಘ್ನವಾಗಿ ನೆರವೇರಿತಲ್ಲ. ಇನ್ನು ನಾನು ಅಲ್ಯಾಕೆ ? ಇಲ್ಲಿ ಜಗ್ಗುನ ಒಬ್ಬನನ್ನೇ ತುಂಬಾ ಹೊತ್ತು ಹೇಗೆ ಬಿಡೋದು ?''

''ರಾಜಮ್ಮ ಇರ್ತಾಳೆ. ನೀವು ಊಟದ ಹೊತ್ತಿಗೆ ಬನ್ನಿ. ಸಂಕೇತ ಹೇಳಿದಾನೆ''

''ನನಗೆ ಜಗ್ಗೂಗೆ ಆಗೋವಷ್ಟು ಊಟವನ್ನು ಇಲ್ಲಿಗೆ ಕಳಿಸಿ ಬಿಡೋಕ್ಕೆ ಹೇಳು. ಇಲ್ಲದಿದ್ದರೂ ಪರವಾಗಿಲ್ಲ ನಮ್ಮಿಬ್ಬರಿಗೆ ನಾನೇ ಬೇಯಿಸ್ತೀನಿ.''

''ನಿಮಗೆ ಸಂಕೇತನ ಮೇಲೆ ಕೋಪ ಯಾಕೆ ಆಂಟೀ...''

''ಸುಮತೀನ ನೋಡು,ಹೇಗಾಗಿದಾಳೆ ? ಇಂಥೋಳನ್ನ ಮದುವೆಯಾದರೆ ನಮ್ಮ ಸಂಕೇತ ಸುಖವಾಗಿರುತ್ತಾನಾ ? ನನಗೂ ಅವನು ಸುಖವಾಗಿರಲಿ ಅನ್ನೋ ಆಸೆ ಇದೆ ತಾನೇ ?''

''ಅವನು ಸುಖವಾಗಿರುತ್ತಾನೆ ಆಂಟಿ... ನೀವು ಚಿಂತಿಸಬೇಡಿ.''

''ಇಲ್ಲ ಹರೀಶ. ನಿನಗೇನೂ ಗೊತ್ತಿಲ್ಲಾ? ಅವನ ಜೀವನ ನರಕವಾಗಿ ಹೋಗುತ್ತೆ. ಇದರ ಬದಲು ಅವನು ಅಲ್ಲೇ ಯಾವೋಳಾದ್ರು ಇಂಗ್ಲೀಷ್‌ನೋಳ್ನ ಕಟ್ಟಿಕೊಂಡಿದ್ದರೂ ನನಗೆ ಇಷ್ಟು ವ್ಯಥೆಯಾಗುತ್ತಿರಲಿಲ್ಲ.''

ಸುಮತಿಯದೇನು ತಪ್ಪು ಎಂದು ಹರೀಶನಿಗೆ ಅರ್ಥವಾಗಲಿಲ್ಲ. ಬೆಪ್ಪನಂತೆ ನೋಡಿದ.

''ನಿಂಗೆ ಗೊತ್ತಿಲ್ಲದ್ದು ಏನಿದೆ ? ನಂಗ್ಯಾಕೋ ಸಂಕೇತ ದುಡುಕಿದ ಅಂತಲೇ ಅನ್ನಿಸ್ತಿದೆ... ಇವನಿಗೋ ಮೊದಲೇ ಜಗ್ಗೂನ ಕಂಡರೇ ಆಗುಲ್ಲ... ಈ ಮನೇಲಿ ಇನ್ನು ಏನೇನು ಹಗರಣಗಳಾಗಬೇಕೋ ?'' ಜಾನಕಿ ನಿಟ್ಟುಸಿರು ಬಿಟ್ಟಳು.

''ಅಂಥಾದ್ದೇನೂ ಆಗುಲ್ಲ, ನೀವು ಧೈರ್ಯವಾಗಿರಿ.'' ಆಶ್ವಾಸನೆ ತುಂಬಿದ.

''ಈ ಜಗ್ಗು ಹುಟ್ಟಿದಾಗಲೇ ನನ್ನ ಧೈರ್ಯ ಸ್ಥೈರ್ಯ ಎಲ್ಲಾ ಹೊರಟು ಹೋಯಿತು. ನನ್ನ ಪುರಾಣ ಈಗ್ಯಾಕೆ ? ನೀನು ಹೋಗು. ನಿನ್ನ ಸ್ನೇಹಿತ ಕಾಯ್ತಾ ಇರ್ತಾನೆ. ನಮ್ಮಿಬ್ಬರಿಗೆ ಇಲ್ಲಿಗೇ ಊಟವನ್ನು ಕಳಿಸು.'' ಹರೀಶ ಹೊರಟು ಹೋಗಿದ್ದ. ಅವನ ಜೊತೆ ಮಮ್ಮಿ ಬರಲಿಲ್ಲವೆಂದು ತಿಳಿದಾಗ ಸಂಕೇತನಿಗೆ ಬೇಸರವಾಗಿತ್ತು.

ಮಮ್ಮಿ ಈ ಹೊಸ ನಾಟಕವನ್ನೇಕೆ ಆಡುತ್ತಿದ್ದಾಳೆ ? ಯಾವುದೋ ಸಿಟ್ಟಿಗೆ ಸುಮತಿಯನ್ನು ಗೋಳು ಹೊಯ್ದುಕೊಂಡರೆ ? ಎಂದುಕೊಂಡ. ಆದರೆ ಸುಮತಿಯ ತಂದೆ ತಾಯಿ ತಾವುಗಳೇ

ಹೋಗಿ ಬಲವಂತವಾಗಿ ಜಾನಕಿಯನ್ನು ಕರೆದುಕೊಂಡು ಬಂದು, ಭಾರಿ ಸೀರೆಯನ್ನು ಉಡುಗೊರೆಯನ್ನಾಗಿ ಕೊಟ್ಟರು.

''ನನ್ನ ಹತ್ತಿರವೇ ಬೇಕಾದಷ್ಟು ಸೀರೆಗಳಿವೆ. ಅದನ್ನೇ ಉಡುಲ್ಲ. ಇಷ್ಟು ಭಾರಿ ಸೀರೆಗಾಗಿ ಯಾಕೆ ಖರ್ಚು ಮಾಡಿದಿರಿ ? ಇಬ್ಬಿಬ್ಬರು ಹೆಣ್ಣು ಮಕ್ಕಳಿಗೆ ಒಟ್ಟೊಟ್ಟಿಗೆ ಮದುವೆ ಮಾಡುತ್ತಿದೀರಿ... ಖರ್ಚೇ ಬೇಕಾದಷ್ಟಿರುತ್ತದೆ. ಈ ಮಾತಿಗೆ ಯಾರೂ ಏನೂ ಹೇಳಲಿಲ್ಲ, ಸಂಕೇತ ಅಸಹ್ಯಗೊಂಡ. ಮಮ್ಮಿಗೆ ಜಂಭ, ಸುಮ್ಮನೇ ಉಡುಗೊರೆಯನ್ನು ತೆಗೆದುಕೊಳ್ಳದೇ, ಹೀಗೇಕೆ ಮಾತನಾಡುತ್ತಿದ್ದಾಳೆ ಎಂದುಬೇಸರಿಸಿದೆ.

''ಏನೋ ನಮ್ಮ ಹಣೇಬರಹ ಚೆನ್ನಾಗಿತ್ತು. ಸುಮತಿ ನಿಮ್ಮ ಮನೆಗೇ ಸೊಸೆಯಾಗಿ ಬರುತ್ತಿದಾಳೆ. ಅವಳದ್ದೇನೂ ತಪ್ಪಿಲ್ಲ. ಆದರೂ ತಿಳಿಯದೇ ಅವಳಿಂದ ಏನಾದರೂ ಅಚಾತುರ್ಯ ನಡೆದಿದ್ದರೆ, ಅವಳ ಪರವಾಗಿ ನಾವು ಕ್ಷಮೆ ಕೇಳ್ತೀನಿ'' ಸುಮತಿಯ ತಂದೆ ಕೈ ಮುಗಿದು ಹೇಳಿದಾಗ ಸಂಕೇತ ಕೆಟ್ಟ ಮುಖ ಮಾಡಿದ. ಸುಮತಿ ತಲೆ ತಗ್ಗಿಸಿದಳು.

''ಈಗಿನ ಕಾಲದ ಹುಡುಗಿಯರು ಧೈರ್ಯಶಾಲಿಗಳು. ಏನೇ ಕಷ್ಟ ಬಂದರೂ ಅದನ್ನು ಎದುರಿಸುವ ಶಕ್ತಿ ಅವರಿಗಿರುತ್ತದೆ. ಸುಮತಿಯನ್ನು ಸಂಕೇತ ಚೆನ್ನಾಗಿ ನೋಡಿಕೊಳ್ತಾನೆ. ನಿಮಗೆ ಯಾವ ಸಂಶಯವೂ ಬೇಡ'' ಎಂದಳು. ಅವಳ ಅಂತರಂಗದಲ್ಲಿ ಏನಿದೆ ಅಂತ ಯಾರಿಗೂ ಅರ್ಥವಾಗಲಿಲ್ಲ.

ಆ ರಾತ್ರಿ ರಿಸೆಪ್ಶನ್ ನಂತರ, ಸುಮತಿಯನ್ನು ಸಾಂಪ್ರದಾಯಿಕವಾಗಿ, ಅತ್ತೆಯ ಮನೆಗೆ ಕರೆತಂದು ಬಿಟ್ಟರು. ಜಾನಕಿ ಬಂದವರಿಗೆಲ್ಲ ಫಲ ತಾಂಬೂಲ, ಉಡುಗೊರೆಗಳನ್ನು ಸುಮತಿಯ ಕೈಯಲ್ಲೇ ಕೊಡಿಸಿದಳು. ಎಲ್ಲರೂ ವಾಪಸ್ಸು ಹೊರಟು ಹೋದ ಮೇಲೆ ''ಈಗ ಹೋಗಿ ಮಲಗಿ, ಹೊತ್ತಾಗಿದೆ ಬೆಳಿಗ್ಗೆ ಸ್ವಲ್ಪ ಮಾತನಾಡುವುದಿದೆ'' ಎಂದಳು. ಸಂಕೇತ ಅನುಮಾನದಿಂದ ತಾಯಿಯನ್ನೇ ನೋಡಿದ.

''ಬೆಳಗ್ಗಿಂದ ನಿನಗೂ ಆಯಾಸವಾಗಿದೆ. ಹೋಗಿ ನಿದ್ದೆ ಮಾಡು... ಬೆಳಿಗ್ಗೆ ಇಬ್ಬರ ಹತ್ತಿರವೂ ಮಾತ್ನಾಡಬೇಕು'' ಎಂದು ಮತ್ತೆ ನುಡಿದಳು. ಸಂಕೇತ, ಸುಮತಿಯ ಕೈಹಿಡಿದು ಮೇಲೆ ಕರೆದುಕೊಂಡು ಹೋದ ಜಾನಕಿ ಕೆಳಗಿನ ದೀಪಗಳನ್ನೆಲ್ಲಾ ಆರಿಸಿ ಮಲಗಿದಳು.

''ಸುಮತೀ ನಿನಗೂ ಆಯಾಸವಾಗಿದೆ. ಮಲಕ್ಕೋ... ನಾನು ಆ ರೂಮಿನಲ್ಲಿ ಮಲಗ್ತೀನಿ ಅಂತ, ಹೇಳಿ ಅವಳ ತಲೆಯ ಬಳಿ ಬಾಗಿ, ಹಣೆಯ ಮೇಲೆ ಒಂದು ಹೂ ಮುತ್ತನಿತ್ತು 'ಗುಡ್‌ನೈಟ್' ಎಂದ. ಅವಳು ಅವನ ಕೈ ಹಿಡಿದಳು. ಕೈ ನಡಗುತ್ತಿತ್ತು. ''ಐ ಆಮ್ ಸಾರಿ... ಸಂಕೇತ್'' ಎಂದಳು.

''ಇಟ್ಸಾಲ್ ರೈಟ್... ನನಗೆ ಯಾವ ಆಕ್ಷೇಪಣೆಯೂ ಇಲ್ಲ. ನಿನ್ನ ಹೆಲ್ತ್ ಮುಖ್ಯ... ಎಂದು ಹೇಳಿ ಅವಳಿಗೆ ಹೊದಿಕೆಯನ್ನು ಹೊದೆಸಿ ತನ್ನ ರೂಮಿಗೆ ಬಂದ. ಹಾಸಿಗೆ ಮೇಲೆ

ಉರುಳಿದರೆ ಸಾಕೆನ್ನಿಸಿತ್ತು. ಸುಮತಿ ತನ್ನನ್ನೇನು ಕರೆಯುವುದಿಲ್ಲ ಎಂದು ತಿಳಿದಿದ್ದರೂ... ಏನೋ ಹಂಬಲ. ಆದರೆ, ತಾನು ಅವಳ ಇಚ್ಛೆಗೆ ವಿರುದ್ಧವಾಗಿ ಬಲವಂತ ಮಾತ್ರ ಮಾಡುವುದಿಲ್ಲವೆಂದು ತನ್ನಲ್ಲೇ ನಿರ್ಧರಿಸಿದ್ದ. ಕೆಲವು ತಿಂಗಳುಗಳ ಹಿಂದೆ ಸುಚಿತ್ರಳ ಮದುವೆಯ ರಾತ್ರಿ ನೆನಪಾಗಿತ್ತು... ಆ ದಿನಕ್ಕೂ ಈ ದಿನಕ್ಕೂ ಎಷ್ಟು ಅಂತರ ! ಆ ದಿನ ನನ್ನ ಮನದನ್ನೆಯಾಗಿ ನನ್ನ ಮೈಮನವನ್ನು ತುಂಬಿದ್ದಳು. ಆದರೆ ಈ ದಿನ ! ನನ್ನ ಮಡದಿಯಾಗಿಯೂ ನನ್ನಿಂದ ದೂರ ಮೌನವಾಗಿ ಮಲಗಿದಾಳೆ. ಆ ದಿನಕ್ಕೇ ಹಿಂತಿರುಗಿ ಹೋಗುವಂತಿದ್ದರೇ... ಸ್ವರ್ಗಕ್ಕೆ ಕಿಚ್ಚು ಹಚ್ಚಬಹುದಾಗಿತ್ತು. ಈದಿನ ಹತ್ತಿರುವ ಕಿಚ್ಚೇ ಬೇರೆ... ಆದಷ್ಟು ಬೇಗ ಈ ಕಿಚ್ಚನ್ನು ಆರಿಸಬೇಕು... ಇಲ್ಲದಿದ್ದರೆ, ನಾವಿಬ್ಬರೂ ಹೀಗೇ ದೂರ ದೂರವಾಗಿಯೇ ಉಳಿದು ಬಿಡುತ್ತೇವೆ ಅಂತಂದುಕೊಂಡಾಗ ಅವನ ಕಣ್ಣಂಚಿನಲ್ಲಿ ನೀರ ಹನಿ ಜಿನುಗಿತ್ತು ಸುಮತಿಯೂ ಅಳುತ್ತಿರಬಹುದೇ... ತಾನು ಹೋಗಿ ಸಮಾಧಾನ ಹೇಳಲೇ ಅಂತಂದುಕೊಂಡರೂ, ಎದ್ದು ಹೋಗಲಿಲ್ಲ.

ಸುಮತಿ ನಿರಾಳವಾಗಿ ಮಲಗಿದಳು. ಸಂಕೇತ ಯಾವ ರೀತಿಯಿಂದಲೂ ಬಲವಂತ ಮಾಡುವುದಿಲ್ಲ ಎಂದು ಧೈರ್ಯವಿತ್ತು. ಆದರೆ, ಅವನಿಗೆ ಏನೇನು ಆಸೆಗಳಿದ್ದವೋ ಅದಕ್ಕೆ ತಾನು ತಣ್ಣೀರು ಎರಚಿದಂತಾಯ್ತು. ಆದರೆ ನಾನೇನು ಮಾಡಲಿ ? ಅಪವಿತ್ರವಾಗಿರುವ ಈ ದೇಹವನ್ನು ಸಂಕೇತನಿಗೆ ಹೇಗೆ ಒಪ್ಪಿಸಲಿ ? ಇದು ನನ್ನಿಂದಾಗದು. ಆ ದಿನ ತಾನು ಸಂಕೇತನನ್ನು ಸರಿಯಾಗಿ ಮಾತು ಸಹ ಆಡಿಸದಿದ್ದವಳು, ಅವನ ಪ್ರೀತಿಯಲ್ಲಿ ಮುಳುಗಿ ಹೋಗಿದ್ದೆ ಈ ದಿನ, ಅವನ ಮಡದಿಯಾಗಿ, ಅವನ ಆಸೆಗಳನ್ನು ಪೂರೈಸಲು ಶಕ್ತಳಾಗಿಲ್ಲ... ಇದೆಂತಹ ಸ್ಥಿತಿ ? ಅವಳ ಕಣ್ಣುಗಳಿಂದ ನೀರು ಹರಿದಿತ್ತು. ಈಗಲೇ ಹೋಗಿ ಸಂಕೇತನ ಎದೆಯಲ್ಲಿ ಮುಖ ಮುಚ್ಚಿ ಅತ್ತು ಹೃದಯವನ್ನು ಹಗುರ ಮಾಡಿಕೊಳ್ಳಲೇ ಎಂದುಕೊಂಡರೂ, ಎದ್ದು ಹೋಗಲಿಲ್ಲ.

ಬೆಳಿಗ್ಗೆ ಸಂಕೇತ ಎದ್ದು ಬರುವುದನ್ನೇ ಕಾದಿದ್ದವಳಂತೆ ಜಾನಕಿ ಮಗನಿಗೆ ಕಾಫಿ ಕೊಟ್ಟು ನಂತರ ಮಾತಿಗೆ ಪ್ರಾರಂಭಿಸಿದಳು.

"ನಿನ್ನ ಮದುವೆ ನಿನ್ನ ಇಷ್ಟದಂತೆ, ಸುಮತಿಯೊಡನೆಯೇ ನೆರವೇರಿದೆ. ಈಗ ಅವಳು ನಿನ್ನ ಪತ್ನಿ. ನಿನ್ನ ಮಾತಿಗೆ ಅವಳು ಇಲ್ಲ ಎನ್ನುವುದಿಲ್ಲ. ನೀನು ಇವತ್ತೇ ಡಾಕ್ಟರ ಹತ್ತಿರ ಅಪಾಯಿಂಟ್‌ಮೆಂಟ್ ತಗೋ..."

"ಯಾತಕ್ಕೇ..." ಏನೂ ಅರ್ಥವಾಗದವನಂತೆ ಕೇಳಿದ.

"ಅಬಾರ್ಷನ್ ಮಾಡಿಸುಕ್ಕೆ..." ಸಂಕೇತ ಸಿಡಿದೆದ್ದ ದುರು ದುರು ತಾಯಿಯನ್ನೇ ನೋಡಿದ.

"ಅವತ್ತೇ ಡಿಸೈಡ್ ಮಾಡಿಯಾಗಿತ್ತು. ಅಬಾರ್ಷನ್ ಮಾತೇ ಇಲ್ಲ, ಸುಮತಿ ಈ ಮಗುವಿಗೆ ಜನ್ಮ ಕೊಡ್ತಾಳೆ."

"ನನ್ನ ಮಾತು ಕೇಳು ಸಂಕೇತ... ಆ ಮಗು ಸರಿಯಾಗಿ ಹುಟ್ಟುಲ್ಲ... ಸರಿಯಾಗಿ ಬೆಳೆಯುಲ್ಲ... ನನಗೆ ಗೊತ್ತು"

"ಛೆ... ಇಂಥ ಮಾತನ್ನೆಲ್ಲ ಆಡಬೇಡ ಅದು ನಿನ್ನ ಮೊಮ್ಮಗು. ಮೊಮ್ಮಗು ಚೆನ್ನಾಗಿರಲಿ, ಚೆನ್ನಾಗಿ ಬೆಳೆಯಲಿ ಅನ್ನೋ ಆಸೆ ಬೇಡ್ವಾ ? ಇಷ್ಟು ಕೆಟ್ಟ ಬುದ್ಧಿ ಇದೆ ನಿನಗೆ ಅಂತ ತಿಳಿದಿರಲಿಲ್ಲ ನಾನು..."

"ನನ್ನ ಮಾತನ್ನು ಯಾವಾಗ್ಲೂ ಅಪಾರ್ಥಾನೇ ಮಾಡಿಕೊಳ್ತೀಯ. ಜಗ್ಗುವಿನ ಅತ್ಯಾಚಾರಕ್ಕೆ ಹುಟ್ಟುತ್ತಿರುವ ಮಗು ಅದು..." ಕೆಳದನಿಯಲ್ಲಿ ಹೇಳಿದಳು ಸಂಕೇತ ಕೆಟ್ಟ ಮುಖ ಮಾಡಿದ. ಈಗ ಈ ಮಗು ತನ್ನದೇ ಅಂತ ಹೇಳಿದರೆ, ಮದುವೆಗೆ ಮುಂಚಿನ ಸಂಬಂಧದ ಬಗ್ಗೆ ತಿಳಿಯುತ್ತೆ. ಅದು ತಿಳಿಯಕೂಡದು. ಈಗ ಏನು ಹೇಳುವುದು ? ಎಂದು ಯೋಚಿಸುತ್ತಿದ್ದ ಅಷ್ಟರಲ್ಲಿ ಸುಮತಿ ಕೆಳಗಿಳಿದು ಬಂದಳು. ಅವಳು ಅವರಿಬ್ಬರ ಸಂಭಾಷಣೆಗಳನ್ನು ಕೇಳಿಸಿಕೊಂಡಿದ್ದಳು.

"ಪ್ಲೀಸ್ ಆಂಟಿ, ಮತ್ತೆ ಬಲವಂತ ಮಾಡಬೇಡಿ. ಈ ಮಗು ನನ್ನದು, ಮಗು ಹೆಲ್ತಿಯಾಗಿ ಹುಟ್ಟುತ್ತದೆ ಎಂಬ ನಂಬಿಕೆ ನನಗಿದೆ." ಎಂದಳು.

"ಆ ನಂಬಿಕೆ ನನಗಿಲ್ಲ ಸುಮತಿ ನಿನ್ನ ಒಳ್ಳೆಯದಕ್ಕೇ ಹೇಳ್ತಿದೀನಿ. ಜಗ್ಗುವಿನ ಕಾಮಕ್ಕೆ ಹುಟ್ಟುವ ಮಗು ಹೇಗೆ ಹೆಲ್ತಿಯಾಗಿರಲು ಸಾಧ್ಯ ?"

"ಮಮ್ಮೀ... ನಾವಿಬ್ಬರೂ ಅದನ್ನೆಲ್ಲ ಮರೆತು ಹೊಸ ಬಾಳನ್ನು ಪ್ರಾರಂಭಿಸುತ್ತಿದ್ದೇವೆ. ನೀನು ಮತ್ತೆ ಮತ್ತೆ ಆ ಘಟನೆಯನ್ನು ನೆನಪಿಸಬೇಡ."

"ಆ ಮಗೂನ ಹೊಟ್ಟೇಲಿಟ್ಟುಕೊಂಡು ನಡೆದದ್ದನ್ನು ಹೇಗೆ ಮರೀತೀಯ ? ನೀವೇ ಕೈಯಾರೆ ಆ ಮಗುವನ್ನು ಬೆಳೆಸುವಾಗ ಹೇಗೆ ಮರೀತೀರಿ ?"

"ಮರೆಯುಕ್ಕೆ ಪ್ರಯತ್ನ ಪಡ್ತೀನಿ. ನೀನು ನಮ್ಮಿಬ್ಬರ ಜೀವನದ ಮಧ್ಯೆ ಬರಬೇಡ... ಮತ್ತೆ ಮತ್ತೆ ನೀನು ಹೀಗೇ ಮಾತನಾಡಿದರೆ, ನಾನು ಜಗ್ಗೂನ ಕೊಂದು ಹಾಕಿಬಿಡ್ತೀನಿ. ಕಣ್ಣೆದುರಿಗೆ ಅವನು ಇದ್ದರೆ, ನಾವು ಏನನ್ನು ಮರೆಯುಕ್ಕೆ ಬಿಡುಲ್ಲ ನೀನು..." ಜಾನಕಿ ತಣ್ಣಗಾದಳು.

"ನಿನಗೆ ಜಗ್ಗು ಮೇಲೆ ಎಂದು ಪ್ರೀತಿ ಇತ್ತು ? ನಿನ್ನ ಭಾಗಕ್ಕೆ ಅವನು ಎಂದೂ ಬದುಕಿರಲಿಲ್ಲ... ಈಗೇನು ಹೊಸದಾಗಿ ಕೊಲ್ಲೋದು ?" ಸುಮತಿ ಮಧ್ಯೆ ಬಂದಳು.

"ಪ್ಲೀಸ್ ಸಂಕೇತ್. ಹೀಗೆಲ್ಲಾ ಮಾತನಾಡಬೇಡಿ..."

"ಅದೆಲ್ಲಾ ಮಮ್ಮಿಗೆಲ್ಲಿ ಅರ್ಥವಾಗುತ್ತೆ ? ಮನೆಯ ವಾತಾವರಣ ಚೆನ್ನಾಗಿರಬೇಕು. ಮನೆಯವರು ಆಡುವ ಮಾತುಗಳು ಕಿವಿಗಿಂಪಾಗಿರಬೇಕು. ಮನೆಯಲ್ಲಿ ಯಾವಾಗಲೂ

ಒಳ್ಳೆಯ ಮಾತುಗಳನ್ನೇ ಆಡಬೇಕು... ಇದ್ನೆಲ್ಲಾ ಪ್ರೆಗ್ನೆಂಟ್ ಇರುವ ಮನೆಯಲ್ಲಿ ಫಾಲೋ ಮಾಡಬೇಕು...'' ವ್ಯಂಗ್ಯವಾಗಿ ನುಡಿದ.

''ನೀನು ನನಗೆ ಉಪದೇಶ ಹೇಳಬೇಕಾಗಿಲ್ಲ ಸಂಕೂ... ಏನಾದ್ರೂ ಮಾಡ್ಕೊಳ್ಳಿ. ನಾನು ಹೇಳೋದು ಹೇಳಿದೀನಿ... ಇಷ್ಟರ ಮೇಲೆ ನಿಮ್ಮಿಷ್ಟ ಮುಂದೆ ಅನುಭವಿಸೋರು ನೀವೇ, ನಾನು ಇನ್ನೆಷ್ಟು ವರ್ಷ ಬದುಕಿರ್ತೀನಿ ?''ಜಾನಕಿ ಕೋಪಿಸಿಕೊಂಡು ತನ್ನ ರೂಮಿಗೆ ಹೊರಟು ಹೋಗಿದ್ದಳು. ಸುಮತಿಗೆ ವ್ಯಥೆಯಾಗಿತ್ತು. ಆಂಟಿ ಕೋಪಿಸಿಕೊಂಡರೆ ತನಗೇ ಕಷ್ಟ ಎಂದುಕೊಂಡು ರೂಮಿನ ಬಾಗಿಲ ಬಳಿ ಬಂದಳು.

''ಆಂಟೀ, ನಾನು ಡಾಕ್ಟರ ಹತ್ತಿರ ಹೋಗಲು ರೆಡಿಯಾಗಿದೀನಿ. ಪ್ಲೀಸ್ ನೀವೇ ನನ್ನ ಜೊತೆಗೆ ಬರಬೇಕು'' ಜಾನಕಿ ಹೊರಬರಲಿಲ್ಲ. ಸುಮತಿ ತಾನೇ ಕಾಫಿಯನ್ನು ತಯಾರಿಸಿ, ಎಲ್ಲರಿಗೂ ಕೊಟ್ಟಳು. ಆಂಟಿಗೂ ಕಾಫಿಯನ್ನು ಕೊಟ್ಟಳು. ಜಗ್ಗು ಎದ್ದಿರಲಿಲ್ಲ.

''ಸ್ವಲ್ಪ ಹೊರಗೆ ಬರ್ತೀರಾ ಆಂಟೀ... ಇಲ್ಲಿ ಜಗ್ಗು ಎದುರಿಗೆ ಬೇಡ. ನಾನು ಸ್ವಲ್ಪ ಮಾತನಾಡಬೇಕು.''

''ನನ್ನ ಮಾತಿಗೆ ಒಪ್ಪೋದಾದ್ರೆ ನಾನು ನಿನ್ನ ಹತ್ತಿರ ಮಾತನಾಡ್ತೀನಿ.''

''ಆಗಲಿ. ನಾನು ಡಾಕ್ಟರ ಬಳಿಗೆ ನಿಮ್ಮ ಜೊತೆ ಬರ್ತೀನಿ. ನೀವೇ ಮಾತ್ನಾಡಿ. ಸಂಕೇತ್‌ಗೆ ಏನು ಗೊತ್ತಾಗುತ್ತೆ ?''

''ನಾನು ಹೇಗೆ ಬರಲಿ ? ಜಗ್ಗೂನ ಯಾರು ನೋಡ್ಕೋತಾರೆ ?''

ಒಂದು ದಿನ ಹೇಗೋ ಅಡ್ಜಸ್ಟ್ ಮಾಡಿಕೊಂಡರಾಯ್ತು... ಸಂಕೇತ್ ಮನೇಲಿರ್ತಾರೆ.''

''ಯಾರು ? ಸಂಕೇತನಾ ? ಜಗ್ಗೂನ ಶತ್ರು ಅಂತ ತಿಳಿದುಕೊಂಡಿದಾನೆ... ಈಗ್ತಾನೇ ಕೇಳಿದ್ಯಲ್ಲಾ ಕೊಂದು ಹಾಕಿ ಬಿಡ್ತೀನಿ ಅಂತ ಅಂದ... ನಾವಿಬ್ರೂ ವಾಪಸ್ಸು ಬರೋ ಹೊತ್ತಿಗೆ ಜಗ್ಗೂ ಬದುಕಿರ್ತಾನೆ ಅಂತ ಏನು ಗ್ಯಾರಂಟಿ ?''

''ಸುಮ್ಮನೇ ಹಾಗೆ ಕೋಪಕ್ಕೆ ಹಾಗೆ ಅಂದಿದಾರೆ... ಸಂಕೇತ ಅಷ್ಟು ಕೆಟ್ಟವರಲ್ಲ.''

''ಸಂಕೇತನ್ನ ನಾನು ಅವನು ಹುಟ್ಟಿದಾಗ್ನಿಂದ ಕಂಡಿದೀನಿ... ನೀನು ? ಇನ್ನು ನೆನ್ನೆ ಅವನ ಪತ್ನಿಯಾಗಿದೀಯ... ನಿನಗೂ ಒಂದೊಂದಾಗಿ ಅರ್ಥವಾಗುತ್ತೆ.''

''ಸುಮತೀ... ಸುಮತೀ...'' ಸಂಕೇತ ಹೊರಗೆ ಗೇಟಿನ ಬಳಿ ನಿಂತಿದ್ದವನು ಕರೆದ.

''ಹೋಗು... ಅವನು ಕರೀತಿದಾನೆ ನೋಡು'' ಸರ‍್ರನೆ ತಿರುಗಿದ ಸುಮತಿ, ಹಾಗೇ ತಲೆ ತಿರುಗಿ ಬಿದ್ದು ಬಿಟ್ಟಳು... ಸುಮತೀ... ಸುಮತೀ... ಏನಾಯ್ತು ? ಜಾನಕಿ ಗಾಬರಿಯಿಂದ ಕಿರುಚಿದಳು. ಸಂಕೇತ ಬಾರೋ... ಸುಮತಿ ಬಿದ್ದು ಬಿಟ್ಟಿದಾಳೆ. ಸಂಕೇತನೂ ಗಾಬರಿಯಿಂದ

ಒಳಕ್ಕೆ ಓಡಿ ಬಂದ.

"ಡಾಕ್ಟರಿಗೆ ಫೋನು ಮಾಡು..." ಅವಸರಿಸಿದಳು. ಸಂಕೇತ ಡೈರೆಕ್ಟರಿಯಲ್ಲಿ ಹುಡುಕಿ ಒಬ್ಬ ಲೇಡಿ ಡಾಕ್ಟರಿಗೆ ಫೋನು ಮಾಡಿದ. ಅಷ್ಟರಲ್ಲಿ ಜಾನಕಿ ಸುಮತಿಯ ಮುಖಕ್ಕೆ ನೀರನ್ನು ಚುಮುಕಿಸಿದಳು. ಸುಮತಿ ಎದ್ದುಕೂತಳು. ಸಂಕೇತ ಅವಳ ಬಳಿಗೆ ಬಂದು ಕೂತ.

"ಆಯಾಸ ಮಾಡ್ಕೋ ಬೇಡ ಅಂತ ಹೇಳಿದ್ರೆ ನೀನು ಕೇಳುಲ್ಲ... ಅಷ್ಟೊಂದು ಮಾತನ್ಯಾಕೆ ಆಡಬೇಕಾಗಿತ್ತು... ಮಮ್ಮೀ ಇವಳಿಗೆ ಬಿಸಿ ಬಿಸಿಯಾಗಿ ಏನನ್ನಾದರೂ ಕುಡಿಯೋಕೆ ಕೊಡು... ಇನ್ನೇನು ಡಾಕ್ಟರು ಬರಬಹುದು..."

"ಯಾವ ಡಾಕ್ಟರಿಗೆ ಫೋನು ಮಾಡಿದೆ ? ಎನ್ನುತ್ತಾ ಅಡಿಗೆ ಮನೆಯಿಂದ ಬಿಸಿಯಾದ ಹಾಲಿಗೆ ಸಕ್ಕರೆಯನ್ನು ಹಾಕಿಕೊಂಡು ತಂದು ಸ್ವಲ್ಪ ಸ್ವಲ್ಪವಾಗಿ ಕುಡಿಸಿದಳು. ಅಷ್ಟರಲ್ಲಿ ಮನೆಯ ಮುಂದೆ ಕಾರು ನಿಂತ ಸದ್ದು ಕೇಳಿಸಿತು... ಸಂಕೇತ ಹೊರಬಂದ. ಡಾಕ್ಟರು ಬಂದಿದ್ದಳು. ಒಳ ಬಂದು ಸುಮತಿಯನ್ನು ಪರೀಕ್ಷಿಸಿದಳು...

"ಏನೂ ಭಯ ಪಡಬೇಡಿ. ಸ್ವಲ್ಪ ವೀಕ್ನೆಸ್ ಇದೆ. ಟ್ಯಾಬ್ಲೆಟ್ ಬರೆದು ಕೊಡ್ತೀನಿ. ಒಂದೆರಡು ತಿಂಗಳು ತಗೊಳ್ಳಿ ಎಲ್ಲಾ ಸರಿಹೋಗುತ್ತದೆ." ಸಂಕೇತ ತಕ್ಷಣವೇ ಹತ್ತಿರದಲ್ಲಿದ್ದ ಮೆಡಿಕಲ್ ಸ್ಟೋರ್ಸ್‌ಗೆ ಹೋದ. ಅವನು ಅತ್ತ ಹೋದ ಕೂಡಲೇ ಜಾನಕಿ ಡಾಕ್ಟರನ್ನು ಕೇಳಿದಳು.

"ಸುಮತಿಗೆ ಈಗಲೇ ಮಗುವಾಗುವುದು ಬೇಡ. ಅಬಾರ್ಷನ್ ಮಾಡಿಸಬೇಕು ಅಂತ ಡಿಸೈಡ್ ಮಾಡಿದೀನಿ."

"ಯಾಕೆ ? ಏನೂ ಪ್ರಾಬ್ಲಂ ಕಾಣುತ್ತಿಲ್ಲವಲ್ಲ."

"ಇವಳು ಪ್ರೆಗ್ನಂಟ್ ಆದಾಗಿನಿಂದ ಇವಳಿಗೆ ಹುಶಾರೇ ಇಲ್ಲ, ಒಂದಲ್ಲ ಒಂದು ಖಾಯಿಲೆಯಿಂದ ನರಳಿದಾಳೆ. ನೋಡಿ ಹೇಗಾಗಿದಾಳೆ ? ಮೊದಲು ಇವಳು ಹೀಗಿರಲಿಲ್ಲ... ಏನೇನೋ ಔಷಧ ತಗೊಂಡಿದಾಳೆ. ಅದರ ಪರಿಣಾಮ ಮಗುವಿನ ಮೇಲೆ ಖಂಡಿತಾ ಬಿದ್ದಿರುತ್ತೆ. ಪೆಶ್ತಿ ಮಗು ಹುಟ್ಟದಿದ್ದರೆ, ಲೈಫ್‌ಲಾಂಗ್ ಕಷ್ಟಪಡಬೇಕಾಗುತ್ತದೆ. ಅದಕ್ಕೇ... ಅಬಾರ್ಷನ್ ಮಾಡಿಸಿ ಬಿಡೋಣ ಅಂತ..."

"ಹೌದಾ, ಸುಮತೀ... ನಿಮಗೇನನ್ನಿಸುತ್ತೆ ?" ಡಾಕ್ಟರು ಪ್ರಶ್ನಿಸಿದಳು.

"ಅವಳಿಗೇನು ಗೊತ್ತಾಗುತ್ತೆ ? ಅವಳು ಹೆದರಿ ಬಿಟ್ಟಿದಾಳೆ."

"ಹೆದರಿಕೆ ಯಾಕೆ ? ಸ್ಕ್ರೀನಿಂಗ್ ಟೆಸ್ಟ್ ಮಾಡಿಸಿ, ಬೇಬಿಯ ಡೆವೆಲಪ್‌ಮೆಂಟ್ ನಾರ್ಮಲ್ಲೀ ಎಲ್ಲಾ ಗೊತ್ತಾಗುತ್ತೆ. ಹಾಗೇ ಬ್ಲಡ್‌ಟೆಸ್ಟ್, ಸ್ಕ್ಯಾನಿಂಗ್ ರಿಪೋರ್ಟ್ ಎಲ್ಲಾ ಸರಿಯಾಗಿಲ್ಲದಿದ್ದರೇ, ಆಮೇಲೆ ನೋಡೋಣ. ಏಕದಂ ಹಾಗೆ ಡಿಸಿಷನ್ ತಗೋಳ್ಳೋಕೆ ಆಗುಲ್ಲ.

ಅದು ಸರಿಯಲ್ಲ. ನಾನು ಲೆಟರ್ ಬರೆದು ಕೊಡ್ತೀನಿ... ಎಂದು, ಹೇಳಿ ಒಂದು ರೆಫರೆನ್ಸ್ ಲೆಟರನ್ನು ಬರೆದುಕೊಟ್ಟು, ಒಂದು ನರ್ಸಿಂಗ್ ಹೋಂಗೆ ಹೋಗಿ ಟೆಸ್ಟ್ ಮಾಡಿಸಿಕೊಳ್ಳುವಂತೆ ಸಲಹೆ ನೀಡಿದಳು. ಅಷ್ಟರಲ್ಲಿ ಸಂಕೇತ ಮೆಡಿಕಲ್ ಸ್ಟೋರ್ಸ್‌ನಿಂದ ವಾಪಸ್ಸಾಗಿದ್ದ. ಮತ್ತೊಮ್ಮೆ ಡಾಕ್ಟರು ಜಾನಕಿಗೆ ಹೇಳಿದ್ದನ್ನೇ ಹೇಳಿದಾಗ, ಸಂಕೇತ ಸುಮತಿಯ ಕಡೆ ನೋಡಿ ಕಿರುನಗೆ ನಕ್ಕ...

ಮಾರನೇ ದಿನಕ್ಕೆ ಸಂಕೇತ ನರ್ಸಿಂಗ್ ಹೋಂನಲ್ಲಿ ಅಪಾಯಿಂಟ್‌ಮೆಂಟ್ ತೆಗೆದುಕೊಂಡ...'' ನನಗೆ ಇದೆಲ್ಲಾ ಗೊತ್ತಾಗುಲ್ಲ. ನೀನೇ ಸುಮತಿಯ ಜೊತೆ ಹೋಗು.'' ತಾಯಿಗೆ ಆದೇಶ ನೀಡಿದ.

''ನಾನು ಹೋಗುಕ್ಕಾಗುಲ್ಲ...''

''ಯಾಕೆ ಹೋಗುಲ್ಲ ? ಜಗ್ಗೂಗೋಸ್ಕರ ತಾನೇ... ನಾನು ಮನೇಲಿರ್ತೀನಿ. ನೀವು ಹೋಗಿ ಬನ್ನಿ.'' ಜಾನಕಿ ಅವನ ಮಾತನ್ನು ನಂಬದವಳಂತೆ, ಕಣ್ಣು ಕಣ್ಣು ಬಿಟ್ಟಳು. ಸುಮತಿಯೂ ಅಚ್ಚರಿಗೊಂಡಿದ್ದಳು.

''ಇಬ್ಬರೂ ಆಶ್ಚರ್ಯಪಡಬೇಕಾಗಿಲ್ಲ. ನಾನು ಜಗ್ಗೂನ ಕೊಲ್ಲುವುದೂ ಇಲ್ಲ. ಅವನ ಹತ್ತಿರ ಮಾತನ್ನು ಆಡುವುದಿಲ್ಲ. ಇಪ್ಪತ್ನಾಲ್ಕು ವರ್ಷಗಳಿಂದ ಅವನನ್ನು ಸಹಿಸಿಕೊಂಡು ಬಂದಿದೀನಿ. ಈಗ ನಾನು ಸೆಟ್ಲ್ ಆಗುತ್ತಿರುವಾಗ, ನಾನೇಕೆ ಅವನ ಬಗ್ಗೆ ತಲೆ ಕೆಡಿಸಿಕೊಳ್ಳಲಿ ? ನಿನಗೆ ನಂಬಿಕೆ ಇಲ್ಲದಿದ್ದರೆ ರಾಜಮ್ಮನಿಗೆ ಮನೆಯಲ್ಲಿ ಇರುವಂತೆ ಹೇಳು. ಅವನಿಗೆ ಏನು ಬೇಕೋ ಅದನ್ನೆಲ್ಲ ತಿನ್ನಿಸಿ ಕುಡಿಸಿ ಹೋಗು...'' ಸಂಕೇತ ಸುಮತಿಯ ಕಡೆ ನೋಡಿ ಕಣ್ಣು ಹೊಡೆದ. ಅವಳು ನಗುವನ್ನು ತಡೆದುಕೊಂಡಳು.

ಆ ರಾತ್ರಿ ಜಾನಕಿ ನಿದ್ದೆ ಬಾರದೇ ಹೊರಳಾಡಿದಳು. ಸಂಕೇತ ಯಾಕೆ ಹಾಗೆ ಮಾತನಾಡಿದ ? ನನ್ನನ್ನು ಪರೀಕ್ಷಿಸಲೆಂದೇ ಅಥವಾ ಅವನು ನಿಜವಾಗಿಯೂ ಬದಲಾಗುತ್ತಿದಾನೆಯೇ ? ಜಗ್ಗು ಮೇಲಿನ ಭಾವನೆಗಳು ಖಂಡಿತಾ ಬದಲಾಗಲು ಸಾಧ್ಯವಿಲ್ಲ. ಸುಮತಿಗೋಸ್ಕರ, ಜಗ್ಗುಗೋಸ್ಕರ ಅಲ್ಲ. ಈಗ ತನ್ನ ಕೆಲಸವಾಗಬೇಕಾಗಿದೆ... ಹೌದು ಅದೇ ನಿಜ... ಸಂಕೇತ ಬದಲಾಗುವುದೆಂದರೇ... ಅದು ಖಂಡಿತಾ ಸಾಧ್ಯವಿಲ್ಲ.

ಬೆಳಿಗ್ಗೆ ಸುಮತಿ ಸಿದ್ಧಳಾಗಿ ನರ್ಸಿಂಗ್ ಹೋಂಗೆ ಹೊರಟಳು. ಜಾನಕಿ ಸಿದ್ಧಳಾಗಿರಲಿಲ್ಲ. ಸಂಕೇತ ಮತ್ತೆ ಜ್ಞಾಪಿಸಿದ.

''ನೀನೇ ಅವಳ ಜೊತೆಯಲ್ಲಿ ಹೋಗು. ಜಗ್ಗೂಗೆ ಹುಶಾರಿಲ್ಲ...''

''ಹುಶಾರಿಲ್ಲವೋ ? ನನ್ನ ಮೇಲೆ ನಂಬಿಕೆ ಇಲ್ಲವೋ ? ರಾಜಮ್ಮ ಬಾ ಇಲ್ಲಿ'' ಪಾತ್ರೆ ತೊಳೆಯುತ್ತಿದ್ದವಳನ್ನು ಕರೆದ'' ಇವರಿಬ್ಬರೂ ಡಾಕ್ಟರ ಹತ್ತಿರ ಹೋಗ್ತಿದಾರೆ. ಜಗ್ಗು ಒಬ್ಬನೇ ಇದಾನೆ. ಅವರಿಬ್ಬರೂ ವಾಪಸ್ಸು ಬರೋವರೆಗೂ ನೀನು ಇಲ್ಲೇ ಇರು...'' ಆಜ್ಞೆ ಮಾಡಿದ.

"ನಾನ್ರಾ ?" ಅವಳು ಹಲ್ಲುಗಳನ್ನು ತೋರಿದಳು.

"ಹುಂ. ನೀನೇ... ಹಾಗೇ ಒಂದಿಷ್ಟು ಬಿಸ್ಕತ್ತು ಬಾಳೆ ಹಣ್ಣುಗಳನ್ನು ತೆಗೆದುಕೊಂಡು ಬಾ" ಎಂದು ನೂರು ರೂಪಾಯಿಯ ನೋಟನ್ನು ಅವಳಿಗಿತ್ತ.

"ಲಗ್ನ ಮಾಡಿಕೊಂಡ್ರಿ ನನಗೆ ಸೀರೇನೇ ಕೊಡ್ಸಿಲ್ಲ."

"ಸೀರೇನೂ ತೆಗೆಸಿಕೊಡ್ತೀನಿ. ನೀನು ಈಗ ಹೋಗು... ಹಾಗೇ ಒಂದು ಆಟೋ ರಿಕ್ಷಾನ ಗೊತ್ತು ಮಾಡಿಕೊಂಡು ಬಾ..."

"ಯಾರಿಗೆ ಏನಾಗೈತೆ ಸ್ವಾಮೇರಾ ?"

"ಅದೆಲ್ಲ ಆಮೇಲೆ, ಮೊದಲು ಹೇಳಿದಷ್ಟನ್ನು ಕೇಳು..." ಗದರಿದ. ರಾಜಮ್ಮ ಹಲ್ಲು ಕಿರಿದು ಅಲ್ಲಿಂದ ಹೊರ ನಡೆದಳು. ಸಂಕೇತ ತನ್ನ ರೂಮಿಗೆ ಹೊರಟು ಹೋದ. ಜಾನಕಿ ಮನಸ್ಸಿಲ್ಲದ ಮನಸ್ಸಿನಿಂದ ಮನೆಯಿಂದ ಹೊರಬಿದ್ದಳು.

ಆ ದಿನ ಸಂಜೆಯೇ ಸಂಕೇತ, ಮೆಡಿಕಲ್ ರಿಪೋರ್ಟ್ಸ್‌ಗಳನ್ನು ತಂದ. ಎಲ್ಲಾ ನಾರ್ಮಲ್ ಆಗಿದೆ. ಏನೂ ಪ್ರಾಬ್ಲಂ ಇಲ್ಲ ಎಂದು ರಿಪೋರ್ಟ್ ತಿಳಿಸಿತ್ತು. ಸಂಕೇತ ತಾಯಿಗೆ ಅದನ್ನು ಓದಿ ಹೇಳಿದ. ಗೆಲುವಿನ ನಗೆಯನ್ನು ನಕ್ಕ.

"ನಾನು ಹೇಳಿರಲಿಲ್ವಾ ? ಏನೂ ಪ್ರಾಬ್ಲಂ ಇಲ್ಲ ಂತ. ಈಗ ಎಲ್ಲಾ ಕ್ಲಿಯರ್ ಆಯ್ತು ತಾನೇ...?" ವ್ಯಂಗ್ಯವಾಗಿ ಕೇಳಿದ.

"ನನಗೆ ಒಂದ್ಮಾತು ಅರ್ಥವಾಗ್ತಿಲ್ಲ..." ಸಂಕೇತ ಅವಳ ಮಾತುಗಳು ಕೇಳಿಸಲಿಲ್ಲ ವೆಂಬಂತೆ ಅಲ್ಲಿಂದ ಸರಿದು ಹೋಗಿದ್ದ. ಒಂದೆರಡು ದಿನಗಳಲ್ಲಿ ಸುಮತಿ ಸುಧಾರಿಸಿಕೊಂಡಿದ್ದಳು. ಹೇಮಳ ಮದುವೆಗೆ ಹೋಗಿ ಬರಲು ತಯಾರಿ ನಡೆಸಿದರು. ತಾಯಿಯನ್ನು ಬರುವಂತೆ ಕೇಳಿದ್ದ. ಅವಳು ಆಗುವುದಿಲ್ಲವೆಂದು ತಲೆಯಾಡಿಸಿದ್ದಳು.

ಬಾಡಿಗೆಗೆ ಒಂದು ಕಾರನ್ನು ಗೊತ್ತು ಮಾಡಿಕೊಂಡು ಸುಮತಿಯೊಡನೆ, ಭದ್ರಾವತಿಗೆ ಪ್ರಯಾಣ ಮಾಡಿದ. ಹರೀಶ ತನ್ನ ಮನೆಯವರೊಂದಿಗೆ ಚಿಂತಾಮಣಿಗೆ ಹೊರಟು ಹೋಗಿದ್ದ. ಅಲ್ಲಿಂದ ದಿಬ್ಬಣ ಹೊರಡುವುದಿತ್ತು.

ಮದುವೆಯ ಕಾರ್ಯ ಮುಗಿದಿತ್ತು. ಮಾರನೇ ದಿನವೇ ವಾಪಸ್ಸು ಹೊರಟರು. ಹರೀಶ ಅವರುಗಳ ಜೊತೆ ಹೊರಟ. ಉಳಿದವರು ಚಿಂತಾಮಣಿಗೆ ಹೊರಟಿದ್ದರು. ಸುಮತಿ ಅಲ್ಲಿಗೆ ಹೋಗಲು ಒಪ್ಪಲಿಲ್ಲ.... ಅವಳನ್ನು ಯಾರೂ ಬಲವಂತಮಾಡಲಿಲ್ಲ. ಹರೀಶ ಜೊತೆಯಲ್ಲಿ ದ್ದುದರಿಂದ ಸಮಯ ಹೋದುದೇ ಗೊತ್ತಾಗಲಿಲ್ಲ.

''ಇನ್ನೊಂದೆರಡು ದಿನ ಇದ್ದು ಬರಬೇಕಾಗಿತ್ತು, ತವರು ಮನೇಲಿ'' ಜಾನಕಿ ನುಡಿದಾಗ, ಸಂಕೇತ ಉತ್ತರಿಸಿದ್ದ.

''ಇವಳಿಗೆ ಇರೋ ಆಸೆ ಇತ್ತು. ಆದರೆ ನಾನೇ ಬಿಡಲಿಲ್ಲ ಕರೆದುಕೊಂಡು ಬಂದು ಬಿಟ್ಟೆ... ಇಲ್ಲಿದ್ರೆ ಇವಳಿಗೆ ರೆಸ್ಟ್ ಸಿಗುತ್ತೆ... ಅಲ್ಲಿ ಮನೆ ತುಂಬಾ ಜನ... ಮದುವೆ ಅದು ಗಲಾಟೆ ಬೇರೆ...'' ತನ್ನ ಮಾತನ್ನು ಸಮರ್ಥಿಸಿಕೊಂಡ.

''ಅತೀ ಅತೀ ಆಡ್ತೀಯ ನೀನು... ತವರು ಮನೆ ಅಂದ್ರೆ ಹೆಣ್ಣು ಮಕ್ಕಳಿಗೆ ವಿಶೇಷ ಪ್ರೀತಿ... ಮದುವೆಗೆ ಮುಂಚೆ ಆ ಮನೆಯಲ್ಲೇ ತಾನೇ ಇದ್ದಳು ?'' ಸುಮತಿ ನಕ್ಕಳು. ಸಂಕೇತ ಅವಳನ್ನು ಅಣಗಿಸಿದ. ಜಾನಕಿಗೆ ಆಶ್ಚರ್ಯವಾಗಿತ್ತು. ಮನೆ, ಸಂಸಾರ, ಸಂಬಂಧ ಯಾವುದರ ಬಗ್ಗೆಯೂ ವಿಶ್ವಾಸವಿರಲಿಲ್ಲ ಇವನಿಗೆ. ಈಗ ನೋಡಿದರೆ ಇಷ್ಟು ಮುಚ್ಚಟೆ ಮಾಡ್ತಿದಾನೆ. ಸುಮತಿಯನ್ನು ಜಗ್ಗು ಕೆಡಿಸಿದಾನೆ ಅಂತ ತಿಳಿದೂ ಇವನು ಇಷ್ಟು ಸಲೀಸಾಗಿದಾನಲ್ಲ ಹೇಗೆ ? ಸಂಕೇತ ಬದಲಾಗಿದಾನೆಯೆ ? ಅಥವಾ ಜಗ್ಗೂ ಮಾಡಿದ ತಪ್ಪನ್ನು ನಿಜವಾಗಿಯೂ ಸರಿಪಡಿಸುತ್ತಿದಾನೆಯೆ ? ಯಾವುದು ನಿಜ ?

ಒಂದು ವಾರ ಕಳೆದಿತ್ತು. ಸಂಕೇತ ವಾಪಸ್ಸು ಹೊರಡಬೇಕಾಗಿತ್ತು. ಸುಮತಿಯನ್ನು ಈ ಸ್ಥಿತಿಯಲ್ಲಿ ಅಮೆರಿಕಾಕ್ಕೆ ಕರೆಸಿಕೊಳ್ಳುವುದು ಸಾಧ್ಯವಿರಲಿಲ್ಲ. ಅವಳಿಗೆ ಡೆಲಿವರಿಯಾಗುವ ವರೆಗೂ ಎಲ್ಲಿಗೂ ಹೋಗುವಂತಿರಲಿಲ್ಲ.

''ನಾನು ಡೆಲಿವರಿಯ ಹೊತ್ತಿಗೆ ಬಂದು ಬಿಡ್ತೀನಿ... ನಾನು ಎದುರಿಗೆ ಇಲ್ಲ ಅಂತ ಯಾವುದನ್ನು ನೆಗ್ಲೆಕ್ಟ್ ಮಾಡಬಾರದು... ರೆಗ್ಯುಲರ್ ಆಗಿ ಡಾಕ್ಟರ ಬಳಿಗೆ ಹೋಗಬೇಕು. ವಾರಕ್ಕೊಂದು ಸಲ ನನಗೆ ರಿಪೋರ್ಟ್ ಕೊಡಬೇಕು...'' ಆದೇಶ ನೀಡಿದ.

''ಆಂಟಿ ಹೇಳೋ ಹಾಗೆ ಅತೀ ಅತೀ ಪ್ರೀತಿ ನಿಮ್ಮದು. ನಾನೇನು ಮೊದಲ ಹೆಂಗಸಲ್ಲ ತಾಯಿಯಾಗ್ತಿರೋಳು, ನನ್ನ ಜೊತೆಗೆ ನಿಮ್ಮ ತಾಯಿ ಇದಾರೆ... ನನ್ನ ತವರು ಮನೆಯವರು ಇದಾರೆ...''

''ಯಾರೇ ಇದ್ದರೂ, ನಾನು ಹತ್ತಿರದಲ್ಲಿ ಇದ್ದ ಹಾಗಾಗುಲ್ಲವಲ್ಲ...''

''ಹಾಗಾದ್ರೆ... ನೀವು ಯಾಕೆ ಇಲ್ಲೇ ಇರಬಾರದು ?''

''ನನಗೆ ಅನ್ನ ಹಾಕೋರು ಯಾರು ? ನಾನು ಕೆಲಸದಲ್ಲಿರೋದು ಅಲ್ಲಿ... ಅಲ್ಲಿಯ ಸರಕಾರ ನನಗೆ ಸಂಬಳ ಕೊಡ್ತಿದೆ.'' ಬೇಬಿ ಬಂದ ಮೇಲೆ, ನಿಮ್ಮಿಬ್ಬರಿಗೂ ಪಾಸ್‌ಪೋರ್ಟ್ ಮಾಡಿಸಿ ಕರೆಸಿಕೊಳ್ತೀನಿ'' ಸುಮತಿಯ ಕೆನ್ನೆ ತಟ್ಟಿದ. ಸುಮತಿ ತಲೆ ತಗ್ಗಿಸಿದ್ದಳು.

''ಸುಮತಿ, ಯೂ ಡೋಂಟ್‌ವರಿ, ಎವ್ವೆರಿಥಿಂಗ್ ವಿಲ್ ಬಿ ಆಲ್‌ರೈಟ್... ಐ ಮಿಸ್ ಯೂ...'' ಎಂದು ನುಡಿದ ಹೊರಡುವ ಮೊದಲು. ಹರೀಶ ಏರ್‌ಪೋರ್ಟಿಗೆ ಕರೆದುಕೊಂಡು

ಹೋಗಲು ಬಂದಿದ್ದ. ಅವರಿಬ್ಬರೂ ಗುಸುಪಿಸು ಮಾತಾಡಿದ್ದುದನ್ನು ಸುಮತಿ ಕಂಡಳು. ಸಂಕೇತ ಕೆಲವು ಕಾಗದಗಳನ್ನು ಅವನಿಗೆ ಕೊಟ್ಟಿದ್ದನ್ನು ಗಮನಿಸಿದಳು. ಏನಿರಬಹುದೆಂಬ ಸಂಶಯ ಮೂಡಿತು. ಹರೀಶ ಹತ್ತಿರ ಬಂದು ನಗುನಗುತ್ತಾ ಮಾತನಾಡಿಸಿ, ಅವಳನ್ನೇ ಮೇಲಿನಿಂದ ಕೆಳಗೆ ನೋಡಿದ. ಸುಮತಿ ಮುಜುಗರಗೊಂಡಳು. ''ನೌ ಯು ಲುಕ್ ಬೆಟರ್ ಮೇಡಂ'' ಎಂದಿದ್ದ. ಸಂಕೇತ ಅತ್ತ ಹೊರಟು ಹೋದ ಕೂಡಲೇ ಜಗ್ಗು ಹಲ್ಲು ಕಿರಿದ. ಸುಮತಿ ಗಮನಿಸಲಿಲ್ಲ, ತನ್ನ ಪಾಡಿಗೆ ತಾನು ಇದ್ದು ಬಿಟ್ಟಳು.

''ದರಿದ್ರದವನೇ, ಇನ್ನು ದಡ್ಡನಾಗಿದೀಯಲ್ಲ ನೀನು ರೂಮಿನಿಂದ ಆಚೆ ಬಂದರೆ ಸದೆ ಬಡಿದು ಬಿಡ್ತೀನಿ'' ಸುಮತಿಯ ಕಿವಿಗಳಿಗೆ ಮಾತುಗಳು ತಾಕಿದವು. ಆದರೆ ಅವಳು ಹಿಂತಿರುಗಿ ನೋಡಲಿಲ್ಲ.

ಸಂಕೇತ ಊರಿಗೆ ಹೋಗಿ ಎರಡು ವಾರಗಳಾಗಿದ್ದವು. ಹರೀಶ ಆಗಾಗ್ಗೆ ಬಂದು, ಸುಮತಿಯೊಡನೆ ಮಾತಿಗೆ ಕುಳಿತುಕೊಳ್ಳುತ್ತಿದ್ದ. ಜಾನಕಿಗೆ ಇಷ್ಟವಾಗುತ್ತಿರಲಿಲ್ಲ. ಆದರೆ ಸುಮತಿಯೇ ಸುಮ್ಮನಾಗಿರುವಾಗ ತನಗೇನು ಅಂತಂದುಕೊಂಡಳು. ಹರೀಶ, ತನ್ನ ಸಂಕೇತನ ಸ್ನೇಹಕ್ಕೆ ಸಂಬಂಧಪಟ್ಟಂತೆ ಅನೇಕ ವಿಷಯಗಳನ್ನು ಹೇಳಿ, ತಮ್ಮ ಸ್ನೇಹಿತರ ವಿಷಯಗಳನ್ನು ಹೇಳಿ, ಸುಮತಿ ಖುಷಿಯಾಗಿರುವಂತೆ ನೋಡಿಕೊಳ್ಳುತ್ತಿದ್ದ. ಒಮ್ಮೆ ಸುಮತಿಯೇ ಕೇಳಿದ್ದಳು.

''ಬಿಡುವು ಸಿಕ್ಕಾಗಲೆಲ್ಲಾ ಇಲ್ಲಿಗೆ ಬರ್ತೀರಲ್ಲ, ನಿಮ್ಮ ಮನೆಯವರು ಏನಾದ್ರೂ ಅನ್ನಲ್ವಾ?''

''ನಾನು ಯಾವಾಗ್ಲೂ ಮನೇಲಿ ಇರೋದೇ ಇಲ್ಲ. ಅವರಿಗೆಲ್ಲಾ ಗೊತ್ತಿದೆ.''

''ಆದರೂ, ನೀವು ಹೀಗೆ ಬರುತ್ತಿದ್ದರೆ, ಆಂಟಿ ಏನಂದುಕೊಳ್ತಾರೆ ...? ಸಂಕೇತನೂ ಮಿಸ್ಟೇಕ್ ಮಾಡ್ಕೋಬಹುದು.''

''ಸಂಕೇತ ಹೇಳಿರುವುದರಿಂದಲೇ ನಾನು ಬರುತ್ತಾ ಇರೋದು... ನಿಮಗೆ ಬೇಸರವಾದರೆ ಹೇಳಿಬಿಡಿ... ನಾನು ಸಂಕೇತನ ಹತ್ತಿರ ಮಾತಾಡ್ತೀನಿ.''

''ನೀವು ನನ್ನ ಬಾಡಿಗಾರ್ಡಾ...?'' ನಕ್ಕಳು

''ಹುಂ. ಹಾಗೇ ಅಂದ್ಕೊಳ್ಳಿ...''

''ಸಂಕೇತನಿಗೆ ನನ್ನ ಮೇಲೆ ನಂಬಿಕೆ ಇಲ್ವಾ ?''

''ಅವನಿಗೆ ನಿಮ್ಮ ಮೇಲೆ ನಂಬಿಕೆ ಇದೆ. ಆದರೆ ಜಗ್ಗೂ ಮೇಲೆ ನಂಬಿಕೆ ಇಲ್ಲ...'' ಸುಮತಿಯ ಮುಖ ಬಿಳುಪೇರಿತು.

''ಅಂದ್ರೇ...''

''ನನಗೆ ಎಲ್ಲಾ ವಿಷಯವೂ ಗೊತ್ತು. ಐ ಆಮ್ ವೆರಿ ಸಾರಿ... ನನಗೆ ಆಂಟಿಯೇ ಎಲ್ಲಾ ಹೇಳಿದಾರೆ.'' ಸುಮತಿಗೆ ಜಾನಕಿಯ ಮೇಲೆ ಕೋಪ ಬಂತು.

''ನಾನು ಭದ್ರಾವತಿಗೇ ಹೊರಟು ಹೋಗ್ತೀನಿ, ಇಲ್ಲಿ ಇರುಲ್ಲ'' ಅಳತೊಡಗಿದಳು.

''ಇಲ್ಲ, ಸಂಕೇತನ ಅಪ್ಪಣೆಯಾಗಿದೆ... ಅವನು ಮತ್ತೆ ಬರುವವರೆಗೂ ನೀವು ಇಲ್ಲಿಂದ ಹೋಗುವಂತಿಲ್ಲ.. ನನ್ನ ಹತ್ತಿರ ಮಾತು ತಗೊಂಡಿದಾನೆ...'' ಅವಳ ಮುಖದ ಕಳೆ ಕುಂದಿತು. ನಾನು ಎಷ್ಟು ಬೋಲ್ಡ್ ಆಗಿ ಹೇಗಿದ್ದೆ... ಈಗ ಕಾಲು ಮುರಿದ ಕೋಳಿಯಂತೆ ಇವರುಗಳ ಕೈಗೆ ಸಿಕ್ಕಿಬಿದ್ದಿದೀನಲ್ಲ.'' ಎಂದುಕೊಂಡಳು. ಅವಳ ಅಭಿಮಾನಕ್ಕೆ ಬರೆ ಇಟ್ಟಂತಾಗಿತ್ತು.

''ನೀವು ಪದೇ ಪದೇ ಬರಬೇಡಿ ಹರೀಶ್. ಆಂಟಿ ಮಿಸ್ಟೇಕ್ ಮಾಡ್ಕೋತಾರೆ.''

''ಪರವಾಗಿಲ್ಲ, ಅವರು ಏನೇ ಅಂದರೂ, ನಾನು ಸಹಿಸಿಕೊಳ್ತೀನಿ. ಆದರೆ ನನಗೆ ಬರಬೇಡ ಅಂತ ಮಾತ್ರ ಹೇಳಬೇಡಿ. ನಾನು ಸಂಕೇತನಿಗೆ ಮಾತು ಕೊಟ್ಟಿದೀನಿ.'' ಎಂದ. ಸುಮತಿ ಅರ್ಥವಾಗದವಳಂತೆ ಚಡಪಡಿಸಿದಳು. ಸಂಕೇತ ನಿಜವಾಗಿಯೂ ಇಷ್ಟು ಪ್ರೀತಿಸುತ್ತಾನೋ, ಅಥವಾ ನಾಟಕವನ್ನಾಡುತ್ತಿದ್ದಾನೋ, ಈಗ ತಾನು ಪತ್ನಿಯಾದರೂ, ನಮ್ಮಿಬ್ಬರ ನಡುವೆ ಬೇರೆ ಸಂಬಂಧವಿಲ್ಲ... ತಾನು ಪತಿತೆ ಎಂದು ತಿಳಿದಿದ್ದರೂ, ಇಷ್ಟು ವಿಶಾಲ ಹೃದಯದವನಾಗಿರಲು ಹೇಗೆ ಸಾಧ್ಯ ? ಏನು ಕಾರಣ... ತಾಯಿಯನ್ನು ವಿರೋಧಿಸಿ ತನ್ನನ್ನು ಮದುವೆಯಾಗಿ, ತಾನು ಸುಖವಾಗಿರಲು ಅನುಕೂಲ ಮಾಡಿಕೊಡುತ್ತಿದಾನೆ... ಸಂಕೇತ ಒರಟನಾದರೂ, ದುಡುಕನಾದರೂ ಅತಿ ಒಳ್ಳೆಯ ವ್ಯಕ್ತಿ ಎಂಬ ತೀರ್ಮಾನಕ್ಕೆ ಬಂದಳು.

ಸಂಕೇತ ಆಗ ಈಗ ಫೋನು ಮಾಡಿ ಸುಮತಿಯ ಆರೋಗ್ಯವನ್ನು ವಿಚಾರಿಸುತ್ತಿದ್ದ. ಜಾನಕಿ ಜಗ್ಗು, ಸುಮತಿಯ ರೂಮಿನ ಕಡೆ ಸುಳಿಯದಂತೆ ನೋಡಿಕೊಂಡಿದ್ದಳು ಆದರೂ, ಜಗ್ಗು ಹಠ, ರಂಪ ಮಾಡಿದಾಗ, ಜಾನಕಿ ಮುಂಚಿಗಿಂತ ಹೆಚ್ಚು ಹೆಚ್ಚು ಹೊಡೆಯುತ್ತಿದ್ದಳು. ಆದರೆ ಸುಮತಿ ಬಿಡಿಸಲು ಬರುತ್ತಿರಲಿಲ್ಲ.... ಜಗ್ಗು ಕೈ ಸಂಜ್ಞೆ ಮಾಡಿ, ಅವಳು ಇರುವ ಕಡೆ ಕೈ ಮಾಡಿ ತೋರುತ್ತಿದ್ದ... ಹೀಗೇ ಮುಂದುವರೆದರೆ, ಜಗ್ಗು ಯಾವ ರೀತಿ ಬದಲಾಗಿ ಬಿಡುತ್ತಾನೋ, ತಾನು ಮನಸ್ಸು ಗಟ್ಟಿಮಾಡಿ ಯಾವುದಾದರೂ 'ಹೋಂ'ಗೆ ಸೇರಿಸಿ ಬಿಡಬೇಕೆಂದು ತೀರ್ಮಾನಿಸಿದಳು. ಸುಮತಿಗೆ ಅದೇ ವಿಷಯವನ್ನು ಹೇಳಿದಾಗ ಅವಳ ಮುಖ ಚಿಕ್ಕದಾಗಿತ್ತು. ''ಈಗ ನಾನು ಯಾವ ಸಲಹೆಯನ್ನು ಕೊಡಲಾರೆ'' ಎಂದು ಬಿಟ್ಟಳು. ಅದೇ ದಿನ ಜಾನಕಿ ಹೋಗಿ ಸಮೀಪದಲ್ಲಿ ಇದ್ದ ಒಂದು 'ಹೋಂ'ನಲ್ಲಿ ವಿಚಾರಿಸಿಕೊಂಡು ಬಂದಳು. ಅವರು ಯಾವಾಗ ಬೇಕಾದರೂ ಕರೆತಂದು ಸೇರಿಸಬಹುದೆಂದು ಹೇಳಿದ್ದರು... ಒಂದೆರಡು ದಿನಗಳ ನಂತರ ಬಲವಂತವಾಗಿ, ಜಗ್ಗುವನ್ನು ಅಲ್ಲಿ ಬಿಟ್ಟು ಬಂದಳು. ಮನಸ್ಸು ದುಗುಡದಿಂದ ತುಂಬಿ ಹೋಗಿತ್ತು.

ಸಂಕೇತನಿಗಾಗಿ, ತಾನು ಜಗ್ಗುವನ್ನು ದೂರ ಮಾಡುತ್ತಿದೇನೆ, ಇವನಿಗೆ ನನ್ನನ್ನು ಬಿಟ್ಟರೆ ಬೇರೆ ಯಾರೂ ಇಲ್ಲ, ಸಂಕೇತನಿಗಾದರೋ ಸುಮತಿ ಇದಾಳೆ, ಸಧ್ಯದಲ್ಲೇ ಹುಟ್ಟಲಿರುವ ಮಗು

ಇದೆ... ಆದರೂ, ಇವನಿಂದ ಸುಮತಿಗೆ ಅಪಾಯ ಒದಗಬಹುದು ಎಂಬ ಅನುಮಾನವಿದ್ದೇ ಇದೆ, ತಾನು ಮಾಡಿದ್ದೇ ಸರಿ ಎಂದು ಸಮಾಧಾನ ಹೇಳಿಕೊಳ್ಳುತ್ತಿದ್ದಳು... ಆಗ ಈಗ ಹೋಗಿ ಜಗ್ಗುವನ್ನು ನೋಡಿಕೊಂಡು ಬರುತ್ತಿದ್ದಳು.

ಒಂದೆರಡು ವಾರಗಳಲ್ಲೇ ಸುಮತಿ, ಮೈಕೈ ತುಂಬಿಕೊಂಡು ಚೆನ್ನಾಗಿ ಆದಳು. ಆದರೂ ಮುಖದಲ್ಲಿ ಗೆಲುವಿರಲಿಲ್ಲ, ಏನೋ ಬಾಧೆ ಇದ್ದೇ ಇತ್ತು. ಹರೀಶ ಒಮ್ಮೊಮ್ಮೆ ಅವಳನ್ನೇ ತದೇಕವಾಗಿ ನೋಡುವಾಗ ಅವಳಿಗೆ ಮುಜುಗರವೆನಿಸುತ್ತಿತ್ತು. ಈಗ ಸಂಕೇತ ತನ್ನ ಬಳಿಯಲ್ಲಿ ಇದ್ದಿದ್ದರೇ ಅಂತ ಅನ್ನಿಸದೇ ಇರಲಿಲ್ಲ, ಜಾನಕಿಯು ಸುಮತಿಯ ಆರೋಗ್ಯದ ಕಡೆ ಹೆಚ್ಚು ಹೆಚ್ಚು ಗಮನ ಕೊಟ್ಟಿದ್ದಳು. ಸುಮತಿ ಮೊದಲಿಗಿಂತ ಹೆಚ್ಚು ಆಕರ್ಷಕವಾಗಿದ್ದಳು. ತಾನು ಸಂಕೇತನ ಬಸಿರಿಯಾಗಿದ್ದಾಗಿನ ದಿನಗಳನ್ನು ನೆನೆಸಿಕೊಂಡಳು. ತನ್ನ ಪತಿ ತನ್ನನ್ನು ಎಷ್ಟು ಮುಚ್ಚಟೆಯಿಂದ ನೋಡಿಕೊಳ್ಳುತ್ತಿದ್ದರು, ಕೇಳಿ ಕೇಳಿದ್ದನೆಲ್ಲಾ ಕೊಡಿಸುತ್ತಿದ್ದರು... ಆ ದಿನಗಳು ಎಷ್ಟು ವರ್ಣಮಯವಾಗಿದ್ದವು !

ಶ್ರೀಮಂತ ಕುಟುಂಬದಲ್ಲಿ ಹುಟ್ಟಿ ಬೆಳೆದು, ಶ್ರೀಮಂತ ಯುವಕನನ್ನೇ ಮದುವೆಯಾಗಿದ್ದ ಜಾನಕಿಗೆ ಕಷ್ಟ ಅಂದರೆ ಏನು ಅಂತಲೇ ತಿಳಿಯದು. ಹೂವಿನಂತೆ ಬೆಳೆದವಳನ್ನು ಹೂವಿನಂತೆಯೇ ನೋಡಿಕೊಂಡಿದ್ದ ಜಾನಕಿ ಪತಿ ಜನಾರ್ದನ ಕೆಲವೇ ತಿಂಗಳುಗಳಲ್ಲಿ ತಾನು ಗರ್ಭಿಣಿ ಎಂದು ತಿಳಿದಾಗ, ಜಾನಕಿಗೆ ಖುಷಿಯಾಗಿರಲಿಲ್ಲ... ಏನೋ ಅವ್ಯಕ್ತ ಭಯ ಅವಳಿಗೆ, ಹೆರಿಗೆಯ ನೋವನ್ನು ಅನುಭವಿಸುವುದು ಹೇಗೆ ಎಂಬ ದಿಗಿಲು ? ಆದರೆ ದಿನಗಳೆದಂತೆ, ಬಸಿರಲ್ಲಿ ಮಗು ಚಲಿಸತೊಡಗಿದಾಗ ಅವಳು ತಾಯಿಯಾಗತೊಡಗಿದಳು... ಮನಸ್ಸು ಮುಂದೆ ಹುಟ್ಟಲಿರುವ ಮಗುವಿನ ಆಲೋಚನೆಗಳಲ್ಲೇ ತುಂಬಿ ಹೋಯಿತು. ನಿಲುವುಗನ್ನಡಿಯ ಮುಂದೆ ನಿಂತು, ತನ್ನ ದೇಹವನ್ನು ಆಗಾಗ್ಗೆ ನೋಡಿಕೊಳ್ಳುತ್ತಾ ತುಸು ಉಬ್ಬಿದ ಹೊಟ್ಟೆಯ ಮೇಲೆ ಕೈಯಾಡಿಸಿ ಕೊಳ್ಳುತ್ತಿದ್ದಳು. ಅವಳ ಹಿಂದೆಯೇ ನಿಂತು, ಜನಾರ್ಧನ ಅವಳನ್ನು ಮುದ್ದಿಸುತ್ತಿದ್ದ.

"ಕ್ರಮೇಣ ನನ್ನನ್ನು ಮರೆತೇ ಬಿಡ್ತೀಯಾ..." ಚುಡಾಯಿಸುತ್ತಿದ್ದ. ಅವಳು ನಾಚಿಕೆಯಿಂದ ಕೆಂಪಾಗುತ್ತಿದ್ದಳು. ಬಸಿರಿಗೆ ಸೀಮಂತವನ್ನು ಅದ್ದೂರಿಯಾಗಿ ನೆರವೇರಿಸಿದರು. ದಿನಗಳು ತುಂಬಿದವು. ಸಂಕೇತ ಹುಟ್ಟಿದ... ಜನಾರ್ಧನ ಹೆಂಡತಿಯನ್ನು ಕೊಂಡಾಡಿದ್ದ. ನನಗಿನ್ನೇನೂ ಆಸೆ ಇಲ್ಲ ಜಾನಕಿ... ನೀನು, ನನ್ನ ಮಗ ಜೊತೆಯಲ್ಲಿ ಸದಾ ಇದ್ದರೆ ಸಾಕು... ಎಂದು ಹೇಳಿ ಇಬ್ಬರನ್ನೂ ಉದ್ದಾಡಿದ್ದ.

ಸಂಕೇತನಿಗೆ ಎರಡು ವರ್ಷಗಳು ತುಂಬುತ್ತಿದ್ದಂತೆಯೇ, ಜಾನಕಿ ಮತ್ತೆ ಗರ್ಭಿಣಿಯಾಗಿದ್ದಳು. "ನಮಗೆ ಒಂದೇ ಮಗು ಸಾಕು, ಅಬಾರ್ಷನ್ ಮಾಡಿಸ್ಕೋ" ಎಂದು ಜನಾರ್ಧನ ಹೇಳಿದಾಗ ಜಾನಕಿ ನಡುಗಿ ಹೋಗಿದ್ದಳು. "ಇದು ಪಾಪ ಅಲ್ವಾ ?" ಭಯದಿಂದ ಕೇಳಿದ್ದಳು.

"ಪಾಪ ಯಾಕೆ ಆಗುತ್ತದೆ ? ಸಂಕೇತನನ್ನು ಚೆನ್ನಾಗಿ ಬೆಳೆಸೋಣ. ಇನ್ನೊಬ್ಬ ಮಗನೋ ಮಗಳೋ ಹುಟ್ಟಿದರೆ, ಸಂಕೇತ ಮಂಕಾಗಿ ಬಿಡುತ್ತಾನೆ. ಅವನ ಮೇಲಿನ ಪ್ರೀತಿ ಕಡಿಮೆ ಯಾಗುತ್ತೆದ" ಎಂದಿದ್ದ

"ಹಾಗೇನೂ ಆಗುಲ್ಲ ರೀ... ತಾಯಿಗೆ ಎಷ್ಟೇ ಮಕ್ಕಳಿದ್ದರೂ, ಎಲ್ಲರನ್ನು ಒಂದೇ ಸಮ ಪ್ರೀತಿಸುತ್ತಾಳೆ. ಸಂಕೇತ ಒಂಟಿಯಾಗಿ ಬಿಡ್ತಾನೆ... ಅವನಿಗೂ ಒಬ್ಬ ತಮ್ಮನೋ ತಂಗಿಯೋ ಇದ್ದರೆ, ಮುಂದೆ ಒಬ್ಬರಿಗೊಬ್ಬರು ಸಹಾಯಕರಾಗುತ್ತಾರೆ.... ಪ್ಲೀಸ್, ಈ ಮಗು ಹುಟ್ಟಿ ಬಿಡಲಿ, ಆಮೇಲೆ ಆಪರೇಷನ್ ಮಾಡಿಸಿಕೊಂಡು ಬಿಡ್ತೀನಿ" ಹೆಂಡತಿಯ ದೈನ್ಯದ ಮುಖವನ್ನು ನೋಡಿ ಜನಾರ್ಧನ ಸುಮ್ಮನಾದ. ಹೆಂಡತಿಗೆ ಕಷ್ಟವಾಗಬಾರದೆಂದು, ಸಂಕೇತನನ್ನು ತಾನೇ ಹೆಚ್ಚು ಹೆಚ್ಚು ಆಡಿಸುತ್ತಿದ್ದ. ಆಗಲೇ ಸಂಕೇತ ತಾಯಿಯಿಂದ ದೂರ ದೂರವಾಗ ತೊಡಗಿದ್ದ.

ಜಗ್ಗು ಹುಟ್ಟಿದಾಗ ಎಲ್ಲಾ ರೀತಿಯಿಂದಲೂ ಸರಿಯಾಗಿಯೇ ಇದ್ದ. ಆದರೆ ದಿನಗಳೆದಂತೆ ಅವನಲ್ಲಿ ನ್ಯೂನತೆಗಳು ಕಂಡು ಬರತೊಡಗಿದಾಗ, ಜಾನಕಿ ಹೆದರಿದಳು. ಎಲ್ಲಾ ತರಹದ ಪರೀಕ್ಷೆಗಳು ನಡೆದವು. ಯಾರೂ ಸರಿಯಾಗಿ ಹೇಳದಿದ್ದರೂ, ಮೆದುಳಿನ ಬೆಳವಣಿಗೆ ಕುಂಠಿತವಾಗಿದೆ... ನಿಧಾನವಾಗಿ ಸರಿ ಹೋಗಬಹುದು ಎಂದು ಹೇಳಿ ಔಷಧಗಳನ್ನು ಬರೆಬರೆದು ಕೊಟ್ಟರು... ಜಗ್ಗು ಸರಿ ಇಲ್ಲ, ಈ ಪದವೇ ಜಾನಕಿಯನ್ನು ಪಾತಾಳಕ್ಕೆ ಎಸೆದಿತ್ತು. ಕುಗ್ಗಿ ಹೋದಳು.

ಮೊದಲೇ ಇವನು ಅಪ್ಪನಿಗೆ ಬೇಡದ ಮಗು. ಈಗ ಇನ್ನು ಮುಂದೆ ಯಾತಕ್ಕೂ ಬೇಡದವನಾಗಿ ಬೆಳೆಯುವುದೆಂದರೆ, ಔಷಧದ ಜೊತೆಗೆ, ಹರಕೆ ಕಾಣಿಕೆಗಳ ಹುಂಡಿಯೂ ತುಂಬಿತು. ಆದರೆ ಜಗ್ಗು ಮಾತ್ರ ಎಲ್ಲರಂತೆ ಆಗಲಿಲ್ಲ, ಜನಾರ್ಧನನಿಗೆ ಹೆಂಡತಿಯ ಮೇಲೆ ಕೋಪ. ನಾನು ಹೇಳಿದಂತೆ, ಅಬಾರ್ಷನ್ ಮಾಡಿಸಿಕೊಂಡಿದ್ದರೆ, ಹೀಗೆ ಆಗುತ್ತಲೇ ಇರಲಿಲ್ಲ, ಅನುಭವಿಸು ಎಂದು ರೇಗಿದ್ದ... ಗಂಡ, ಜಗ್ಗುವನ್ನು ಕಂಡರೆ ರೇಗುತ್ತಾನೆಂದು ತಿಳಿದು, ಅವನನ್ನು ಅಪ್ಪನಿಂದ ದೂರ ದೂರವೇ ಇರಿಸಿದಳು.

ಸಂಕೇತ ಅಪ್ಪನ ಮಗನಾಗಿ ಬೆಳೆದ. ಜಗ್ಗು ಅಮ್ಮನ ಕೂಸಾಗಿಯೇ ಉಳಿದ. ತಂದೆಯ ಜೊತೆಯೇ ಇದ್ದು ಇದ್ದು ಜಗ್ಗುವನ್ನು ದ್ವೇಷಿಸತೊಡಗಿದ. ಜಗ್ಗು ಎಂದೂ ಪ್ರೀತಿಯ ತಮ್ಮನಾಗಲಿಲ್ಲ, ಅದಕ್ಕೆ ಇವನು ಅರ್ಹನೂ ಅಲ್ಲ... ಜಾನಕಿಯ ಕಣ್ಣಿನಿಂದ ಧಾರಾಕಾರವಾಗಿ ನೀರು ಹರಿಯಿತು.

ಈಗ ಜಗ್ಗು ಮನೆಯಲ್ಲಿಲ್ಲ, ಅವನ ಹಿಂದೆ ಮುಂದೆ ತಿರುಗಬೇಕಾಗಿಲ್ಲ, ಕೆಲಸವೇ ಇಲ್ಲದಷ್ಟು ಕೈ ಖಾಲಿಯಾಗಿದೆ. ಮನವೂ ಖಾಲಿಯಾಗಿದೆ... ಸಂಕೇತ ಊರಿನಲ್ಲಿಲ್ಲ, ಸುಮತಿ ಮುಂಚಿನಂತಿಲ್ಲ... ತಾನೀಗ ಒಂಟಿ ಎಂಬ ಭಾವನೆ ಅಧಿಕವಾಗತೊಡಗಿತು.

"ಆಂಟಿ, ನಾನು ಸ್ವಲ್ಪ ಮೆಡಿಕಲ್ ಷಾಪ್‌ಗೆ ಹೋಗಿ ಬರ್ತೀನಿ" ಸುಮತಿ ಎಂದಳು.

"ನೀನ್ಯಾಕೆ ಹೋಗಬೇಕು ? ನಾನು ಹೋಗಿ ತಂದುಕೊಡ್ತೀನಿ."

"ಮನೇಲಿ ಕೂತು ಕೂತು ಬೇಸರವಾಗಿದೆ. ಸ್ವಲ್ಪ ಹಾಗೇ ಸುತ್ತಾಡಿ ಬರ್ತೀನಿ."

"ಒಬ್ಬಳೇ ಹೋಗಬೇಡ... ನಾನೂ ಬೇಕಾದ್ರೆ ಬರ್ತೀನಿ" ಅಷ್ಟರಲ್ಲಿ ಹರೀಶ ಮುಂಬಾಗಿಲಿನಲ್ಲಿ ಪ್ರತ್ಯಕ್ಷನಾದ...

"ಹರೀಶ ಬಂದ, ಅವನೇ ತಂದುಕೊಡ್ತಾನೆ..."

"ನೀವು ಹರೀಶನ ಜೊತೆ ಮಾತನಾಡ್ತಿರಿ. ನಾನು ಹೋಗಿ ಬರ್ತೀನಿ ಎಂದವಳನ್ನು ತಡೆದ.

"ನನಗೆ ವಾಕಿಂಗ್ ಬೇಕು ಹರೀಶ್... ಮನೇಲೇ ಕೂತು, ಕಾಲುಗಳು ಊದಿಕೊಂಡು ಬಿಟ್ಟಿವೆ..." ಎಂದಳು.

"ಸರಿ. ನಾನೂ ಬರ್ತೀನಿ ನಡೀರಿ. ಒಬ್ಬಳೇ ಮಾತ್ರ ಹೋಗಕೂಡದು... ಇದು ರಾಮದೂತನ ಅರಿಕೆ ಮೇಡಂ" ಸುಮತಿ ನಕ್ಕಳು. ಹರೀಶ ಅವಳ ಸೌಂದರ್ಯವನ್ನೇ ಅವಲೋಕಿಸಿದ... ಇಬ್ಬರೂ ರಸ್ತೆಗಿಳಿದರು.

"ಸಂಕೇತ ತುಂಬಾ ಲಕ್ಕೀ... ನೀವು ತುಂಬಾ ಚೆನ್ನಾಗಿದೀರಿ, ಬ್ಯೂಟಿ..."

"ಹರೀಶ್... ನೀವು ಹೀಗೆಲ್ಲಾ ಮಾತಾಡಿದ್ರೆ... ನಾನು ನಿಮ್ಮ ಹತ್ತಿರ ಮಾತನ್ನೇ ಆಡುಲ್ಲ ಅಷ್ಟೇ." ನಾಚಿಕೆಯಿಂದ ಕೆಂಪಾಗಿದ್ದಳು.

"ಚೆನ್ನಾಗಿರೋರನ್ನ ಚೆನ್ನಾಗಿದೀರಿ ಅಂತ ಹೊಗಳಿದ್ರೆ ಕೋಪ ಯಾಕೆ ಮೇಡಂ... ನಾನು ಹೇಳಿದ್ದರಲ್ಲಿ ತಪ್ಪೇನಿದೆ ?"

"ತಪ್ಪೇನಿಲ್ಲ, ಆದರೆ ಬೇರೆಯವರು ಅಪಾರ್ಥ ಮಾಡ್ಕೋಬಾರದು..."

"ಯಾರೂ ಅಪಾರ್ಥ ಮಾಡಿಕೊಳ್ಳುಲ್ಲ. ಈವನ್ ಸಂಕೇತ ಕೂಡಾ ಅಪಾರ್ಥ ಮಾಡಿಕೊಳ್ಳುಲ್ಲ. ಸಂಕೇತ ತುಂಬಾ ಬದಲಾಗಿ ಹೋಗಿದಾನೆ."

"ನಿಮ್ಮ ಮದುವೆ ಯಾವಾಗ ?" ಇದ್ದಕ್ಕಿದ್ದಂತೆ ಕೇಳಿದಾಗ ನಕ್ಕ.

"ನಿಮ್ಮಂತಹ ಹುಡುಗಿ ಸಿಕ್ಕಾಗ..." ತಕ್ಷಣವೇ ಉತ್ತರ ಕೊಟ್ಟಿದ್ದ.

"ನನ್ನ ತಂಗೀನ ನೋಡಿದೀರಲ್ಲ ಏನನ್ನಿಸ್ತು ?"

"ಅವಳಿನ್ನು ಚಿಕ್ಕವಳಲ್ವಾ ? ಅಲ್ಲದೇ ನಿಮ್ಮಷ್ಟು ಪ್ರೆಟ್ಟಿಯಾಗಿಲ್ಲ... ನೀವು ಒಂದೇ ಒಂದು ಪೀಸು, ನಿಮ್ಮನ್ನು ಸಂಕೇತ ಹೊಡೆದುಕೊಂಡು ಬಿಟ್ಟ... ನಮ್ಮೆಲ್ಲರಿಗೂ ಅನ್ಯಾಯ ಮಾಡಿಬಿಟ್ಟ... ನಿಮ್ಮನ್ನು ಲವ್ ಮಾಡ್ತಾ ಇದೀನಿ ಅಂತ ಯಾರಿಗೂ ಹೇಳಲೇ ಇಲ್ಲ ಕಳ್ಳ... ನಿಮ್ಮ ಪ್ರೀತಿ ಶುರುವಾದದ್ದು ಹೇಗೆ ? ನಿಮ್ಮ ಅನುಭವವನ್ನು ಸ್ವಲ್ಪ ನಮ್ಮೊಂದಿಗೂ ಹಂಚಿಕೊಳ್ತೀರಾ ?"

''ಅದೆಲ್ಲಾ ಪರ್ಸನಲ್ ವಿಷಯ. ನೀವು ಕೇಳಲೂ ಬಾರದು. ನಾನು ಹೇಳಲೂ ಬಾರದು... ನಿಮಗೆ ಕವಿತಾ ಇಷ್ಟವಾಗೋದಾದ್ರೆ ಹೇಳಿ, ನಾನು ಮಾತಾಡ್ತೀನಿ.''

''ಇಲ್ಲ ನನಗೆ ಕವಿತಾ ಇಷ್ಟವಿಲ್ಲ'' ಎಂದು ಬಿಟ್ಟ ಅವಳು ಸುಮ್ಮನಾದಳು. ಮೆಡಿಕಲ್ ಸ್ಟೋರ್ಸ್‌ನಿಂದ ಹಿಂತಿರುಗಿದರು.

☆ ☆ ☆

ಹೆರಿಗೆಗೆ ಇನ್ನು ಹದಿನೈದು ದಿನಗಳು ಬಾಕಿ ಇವೆ ಎನ್ನುವಾಗ, ಸಂಕೇತ ದಿಢೀರನೆ ಬಂದಿಳಿದ. ಹರೀಶನಿಗೂ ಸಹ ತಿಳಿಯದು. ಯಾವುದೋ ಪುಸ್ತಕ ಓದುತ್ತಾ ಕುಳಿತ ಸುಮತಿ, ಹೆಜ್ಜೆಯ ಸದ್ದನ್ನು ಕೇಳಿ ಬೆಚ್ಚಿ ಬಿದ್ದಳು. ಎದುರಿಗೆ ಸಂಕೇತ. ಗಾಬರಿಯಿಂದ ಎದ್ದು ನಿಂತಳು. ಬಳಿಗೆ ಬಂದು ನಿಂತ ಸಂಕೇತ ಅವಳ ಭುಜಗಳನ್ನು ಹಿಡಿದು, ತನ್ನೆದುರಿಗೆ ನಿಲ್ಲಿಸಿಕೊಂಡು, ಮೇಲಿನಿಂದ ಕೆಳಗೆ ಅನೇಕ ಬಾರಿ ನೋಡಿದ. ಸುಮತಿ ಭಯ, ನಾಚಿಕೆ, ಮುಜುಗರಗಳಿಂದ ಮುದುರಿದಳು.

''ರಿಲಾಕ್ಸ್ ಸುಮತೀ... ರಿಲಾಕ್ಸ್... ಎಷ್ಟು ಚೆನ್ನಾಗಿ ಕಾಣ್ತಿದೀಯ ಗೊತ್ತಾ ?''

''ಬರ್ತೀನಿ ಅಂತ ಹೇಳಿರಲೇ ಇಲ್ಲ...''

''ಸರ್ಪ್ರೈಸ್... ಸರ್ಪ್ರೈಸ್. ಏನಂತಾನೆ ಜೂನಿಯರ್...?'' ಅವಳ ಉಬ್ಬಿದ ಹೊಟ್ಟೆಯ ಮೇಲೆ ಕೈಯಾಡಿಸಿದ... ಅವಳು ನಸುನಕ್ಕಳು.

''ತುಂಬಾ ತುಂಟನಾಗಿ ಬಿಟ್ಟಿದಾನೆ. ಚೇಷ್ಟೆ ಮಾಡ್ತಾನೆ ಇರ್ತಾನೆ...''

''ಯಾಕೋ ತುಂಟ ? ಮಮ್ಮೀನ ಗೋಳು ಹುಯ್ದುಕೊಳ್ತೀಯ ?'' ಹೊಟ್ಟೆಯ ಮೇಲೆ ಮುಖವನ್ನಿರಿಸಿ ಕೇಳಿದ. ಸುಮತಿ ಅವನನ್ನು ಹಿಂದಕ್ಕೆ ತಳ್ಳಿದಳು.

''ಸಾರಿ... ಸಾರಿ... ಹರ್ಟ್ ಆಯ್ತಾ ?''

''ಏನಿಲ್ಲ'' ಎಂದಳು. ನಿರುತ್ಸಾಹದಿಂದ ಯಾಕೆ ಏನಾಯ್ತು ? ಇದ್ದಕ್ಕಿದ್ದ ಹಾಗೆ ಯಾಕೆ ಡಲ್ ಆಗಿಬಿಟ್ಟೆಯಲ್ಲಾ... ಡೋಂಟ್‌ವರಿ ನಾನು ಬಂದಿದೀನಲ್ಲ, ಇನ್ನು ಇಲ್ಲೇ ಆ ಊರನ್ನೇ ಬಿಟ್ಟು ಬಂದು ಬಿಟ್ಟೆ'' ಎಂದ.

''ಆಂ ! ಯಾಕೆ ? ಯಾಕೆ ಹೀಗೆ ಮಾಡಿದ್ರಿ ?'' ಆಶ್ಚರ್ಯದಿಂದ ಕೇಳಿದಳು.

''ಮತ್ತಿನ್ನೇನು ಮಾಡ್ಲೀ ...? ಅಲ್ಲಿ ನೀನಿಲ್ಲ, ನೀನಿಲ್ಲದೆ ನನಗೆ ಅಲ್ಲಿ ಇರುಕ್ಕೇ ಆಗಲಿಲ್ಲ, ರಜ ಸಿಗುವುದಿಲ್ಲ ಅಂತ ತಿಳೀತು. ಸೀದಾ ಎಲ್ಲಾ ಬಿಟ್ಟು ಬಂದು ಬಿಟ್ಟೆ...''

''ನೀವು ನನಗೋಸ್ಕರ ಹೀಗೆ ಮಾಡಬಾರದಾಗಿತ್ತು. ಆಂಟಿಗೆ ತಿಳಿದರೆ ಏನಂದು ಕೊಳ್ತಾರೆ...?''

''ಇದು ನನ್ನ ಲೈಫ್, ನನಗಿಷ್ಟ ಬಂದ ಹಾಗೆ ಮಾಡ್ತೀನಿ. ಯಾರು ಏನಾದ್ರೂ ಅಂದುಕೊಳ್ಳಲಿ ಐ ಡೋಂಟ್ ಕೇರ್.''

''ಹಾಗಲ್ಲ ಸಂಕೇತ್''

''ಹಾಗೂ ಅಲ್ಲ ಹೀಗೂ ಅಲ್ಲ, ಬೀ ಕ್ವೈಟ್'' ಎನ್ನುತ್ತಾ ಅವಳ ಬಾಯಿಯ ಮೇಲೆ ಬೆರಳನ್ನಿಟ್ಟ ಅವಳು ಬೆರಳನ್ನು ಸರಿಸಿದಳು. ಅವನು ನಕ್ಕ.

''ಓ.ಕೆ. ಓ.ಕೆ. ಈಗ ನೀನು ಪ್ರೆಗ್ನೆಂಟ್ ಅಂತ ಬಿಡ್ತಿದೀನಿ...'' ಎಂದು ಹೇಳಿ ತನ್ನ ರೂಮಿಗೆ ಬಂದ. ಬಟ್ಟೆ ಬದಲಾಯಿಸಿ ಕೆಳಗಿಳಿದು ಹೋದ. ಮನೆ ಅಗತ್ಯಕ್ಕಿಂತ ಹೆಚ್ಚು ನಿಶ್ಯಬ್ಧತೆಯಿಂದ ಕೂಡಿದೆ ಅಂತೆನ್ನಿಸಿತ್ತು. ಅಡಿಗೆ ಮನೆಗೆ ಬಂದ. ಜಾನಕಿ ಸ್ಟೌವ್ ಮುಂದೆ ನಿಂತು ಏನೋ ಆಲೋಚಿಸುತ್ತಿದ್ದಳು. ಪಕ್ಕದಲ್ಲಿ ನೆರಳು ಬಿದ್ದಂತಾಯಿತು. ಆದರೂ ತಿರುಗಿ ನೋಡಲಿಲ್ಲ. ಏನೋ ಜಗ್ಗು ಎದ್ದು ಬಿಟ್ಟೇನೋ...? ಬೇಸರದಿಂದ ಕೇಳಿದಾಗ, ಸಂಕೇತನಿಗೆ ಹೇಗೆ ಹೇಗೋ ಆಯಿತು. ಆದರೂ ಮರುಗಳಿಗೆಯಲ್ಲೇ ಸಾವರಿಸಿಕೊಂಡ... ತಾನು ಬರುತ್ತಿರುವುದು ಮಮ್ಮಿಗೆ ಗೊತ್ತಿಲ್ಲ.

''ಮಮ್ಮೀ ಹೇಗಿದೀಯ ?'' ಸರ್‍ರನೆ ತಿರುಗಿದಳು ಒಂದುಗಳಿಗೆ ಜಗ್ಗೂನೇ ಮಾತನಾಡಿದ ನೇನೋ ಎನ್ನುವಷ್ಟು ದಿಗ್ಭ್ರಮೆ ಉಂಟಾಗಿತ್ತು... ಕ್ಷಣದಲ್ಲಿ ಚೇತರಿಸಿಕೊಂಡಳು...

''ಸಂಕೇತ, ನೀನೇನೋ... ಯಾವಾಗ ಬಂದೆ ?'' ಸಂಭ್ರಮದಿಂದ ಕೇಳಿದಳು.

''ಈಗ್ತಾನೇ ಬರ್ತಾ ಇದೀನಿ... ಹೇಗಿದೀಯ ಮಮ್ಮಿ...''

''ಏನೋ ಇದೀನಿ.'' ನಿಟ್ಟುಸಿರು ಬಿಟ್ಟಳು. ಜೊತೆಗೆ ಕಣ್ಣೀರು ಹರಿಯಿತು.

''ನಾನು ಬಂದಿದ್ದು ನಿನಗೆ ಸಂತೋಷವಾಗಲಿಲ್ಲವಾ ?''

''ಯಾಕೋ ಹೀಗೆ ಕೇಳ್ತೀಯ ? ನನ್ನ ಮನಸ್ಸಿಗೆ ನಿರಾಳವಾಯಿತು. ಗಂಡು ದಿಕ್ಕಿಲ್ಲದ ಮನೆ, ಸುಮತಿಗೂ ದಿನ ತುಂಬ್ತಾ ಬಂದಿದೆ. ಹೇಗಪ್ಪಾ ಅಂತ ಯೋಚಿಸ್ತಿದ್ದೆ.''

''ಯಾಕೆ ? ಹರೀಶ ಬರುತ್ತಿರಲಿಲ್ವಾ ?''

''ಬರ್ತಾನೆ. ದಿನಾ ಬರ್ತಾನೆ... ಸುಮತಿ ಅವನ ಜೊತೆ ವಾಕಿಂಗ್ ಸಹ ಹೋಗ್ತಾಳೆ... ಸುಮತಿ ಅವನಿಗೆ ತುಂಬಾ ಸಲುಗೆ ಕೊಟ್ಟು ಬಿಟ್ಟಿದಾಳೆ.'' ಸಂಕೇತನ ಮನದಲ್ಲಿ ಸಂಶಯದ ಕಿಡಿ ಹತ್ತಿತು. ಆದರೆ ಕ್ಷಣದಲ್ಲೇ ನಂದಿಸಿದ.

''ಹರೀಶನಿಗೆ ನಾನೇ ಹೇಳಿದ್ದೆ. ನಿನಗೇ ಗೊತ್ತಲ್ಲ ಸುಮತಿಯ ಸ್ವಭಾವ, ಅವಳು

ನಿಧಾನವಾಗಿ ಈ ಆಘಾತದಿಂದ ಹೊರಬರುತ್ತಿದಾಳೆ."

"ಅದು ಸರಿ ಡೆಲಿವರಿಗೆ ಇನ್ನು ಸಮಯವಿದೆ. ಇಷ್ಟು ಬೇಗ ಯಾಕೆ ಬಂದೆ ? ಅಷ್ಟೊಂದು ರಜ ಸಿಗುತ್ತಾ ?"

"ಇಲ್ಲ, ನಾನು ರಿಸೈನ್ ಮಾಡಿ ಬಂದು ಬಿಟ್ಟೆ ನಾನು ಮತ್ತೆ ಅಲ್ಲಿಗೆ ಹೋಗುಲ್ಲ. ಇಲ್ಲೇ ಯಾವುದಾದರೂ ಕೆಲಸಕ್ಕೆ ಸೇರಿಕೊಳ್ತೀನಿ... ಅಥವಾ ಬಿಸಿನೆಸ್ ಮಾಡ್ತೀನಿ." ಜಾನಕಿ ಏನೂ ಹೇಳಲಿಲ್ಲ. ತನಗೆ ಒಂದು ಮಾತನ್ನು ತಿಳಿಸದೇ ತಾನೇ ಎಲ್ಲಾ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಾನೆ. ತನ್ನ ಯಾವ ಮಾತನ್ನು ಕೇಳುವುದಿಲ್ಲ ಎಂಬ ಅಸಮಾಧಾನವಿದ್ದೆ ಇತ್ತು. ಸಂಕೇತ ಗಮನವನ್ನೇ ಕೊಡಲಿಲ್ಲ. ಮನೆಯನ್ನೆಲ್ಲಾ ಸುಮ್ಮನೇ ಎಂಬಂತೆ ನೋಡಿದ. ಏನೋ ಮಿಸ್ಸಿಂಗ್ ಅಂತ ಅನ್ನಿಸಿತ್ತು. ಮತ್ತೆ ಸುಮತಿಯ ಬಳಿಗೆ ಬಂದ.

"ಮನೆಯ ವಾತಾವರಣ ಏನೋ ಬದಲಾಗಿದೆ ಅಂತ ಅನ್ನಿಸ್ತಿದೆ."

"ಇಲ್ಲವಲ್ಲ... ಎಲ್ಲಾ ಹೇಗಿತ್ತೋ ಹಾಗೆ ಇದೆ..."

"ಇಲ್ಲ ಸುಮತಿ. ಏನೋ ಚೇಂಜ್ ಇದೆ. ತಕ್ಷಣಕ್ಕೆ ನನಗೆಗೊತ್ತಾಗ್ತಿಲ್ಲ. ಆದರೂ, ಸಂಥಿಂಗ್, ಐ ಆಮ್ ಮಿಸ್ಸಿಂಗ್ ಅನ್ನೋ ಫೀಲಿಂಗ್ ಇದೆ..."

"ಮಮ್ಮೀನ ಕೇಳಲಿಲ್ವಾ ?"

"ಇಲ್ಲ... ಮಮ್ಮಿ ನನ್ನನ್ನ ಜಗ್ಗು ಅಂತ ತಿಳಿದುಕೊಂಡು, ಏನೋ ಗೊಣಗಿದಳು. ಆಮೇಲೆ, ನಾನು ಮಾತಾಡಿದ ಮೇಲೆ ಅವಳಿಗೆ ಗೊತ್ತಾದದ್ದು..."

"ಜಗ್ಗು ಈ ಮನೇಲಿಲ್ಲ... " ಕೆಳದನಿಯಲ್ಲಿ ಹೇಳಿದವಳನ್ನು ನಂಬದವನಂತೆ ದಿಟ್ಟಿಸಿದ.

"ಏನಂದೆ ? ಜಗ್ಗು ಇಲ್ಲಿಲ್ಲ... ಮತ್ತೆಲ್ಲಿಗೆ ಹೋದ ? ಕಳೆದು ಹೋದ್ನಾ ?"

"ಇಲ್ಲ, ಆಂಟೀನೇ ಕರೆದುಕೊಂಡು ಹೋಗಿ, ಯಾವುದೋ 'ಹೋಂ'ಗೆ ಸೇರಿಸಿ ಬಂದಿದಾರೆ..." ವ್ಯಥೆಯಿಂದ ಹೇಳಿದಳು.

"ತಮಾಷೆ ಮಾಡ್ತಿಲ್ಲ ತಾನೇ... ಮಮ್ಮೀನೇ ಸೇರಿಸಿ ಬಂದ್ಲಾ? ಒಳ್ಳೇದೇ ಆಯ್ತು."

"ಹೌದು ಸಂಕೇತ್, ತಮಾಷೆಯಲ್ಲ, ನನಗೆ ತೊಂದರೆ ಆಗದಿರಲಿ ಅಂತ ಆಂಟಿ ಹೀಗೆ ಮಾಡಿದಳು."

"ಮತ್ತೆ ನಿನ್ನ ಬಳಿಗೆ ಬಂದಿದ್ನಾ ಲೋಫರ್... ಚೆನ್ನಾಗಿ ಬಾರಿಸಬೇಕಾಗಿತ್ತು."

"ಇಲ್ಲ ಸಂಕೇತ್... ಅವನೆಂದೂ ಬಂದಿಲ್ಲ, ನಾನೂ ಅವನನ್ನು ಮಾತನಾಡಿಸಲಿಲ್ಲ."

"ಒಳ್ಳೆಯ ಕೆಲಸವನ್ನೇ ಮಾಡಿದೆ..."

''ಅದರಿಂದ ಅವನ ಕೋಪ ಹೆಚ್ಚಾಗಿತ್ತಂತೆ. ಸಿಕ್ಕಿ ಸಿಕ್ಕಿದ್ದನ್ನೆಲ್ಲಾ ಕಿತ್ತು ಬಿಸಾಡ್ತಿದ್ನಂತೆ... ಹಠ, ರಗಳೆ ಎಲ್ಲಾ ಜಾಸ್ತಿಯಾಗಿತ್ತಂತೆ... ಮನೇಲೇ ಇದ್ದರೆ ಅವನ ಸಮಸ್ಯೆ ಹೆಚ್ಚಾಗುತ್ತೆ ಅಂತ ಆಂಟಿ, ಅವರೇ ಹೋಗಿ ಅಲ್ಲಿ ಬಿಟ್ಟು ಬಂದರು.''

''ಸಧ್ಯ, ಮಮ್ಮೀಗೆ ಈಗಲಾದ್ರೂ ಅರ್ಥವಾಯಿತಲ್ಲ'' ಎಂದು ಬಾಯಿ ಹೇಳಿದರೂ, ಮಮ್ಮಿಗೆ ಇದರಿಂದ ತುಂಬಾ ಕಷ್ಟವಾಗಿದೆ ಎಂದು ಅರ್ಥವಾಗಿತ್ತು.

''ಮಮ್ಮೀ ತುಂಬಾ ಅಪ್ಸೆಟ್ ಆಗಿರಬಹುದು ಅಲ್ವಾ ?''

''ಹುಂ. ತುಂಬಾ ಮಂಕಾಗಿ ಬಿಟ್ಟಿದಾರೆ. ಸದಾ ಅಡಿಗೆ ಮನೇಲೇ ಇರ್ತಾರೆ...'' ಸಂಕೇತ ಉತ್ತರಿಸಲಿಲ್ಲ.

ಹರೀಶನಿಗೂ ಸಂಕೇತನನ್ನು ಕಂಡು ಅಚ್ಚರಿ ''ಇದೇನೋ ಹೀಗೆ... ದಿಢೀರನೇ..'' ಎಂದ.

''ಹೂಂ... ಹೀಗೇ... ದಿಢೀರನೇ, ಬರಬೇಕೂಂತ ಅನ್ನಿಸ್ತು ಬಂದುಬಿಟ್ಟೆ''

''ಅಷ್ಟು ಸುಲಭವಾಗಿ, ಬೇಕೂಂತ ಅಂದಾಗ ರಜ ಸಿಗುತ್ತೇನೋ...''

''ಪೂರ್ಣ ರಜ ಹಾಕಿ ಬಂದು ಬಿಟ್ಟೆ''

''ಅಂದರೆ...?''

''ಹೂಂ. ಊರು, ಕೆಲಸ ಎಲ್ಲವನ್ನು ಬಿಟ್ಟು ಬಂದುಬಿಟ್ಟೆ ಇಲ್ಲೇ ಯಾವುದಾದರೂ ಕೆಲಸಕ್ಕೆ ಸೇರಿಕೊಳ್ತೀನಿ.''

''ಗುಡ್ ಐಡಿಯಾ... ಎಷ್ಟೋ ಸಾರಿ ನಾನೇ ನಿನಗೆ ಹೇಳೋಣ ಅಂತ ಅಂದುಕೊಂಡಿದ್ದೆ... ಆದರೆ ಹೇಳುವ ಧೈರ್ಯ ಬಂದಿರಲಿಲ್ಲ.''

''ಹೇಳಿ ನೋಡಬೇಕಾಗಿತ್ತು.... ಇದೇನಾ ಫ್ರೆಂಡುಷಿಪ್ಪು...?''

''ಹೋಗಲಿ ಬಿಡು. ಈಗಲಾದ್ರು ಮನಸ್ಸು ಮಾಡಿದೆಯಲ್ಲ, ಸುಮತಿಗೆ ಈ ಸಮಯದಲ್ಲಿ ನಿನ್ನ ಅವಶ್ಯಕತೆ ತುಂಬಾ ಇದೆ.''

''ಹೌದು. ಅದೇ ಜವಾಬ್ದಾರಿಗೋಸ್ಕರ ಬಂದು ಬಿಟ್ಟೆ... ಈಗ ನೀನು ಹೇಳು, ನೀನು ಹೇಗಿದೀಯ ? ವಿಮಲ ಹೇಗಿದಾರೆ ?'' ಅಲ್ಲೆ ಇದ್ದ ಸುಮತಿ ಕತ್ತೆತ್ತಿ ನೋಡಿದಳು. ಹರೀಶ ಸುಮ್ಮನಿರು ಅನ್ನುವಂತೆ ಸಂಜ್ಞೆ ಮಾಡಿದ. ಸುಮತಿ ಅದನ್ನು ಕಂಡಳು. ಈ ವಿಮಲ ಯಾರು ? ಸಂಕೇತನಿಗೆ ವಿಮಲ ಹೇಗೆ ಪರಿಚಯ ? ಒಂದುಗಳಿಗೆ ಸಂಶಯದ ಸುಳಿ ಸುತ್ತಿತ್ತು. ಹಾಗೇ ಇಳಿದು ಹೋಯಿತು. ಒಡಲಿನೊಳಗೆ, ಮಗು ಒದೆಯಲು ಪ್ರಾರಂಭಿಸಿತ್ತು. ಬಸಿರ ಮೇಲೆ ಕೈಯಾಡಿಸಿಕೊಂಡಳು. ಹರೀಶ ಹೊರಟು ಹೋದ.

"ನಿನ್ನ ಡೆಲಿವರಿಗೆ ಕೇವಲ ಎರಡು ವಾರಗಳು ಮಾತ್ರ ಬಾಕಿ ಇವೆ. ಈಗ ನಾನು ಬಂದಿದೀನಿ. ಎಲ್ಲಾದ್ರೂ ತಿರುಗಾಡಿ ಬರೋ ಆಸೆ ಇದ್ದರೆ ಹೇಳು. ಕರೆದುಕೊಂಡು ಹೋಗಿ ಬರ್ತೀನಿ"

"ನನಗೆ, ಭದ್ರಾವತಿಗೆ ಹೋಗಿ, ನನ್ನ ತಂದೆ, ತಾಯಿ ಎಲ್ಲರನ್ನೂ ನೋಡಬೇಕೆಂಬ ಆಸೆ... ಹೋಗಿ ಬರೋಣ್ವಾ ?"

"ಓ... ಕೆ... ಮಮ್ಮೀನೂ ಕರೆದುಕೊಂಡು ಹೋಗೋಣ. ಈಗ ಅವಳೂ ಫ್ರೀಯಾಗಿದಾಳೆ" ಎಂದ. ಸುಮತಿ ತಲೆಯಾಡಿಸಿದ್ದಳು.

"ಆದರೆ ಜಾನಕಿ ಒಪ್ಪಲಿಲ್ಲ. ನನಗೆ ಎಲ್ಲಿಗೂ ಬರುವ ಮನಸ್ಸಿಲ್ಲ. ನೀವಿಬ್ಬರೂ ಹೋಗಿ ಬನ್ನಿ..." ಎಂದು ನಯವಾಗಿ ನಿರಾಕರಿಸಿದ್ದಳು.



ಮಗಳು ಅಳಿಯನನ್ನು ಸಂಭ್ರಮದಿಂದ ಸ್ವಾಗತಿಸಿದರು. ಮಗಳನ್ನು ಕಣ್ತುಂಬಾ ನೋಡಿದರು... ಮಹಾಲಕ್ಷ್ಮಿಯಂತೆ ಕಂಗೊಳಿಸುತ್ತಿದ್ದಾಳೆ... ಸಂಕೇತ ಕೈ ಹಿಡಿಯದೇ ಇದ್ದಿದ್ದರೆ ಏನು ಗತಿಯಾಗಿ ಹೋಗುತ್ತಿತ್ತೋ...? ಅಳಿಯನನ್ನು ಅಭಿಮಾನದಿಂದ ನೋಡಿದರು. ಮದುವೆಯಾದ ಕೆಲವೇ ದಿನಗಳಲ್ಲಿ ಸಂಕೇತ ಊರಿಗೆ ಹೊರಟು ಹೋಗಿದ್ದ. ಸುಮತಿಯೂ ಅನಾರೋಗ್ಯದ ನೆವ ಮಾಡಿ ಬಂದಿರಲೇ ಇಲ್ಲ. ಈಗ ನೆಮ್ಮದಿಯಿಂದ ಇಬ್ಬರೂ ಇದಾರೆ... ಅಷ್ಟು ಸಾಕು ಹಾರೈಸಿದರು.

ಕೇಲಲ ಎರಡು ಮೂರು ದಿನಗಳಿಗೆಂದು ಬಂದಿರುವರೆಂದು ತಿಳಿದು, ಮಾರನೇ ದಿನವೇ ಬಳೆ ತೊಡಿಸುವ ಶಾಸ್ತ್ರವನ್ನು ನೆರವೇರಿಸಿದರು. ಹಸಿರು ಬಣ್ಣದ, ಸೀರೆ, ಹಸಿರು ಬಣ್ಣದ ರವಿಕೆ, ತೊಟ್ಟು ಮಡಿಲನ್ನು ಫಲಗಳಿಂದ ತುಂಬಿಸಿಕೊಂಡಳು... ಚಿಂತಾಮಣಿಯಿಂದ ಹೇಮಳೂ ಬಂದಿದ್ದಳು. ಸಂಕೇತ, ಅವಳೊಡನೆಯೂ ವಿಮಲಳ ಬಗ್ಗೆ ವಿಚಾರಿಸಿದ... ಹೇಮ ಯಾವುದೋ ಮಾತು ಮಾತಿಗೆ ಬಂದು ವಿಮಲಳ ಬಗ್ಗೆ ಹೇಳಿದಳು. "ಸಂಕೇತನಿಗೆ, ವಿಮಲಳ ಪರಿಚಯ ಇದೆಯಾ ? ಅದೇ ಹರೀಶನ ಕಸಿನ್ ? ಅವರಿವರಿಗೆ ಹೇಗೆ ಗೊತ್ತು ? ಸಂಕೇತ ನಮ್ಮೂರಿಗೆ ಬಂದಿದ್ರಂತೆ..." ಅಶೋಕ ಹೇಳಿದರು.

"ವಿಮಲ ಯಾರು ?" ಸುಮತಿ ಸಂಶಯದಿಂದ ಪ್ರಶ್ನಿಸಿದಳು.

"ವಿಮಲ ನನ್ನ ನಾದಿನಿ... ಎಷ್ಟು ಚೆನ್ನಾಗಿದಾಳೆ ಗೊತ್ತಾ ?"

"ಅವಳ ಫೋಟೋ ಇದೆಯಾ ? ಇದ್ದರೆ ತೋರಿಸು ನೋಡೇ ಬಿಡ್ತೀನಿ."

"ಇಲ್ಲ ಅವಳು ಮದುವೆಗೆ ಬಂದಿರಲಿಲ್ಲ..." ವಿಮಲ, ಈ ಹೆಸರನ್ನು ಈ ಮುಂಚೆಯೂ ಸಂಕೇತನ ಬಾಯಿಂದ ಕೇಳಿದೀನಿ... ಸಂಕೇತ ಹರೀಶನೊಂದಿಗೆ, ವಿಮಲಳನ್ನು ನೋಡಲು ಏಕೆ ಹೋಗಿದ್ದರು ? ಮತ್ತೆ ಹೇಮಳೊಡನೆ ಮಾತನಾಡುವ ಅವಕಾಶವಾಗಲಿಲ್ಲ, ಹೇಮ ಅದೇ ರಾತ್ರಿ ವಾಪಸ್ಸು ಹೊರಟು ಬಿಟ್ಟಳು.

ಈ ವಿಮಲ ಹರೀಶನಿಗೆ ಕಸಿನ್ ಆದರೆ ಸಂಕೇತನಿಗೆ ಎಂತಹ ಸ್ನೇಹ. ಕೇಳಿಯೇ ತಿಳಿದುಕೊಳ್ಳಬೇಕೆಂದು, ದಾರಿಯಲ್ಲಿ ಮಾತನ್ನೆತ್ತಿದಳು.

"ವಿಮಲ ನಿಮಗೆ ಗೊತ್ತಾ ?"

"ವಿಮಲ ! ಯಾವ ವಿಮಲ ...?"

"ನಿಮ್ಮ ಸ್ನೇಹಿತೆ, ಹರೀಶನ ಕಸಿನ್..."

"ನನ್ನ ಸ್ನೇಹಿತೆ ಅಂತ ನಿನಗ್ಯಾರು ಹೇಳಿದ್ರು ?"

"ಹೇಗೋ ಗೊತ್ತಾಯ್ತು... ನೀವು ಯಾಕೆ ನನಗೆ ಅವಳ ಬಗ್ಗೆ ಹೇಳಿರಲಿಲ್ಲ...?"

"ಏನೂಂತ ಹೇಳಬೇಕಾಗಿತ್ತು. ಹರೀಶನ ಕಸಿನ್, ವಿಮಲ ಅಂತ ಒಬ್ಬಳಿದಾಳೆ ಅಂತ ಹೇಳಬೇಕಾಗಿತ್ತಾ ?"

"ಜೋಕ್ ಅಲ್ಲಸಂಕೇತ್... ಅವಳ ಊರಿಗೆ ಹೋಗಿದ್ರಂತೆ... ನೋಡೋಕೆ ತುಂಬಾ ಚೆನ್ನಾಗಿದಾಳಂತೆ."

"ನೀನೇ ಎಲ್ಲಾ ಹೇಳ್ತಿದೀಯ. ನಾನೇನು ಹೇಳೋದು ಬಾಕಿ ಇದೆ ?"

"ಬಾಕಿ ಇದೆ. ಸಂಕೇತ್. ಬಾಕಿ ಇದೆ..." ಎಂದು ತನಗೆ ತಾನೇ ಹೇಳಿಕೊಂಡು ಸುಮ್ಮನಾದಳು. ಸಂಕೇತ ಕಿರುನಗೆ ನಕ್ಕು ಸುಮ್ಮನಾದ. ಸುಮತಿ ಓರೆನೋಟದಲ್ಲಿ ಗಮನಿಸಿದಳು.

ವಾಪಸ್ಸು ಬೆಂಗಳೂರನ್ನು ತಲುಪಿದ ಒಂದೆರಡು ದಿನಗಳಲ್ಲೇ, ಸುಮತಿಗೆ ಹೆರಿಗೆಯ ನೋವು ಪ್ರಾರಂಭವಾಗಿತ್ತು. ಕಳ್ಳನೋವು ಅಂತ, ಪ್ರಯಾಣದ ಆಯಾಸಕ್ಕೆ ಹಾಗೆ ಬರುತ್ತೆ... ಏನೂ ಆಗುಲ್ಲ ರೆಸ್ಟ್ ತಗೊಳ್ಳಲಿ, ಸರಿಹೋಗುತ್ತದೆ' ಎಂದು ಹೇಳಿದರೂ, ಸಂಕೇತ, ಆತಂಕದಿಂದ ಅವಳನ್ನು ನರ್ಸಿಂಗ್ ಹೋಂಗೆ ಕರೆತಂದು ಸೇರಿದ. ಗಳಿಗೆ ಗಳಿಗೇನೂ ಅವಳಿಗೆ ನೋವು ಹೆಚ್ಚಾಯಿತು. ಸಂಕೇತ ಆತಂಕದಿಂದ ತಾಯಿಗೆ ಫೋನು ಮಾಡಿ, ಅವಳಿಗೂ ಬರುವಂತೆ ಹೇಳಿದ. ವಿಷಯ ತಿಳಿದ ಕೂಡಲೇ ಹರೀಶನೂ ಓಡಿ ಬಂದಿದ್ದ. ಬೆಳಗಿನ ಝಾವದ ಹೊತ್ತಿಗೆ ಸುಮತಿ ಗಂಡು ಮಗುವಿಗೆ ಜನ್ಮವಿತ್ತಳು. ಮಗುವಿನ ಮುದ್ದು ಮುಖವನ್ನು ನೋಡಿದ ಕೂಡಲೇ ಸುಮತಿ ತಾನು ಪಟ್ಟ ಕಷ್ಟಗಳನನೆಲ್ಲಾ ಮರೆತಳು... ಮಂದಹಾಸದಿಂದ ಮಗುವನ್ನು

ಮುದ್ದಾಡಿದಳು. ಈ ಮಗುವಿಗೋಸ್ಕರ ತನ್ನೆಲ್ಲಾ ನೋವನ್ನು ಮರೆತಿದ್ದಳು. ಸಾರ್ಥಕವೆನಿಸಿತ್ತು. ಲೇಬರ್ ವಾರ್ಡಿನ ಹೊರಗೆ ಇದ್ದವರಿಗೂ ಸಿಸ್ಟರ್, ಮಗುವನ್ನು ಕರೆತಂದು ತೋರಿಸಿದಳು. ಸಂಕೇತ ಉದ್ವೇಗ ಗೊಂಡಿದ್ದ, ಹೆಮ್ಮೆಯಿಂದ ನೋಡಿಯೇ ನೋಡಿದ.

''ಮಮ್ಮೀ ಬೇಬೀನ ನೋಡಿದ್ಯಾ ? ಚಿಕ್ಕ ಮಗುವಾಗಿದ್ದಾಗ ನಾನು ಹೀಗೇ ಇದ್ದೆನಾ ?'' ಕುತೂಹಲದಿಂದ ಕೇಳಿದ.

''ನಂಗೆ ಜ್ಞಾಪಕವಿಲ್ಲ'' ಎಂದು ಹೇಳಿದರೂ, ಮಗುವನ್ನು ನೇರವಾಗಿ ನೋಡಲು ಹಿಂಜರಿದಳು ಜೊತೆಗೆ ಏನೋ ಆತಂಕ, ಸಂದೇಹ...

''ಏಳನೇ ತಿಂಗಳಿಗೇ ಮಗು ಹುಟ್ಟಿದೆ... ಮಗೂನ ಇನ್‌ಕ್ಯೂಬೇಟರ್‌ನಲ್ಲಿ ಇಡುವ ಬದಲು, ಹೊರಗೆಲ್ಲಾ ಎತ್ತಿಕೊಂಡು ಬರ್ತಿದಾರಲ್ಲ... ಎಂದುಕೊಂಡು,

''ನಾನು ಅರ್ಜೆಂಟಾಗಿ ಡಾಕ್ಟರ ಹತ್ತಿರ ಮಾತನಾಡಬೇಕು'' ಎಂದಳು. ನರ್ಸು ಜಾನಕಿಯನ್ನು ಡಾಕ್ಟರ ಬಳಿಗೆ ಕರೆದುಕೊಂಡು ಹೋದಳು.

''ನನ್ನ ಲೆಕ್ಕದ ಪ್ರಕಾರ, ಏಳನೇ ತಿಂಗಳಿನಲ್ಲಿ ಡೆಲಿವರಿಯಾಗಿದೆ. ಮಗೂನ ಹೊರಗೆಲ್ಲಾ ತಂದು ತೋರಿಸ್ತಿದಾರೆ... ಮಗುವಿಗೆ ತೊಂದರೆ ಆಗುಲ್ವಾ ?''

''ಹಾಗೇನಿಲ್ಲ, ಒಂಭತ್ತು ತಿಂಗಳು ತುಂಬಿದೆ. ಬಹುಶಃ ಸುಮತಿ ಸರಿಯಾಗಿ ಲೆಕ್ಕ ಇಟ್ಟುಕೊಂಡಿರಲಿಲ್ಲ ಅಂತ ಕಾಣುತ್ತೆ... ಮಗು ಎಲ್ಲಾ ರೀತಿಯಿಂದಲೂ ಆರೋಗ್ಯವಾಗಿದೆ. ಯಾವ ಭಯವೂ ಬೇಡ'' ಎಂದಿದ್ದಳು. ಆದರೂ ಜಾನಕಿಗೆ ಡಾಕ್ಟರರ ಮಾತಿನ ಮೇಲೆ ವಿಶ್ವಾಸ ಹುಟ್ಟಲಿಲ್ಲ, ಮಗು ಏಳನೇ ತಿಂಗಳಲ್ಲಿ ಹುಟ್ಟಿದೆ. ಎಲ್ಲಾ ರೀತಿಯಿಂದಲೂ ಆರೋಗ್ಯವಾಗಿರಲು ಸಾಧ್ಯವೇ ಇಲ್ಲ... ಸಂಕೇತ, ಸುಮತಿ ಇಬ್ಬರೂ ಸೇರಿ ನನ್ನ ಮೇಲೆ ಯಾವುದೋ ಸೇಡನ್ನು ತೀರಿಸಿಕೊಳ್ಳಲು ಏನೋ ಪ್ಲಾನ್ ಮಾಡಿದಾರೆಂದೇ ಭಾವಿಸಿದಳು.

''ನಾನು ಮನೆಗೆ ಹೋಗ್ತೀನಿ. ನನಗೆ ಇಲ್ಲಿಯ ವಾಸನೆಯಿಂದ ತಲೆನೋವು ಬರ್ತಿದೆ...'' ಸಂಕೇತ ಬೇಡ ಎನ್ನಲಿಲ್ಲ, ತಾಯಿ ಇದುವರೆಗೂ ಮಗುವಿನ ಬಗ್ಗೆ ಯಾವ ಮಾತನ್ನೂ ಆಡಿಲ್ಲ... ಮುಖವನ್ನು ನೋಡಲಿಲ್ಲ ಎಂದು ಅವನಿಗೆ ಗೊತ್ತಾಗಿತ್ತು. ತಾಯಿಯ ಮನಸ್ಸಿನಲ್ಲಿ ಏನು ನಡೆಯುತ್ತಿದೆ ಎನ್ನುವುದರ ಬಗ್ಗೆ ಊಹೆ ಮಾಡಿದ್ದ, ಸುಮತಿಯ ಜೊತೆಗೆ ಇರಲು ಒಬ್ಬಳು ನರ್ಸನ್ನು ಗೊತ್ತು ಮಾಡಿ, ತಾನೂ ಹರೀಶನೊಂದಿಗೆ ಮನೆಗೆ ಬಂದ.. ಮನೆಗೆ ಬಂದವಳೇ, ಜಾನಕಿ, ಸ್ನಾನಮಾಡಿ, ದೇವರ ಮುಂದೆ ತುಪ್ಪದ ದೀಪಗಳನ್ನು ಹಚ್ಚಿಟ್ಟು ದೇವರಲ್ಲಿ ಪ್ರಾರ್ಥಿಸಿದಳು. ಸಂಕೇತ ಹರೀಶ ಇಬ್ಬರೂ ಸ್ವಲ್ಪ ಹೊತ್ತು ನಿದ್ರಿಸಿ, ಮತ್ತೆ ನರ್ಸಿಂಗ್ ಹೋಂಗೆ ಬಂದರು.

ಮಗುವಿಗೆ ಹಾಲೂಡಿಸುತ್ತಿದ್ದ ಸುಮತಿ, ಸಂಕೇತನನ್ನು ಕಂಡು ಸಂಕೋಚಗೊಂಡಳು. ಸಾರಿ ಎಂದುಹೇಳಿ ಸಂಕೇತ ಹೊರಗೆ ಹೊರಟ. ಸುಮತಿಯ ಮಡಿಲ ತುಂಬಾ ಮಲಗಿರುವ ಮಗು ತನ್ನದು... ಮತ್ತೆ ಮತ್ತೆ ಮಗುವನ್ನು ನೋಡಬೇಕು, ಎತ್ತಿ ಮುದ್ದಾಡಬೇಕು ಎಂದುಕೊಳ್ಳುತ್ತಿದ್ದವನನ್ನು ಸುಮತಿ ಕರೆದು, ಮಗುವನ್ನು ಅವನ ಕೈಗಿತ್ತಳು.

''ಒಂಭತ್ತು ತಿಂಗಳು ನನ್ನ ಒಡಲಲ್ಲಿ ಇಟ್ಟುಕೊಂಡು ಜೋಪಾನ ಮಾಡಿದೀನಿ... ನನ್ನ ಜವಾಬ್ದಾರಿ ಮುಗೀತು. ಇನ್ನು ಇವನು ನಿಮಗೆ ಸೇರಿದವನು'' ಎಂದಳು.

''ರೈಟ್... ಆದರೆ ಹಸಿವಾದಾಗ...'' ಅಷ್ಟರಲ್ಲಿ ಹರೀಶ ಒಳಗೆ ಬಂದಾಗ ಮಾತು ಮುಂದುವರೆಯಲಿಲ್ಲ. ಹರೀಶ ಮಗುವಿನ ಕೆನ್ನೆಯನ್ನು ಹಿಂಡಿದ. ಕೆನ್ನೆ ಕೆಂಪಾಗಿತ್ತು. ಮಗು ಅಳುವಿನ ಮುಖ ಮಾಡಿತು... ಸಂಕೇತ ಅವನ ಕೈಮೇಲೆ ಮೆಲ್ಲಗೆ ಒಂದೇಟು ಹಾಕಿದ. ''ಹರ್ಟ್'' ಮಾಡಬೇಡ ಬೇಬಿಗೆ.

''ಏನು ಹೆಸರು ಇಡಬೇಕೂಂತ ಇದೀಯ... ನಿನ್ನ ಬೇಬಿಗೆ...?''

''ಪುನೀತ್ ಅನ್ನೋ ಹೆಸರು ಚೆನ್ನಾಗಿದೆ ಅಲ್ವಾ ?'' ಸುಮತಿಗೂ ಇಷ್ಟವಾಯಿತು.

''ನಾಮಕರಣ ಫಂಕ್ಷನ್ ಮಾಡ್ತಿಯೇನೋ ...?''

''ಹೂಂ. ಮಾಡೋಣ ಅದಕ್ಕೇನಂತೆ... ಈಗ ನೀನೇ ಸಹಾಯ ಮಾಡಬೇಕಪ್ಪಾ'' ಹರೀಶ ಇಲ್ಲ ಎನ್ನಲಿಲ್ಲ.

ಜಾನಕಿಗೆ ಮಾತ್ರ ಯಾಕೋ, ಎಲ್ಲರನ್ನು ಕರೆದು ಫಂಕ್ಷನ್ ಮಾಡುವ ಮನಸ್ಸೇ ಇರಲಿಲ್ಲ...ಸಂಕೇತ ವಿಚಿತ್ರವಾಗಿ ಆಡ್ತಿದಾನೆ. ಎಂದೂ ಇಷ್ಟು ಸಂಭ್ರಮ ಪಟ್ಟವನಲ್ಲ. ಯಾಕೆ ಹೀಗಾಡುತ್ತಾನೆ ? ಇವನೂ ಜಗ್ಗೂ ತರಹ ಮಂಕಾಗಿ ಬಿಟ್ಟಿದಾನೆಯೆ ? ಒಟ್ಟಿನಲ್ಲಿ ಸುಮತಿ ಈ ಮನೆಗೆ ಬಂದು, ನನ್ನ ಇಬ್ಬರು ಮಕ್ಕಳನ್ನು ಮಂಕು ಮಾಡಿ ಬಿಟ್ಟಳು ಅಂತ ಒಂದುಗಳಿಗೆ ಅನ್ನಿಸಿದರೆ, ಮರುಗಳಿಗೆಯೇ, ಇದರಲ್ಲಿ ತನ್ನದೇ ತಪ್ಪು ಪೇಯಿಂಗ್ ಗೆಸ್ಟ್ ಇಟ್ಟುಕೊಂಡುದೇ ಸರಿಯಾಗಲಿಲ್ಲ ಅಂತಲೂ ಅನ್ನಿಸುತ್ತಿತ್ತು. ಸುಮತಿ ಡಿಸ್ಚಾರ್ಜ್ ಆಗಿ ಮನೆಗೆ ಬಂದಿದ್ದಳು ಮಗುವಿನ, ಬಾಣಂತಿಯ ಆರೈಕೆ ಮಾಡಲು, ಇನ್ನು ಒಬ್ಬಳು ಕೆಲಸದವಳನ್ನು ಗೊತ್ತು ಮಾಡಿಕೊಂಡಿದ್ದರು.

''ನಮ್ಮ ಕಡೆಯ ರಿಲೇಟಿವ್ಸ್ ಯಾರು ಯಾರನ್ನು ಇನ್ವೈಟ್ ಮಾಡಬೇಕೂಂತ ಹೇಳ್ತೀಯಾ ?'' ಸಂಕೇತ ಕೇಳಿದ್ದ.

''ಬರೀ ಮನೆಮನೆಯವರೇ ಸಾಕು... ಹೊರಗಿನವರೆಲ್ಲ ಯಾಕೆ ?''

''ನಿನಗೂ ಆಸೆ ಇತ್ತು ಅಲ್ವಾ ಮಮ್ಮೀ... ಫಂಕ್ಷನ್ ಮಾಡಬೇಕು, ನೆಂಟರುಗಳನ್ನು ಇನ್ವೈಟ್ ಮಾಡಬೇಕು ಅಂತ...''

''ನನ್ನ ಆಸೆಗಳು ಬೇಕಾದಷ್ಟಿದ್ದವು. ಎಲ್ಲಾ ಎಲ್ಲಿ ನಡೀತು ? ನಿಮ್ಮ ನಿಮ್ಮ ಇಷ್ಟ ಏ ಬೇಕಾದ್ರೂ ಮಾಡಿಕೊಳ್ಳಿ.''

''ನಿನಗೆ ಯಾಕೆ ಕೋಪ ಅಂತ ? ಬಾಯಿಬಿಟ್ಟು ಹೇಳಬಾರದಾ ?''

''ನಿಜ ಹೇಳು ಸಂಕೇತ್... ನೀನ್ಯಾಕೆ ಈ ನಾಟಕಗಳನ್ನಾಡುತ್ತಿದೀಯ ಅಂತ ಸುಮತೀನ ಇಂಪ್ರೆಸ್ ಮಾಡೋಕಾ ? ಅಥವಾ ನನ್ನನ್ನು ಮೆಚ್ಚಿಸ್ತೋಕೋ ?

''ನಾನೇಕೆ ಇಂಪ್ರೆಸ್ ಮಾಡಲಿ ? ನನಗೆ ಅದರ ಅಗತ್ಯವಿಲ್ಲ. ಅಲ್ಲದೇ ನನಗೆ ಅದೇ ಗೊತ್ತೇ ಇಲ್ಲ.''

''ಮತ್ತೆ ಯಾಕೆ ಇಷ್ಟು ಸಂಭ್ರಮ ಪಡ್ತಿದೀಯ ಈ ಮಗುಗೋಸ್ಕರ ?''

''ಯಾಕೇಂದ್ರೆ... ಈ ಮಗುವಿನ ತಂದೆ ನಾನು...'' ಜಾನಕಿ ಅತ್ತ ಮುಖವ ತಿರುಗಿಸಿದಳು... ಸಂಕೇತ ಅವಳನ್ನು ತನ್ನ ಕಡೆಗೆ ತಿರುಗಿಸಿಕೊಂಡ.

''ನಿನಗೆ ಯಾಕೆ ಇನ್ನು ಅನುಮಾನ... ಯಾವ ಅನುಮಾನ ? ನೀನು ಇವ ಹೇಳಲೇಬೇಕು'' ಬಲವಂತ ಪಡಿಸಿದ.

''ನನ್ನ ಮನಸ್ನಲ್ಲಿ ಆ ಅನುಮಾನ ಇದ್ದೇ ಇದೆ... ನಿಮ್ಮಿಬ್ಬರ ಮದುವೆ ನಡೆಯೋ ಮೊದಲೇ ಆ ಘಟನೆ ನಡೆದಿದ್ದು'' ಸಂಕೇತ ಅವಳನ್ನು ಬಿಟ್ಟ.

''ಅಂತೂ, ನಾವಿಬ್ಬರೂ ಹ್ಯಾಪಿಯಾಗಿರೋದು ನಿನಗೆ ಬೇಕಿಲ್ಲ. ನಾವು ಯಾವುದ ಮರೆಯಲು ಪ್ರಯತ್ನಿಸುತ್ತಿದೇವೋ ಅದನ್ನು ನೀನು ಮರೆತಿಲ್ಲ... ಒಟ್ನಲ್ಲಿ ಜಗ್ಗು ನನ್ನ ಲೈಫಿ ಎಲ್ಲಾ ಖುಷಿಯನ್ನು ಕಿತ್ತುಕೊಳ್ಳುತ್ತಿದಾನೆ ... ಮಮ್ಮೀ... ನೀನೂ ಒಬ್ಬಳು ಹೆಂಗಸು, ಸುಮತಿ ಎಷ್ಟು ಹರ್ಟ್ ಆಗಬಹುದು ಅಂತ ತಿಳಿಯಬೇಡ್ವಾ ?''

''ನನ್ನಲ್ಲಿ ಎಷ್ಟು ಆತಂಕ ತುಂಬಿದೆ ಅಂತ ನಿನಗೆ ಗೊತ್ತಿಲ್ಲ.''

''ನಿನಗೆ ನಿಜ ಏನೂಂತ ಗೊತ್ತಿಲ್ಲ... ನಾನು ಡಿ.ಎನ್.ಎ. ಟೆಸ್ಟ್ ಮಾಡಿಸಿ ಪ್ರೂ ಮಾಡಬಲ್ಲೆ. ಈ ಮಗು ನನ್ನದೇ ಅಂತ... ಆದರೆ ಆ ಅಗತ್ಯ ನನಗಿಲ್ಲ. ನಾನು ಯಾರ ಮೆಚ್ಚಿಸಬೇಕಾಗಿಲ್ಲ.''

''ಇಷ್ಟು ಖಚಿತವಾಗಿ ಹೇಗೆ ಹೇಳ್ತೀಯ ? ಆ ಘಟನೆ ನಡೆದದ್ದು, ಮಗು ಪ್ರಿಮೆಚೂ ಆಗಿ ಹುಟ್ಟಿರುವುದು ಸುಳ್ಳೇ ಹಾಗಾದ್ರೆ ...?''

''ಪ್ರಿಮೆಚೂರ್ ಬರ್ತ್ ಅಲ್ಲ... ಸರಿಯಾಗಿಯೇ ಹುಟ್ಟಿದಾನೆ...ಈ ಮ ನಮ್ಮಿಬ್ಬರದೇ... ಇದಕ್ಕಿಂತ ಹೆಚ್ಚು ಏನೂ ಕೇಳಬೇಡ...'' ಅವಳ ಕಡೆ ನೋಡದೇ ನುಡಿದ.

"ಅಂದ್ರೆ... ನೀನು ಈ ತಪ್ಪು ಮಾಡಿದೀಯಾಂತ ಆಯ್ತು... ಸುಮತಿ ಇಂಥವಳು ಅಂತ ನಂದುಕೊಂಡಿರಲಿಲ್ಲ." ಜಾನಕಿ ಖಾರವಾಗಿ ನುಡಿದಳು.

"ಇದರಲ್ಲಿ ಸುಮತಿಯ ತಪ್ಪು ಏನೂ ಇಲ್ಲ. ನಮ್ಮಿಬ್ಬರ ಪ್ರೀತಿ...ಹಾಗೇ..."

"ಪ್ರೀತಿಸೋರು, ಇಂತಹ ತಪ್ಪುಗಳನ್ನು ಮಾಡಬಾರದು ಸಂಕೇತ್... ಅಮೆರಿಕಾಕ್ಕೆ ೋದ ಮಾತ್ರಕ್ಕೆ ಅಲ್ಲಿಯವರ ತರಹ ಸ್ವೇಚ್ಛೆಯಾಗಿ ಇರುಕ್ಕೆ ಆಗುತ್ತಾ ? ನೋಡು, ನಿನ್ನಿಂದ ಷ್ಟು ಅನಾಹುತ ಆಯ್ತು..." ಇದಕ್ಕೆಲ್ಲಾ ನೀವೇ ಕಾರಣ... ಛೀ..."

"ನಾನು ಸುಮತಿಯ ಕೈ ಬಿಟ್ಟಿದ್ದರೆ ಅನಾಹುತ ಆಗ್ತಿತ್ತು... ನಾನು ಮೊದಲಿನಷ್ಟೇ ೀತಿಸ್ತೀನಿ. ಅವಳಿಗೆ ಗೌರವ ಕೊಡ್ತೀನಿ... ಅದೆಲ್ಲ ನಿನಗೆ ಹೇಗೆ ಅರ್ಥವಾಗಬೇಕು ? ನಾನೇಕೆ ಗೆ ಎಲ್ಲವನ್ನೂ ಹೇಳಬೇಕು ? ನಂಗೇನೂ ರಿಗ್ರೆಟ್ಸ್ ಇಲ್ಲ."

"ನಾನು, ಈ ಮನೆಗೆ ದೊಡ್ಡವಳು, ನನಗೆ ತಿಳಿಸಲು ಇಷ್ಟವಿಲ್ಲ ನಿನಗೆ. ನಿಮ್ಮ ಡುಗಾಟ ಎಷ್ಟೆಷ್ಟು ಸತಾಯಿಸಿತು ? ನೀನು ಸಭ್ಯ ಅಂತ ತಿಳಿದುಕೊಂಡಿದ್ದೆ. ಜಗ್ಗು ಮಾಡಿದಷ್ಟೇ ಪ್ಪನ್ನು ನೀನೂ ಮಾಡಿದೀಯ... ಅವನು ತಿಳಿವಳಿಕೆ ಇಲ್ಲದ ದಡ್ಡ... ನೀನು ಮೂರ್ಖ. ಒಂದೇ ಂದು ಮಾತು ನೀನು ನನಗೆ ತಿಳಿಸಿದ್ದರೆ, ನಾನು ಆ ಸಮಯದಲ್ಲೇ ನಿಮ್ಮಿಬ್ಬರಿಗೂ ಮದುವೆ ಾಡಿಸುತ್ತಿದ್ದೆ... ಈ ಅನಾಹುತವನ್ನು ತಪ್ಪಿಸಬಹುದಾಗಿತ್ತು."

"ನಡೆದ ತಪ್ಪನ್ನು ಸರಿಪಡಿಸಿದೀನಲ್ಲ ಇನ್ನೇನು...?"

"ಹೌದು ಇನ್ನೇನೂ ಬಾಕಿ ಇಲ್ಲ... ತಪ್ಪೆಲ್ಲಾ ನನ್ನದೇ... ನೀನು ಹೀಗೆ ದ್ರೋಹ ಾಡ್ತೀಯ ಅಂತ ಅಂದುಕೊಂಡಿರಲಿಲ್ಲ. ಜಗ್ಗು ಮಾಡದ ತಪ್ಪಿಗೆ, ಮಾಡಿದ ತಪ್ಪುಗಳಿಗೆ ದನ ಡಿಯುವಂತೆ ಹೊಡೆದು ಕೈ ನೋಯಿಸಿಕೊಂಡಿದೀನಿ... ಆದರೆ ಈಗ ನಿನ್ನನ್ನು ಬಾಯಿಬಿಟ್ಟು ಯಕ್ಕೂ ನನಗೆ ಮನಸ್ಸಿಲ್ಲ. ಹೋಗು ಅತ್ಲಾಗೆ." ಜಾನಕಿ ಕೋಪದಿಂದ ಪಕ್ಕಕ್ಕೆ ತಿರುಗಿದಳು. ಕೇತ ಅವಳ ಕೈಯನ್ನು ಎತ್ತಿ ತನ್ನ ಕೆನ್ನೆಗೆ ಹೊಡೆದುಕೊಂಡ.

"ನನಗೆ ಶಿಕ್ಷೆ ಕೊಡಬೇಕೂಂತ ಆಸೆ ತಾನೇ... ಕೊಡು... ಹೊಡಿ, ಬೈಯಿ ಆದರೆ ಆ ಗ್ಗೋಸ್ಕರ... ನಾನು ತಪ್ಪಿತಸ್ಥ ಅಂತ ಹೇಳಬೇಡ." ಅದು ಸರಿಯಲ್ಲ.

"ಯಾಕೆ ಹೇಳಬಾರದು ? ನನಗೆ ನೀವಿಬ್ಬರೂ ಒಂದೇ... ನಿಮ್ಮಿಬ್ಬರಲ್ಲಿ ನನಗೆ ಯಾವ ದವೂ ಇರಲಿಲ್ಲ... ಅದನ್ನು ನೀನೇ ಕ್ರಿಯೇಟ್ ಮಾಡಿಕೊಂಡಿದ್ದು... ಈಗ ನಿನಗೆ ರ್ಥವಾಗುಲ್ಲ. ಇನ್ನು ಒಂದು ಮಗು ಹುಟ್ಟಿದರೆ... ಆಮೇಲೆ ಮುಂದೆ ಯಾರದ್ದು ಸರಿ, ಾರದ್ದು ತಪ್ಪು ಅಂತ ಗೊತ್ತಾಗುತ್ತೆ." ಜಾನಕಿ ಅಲ್ಲಿಂದ ಹೊರಟು ಹೋಗಿದ್ದಳು. ಸಂಕೇತ ಅಲ್ಲೇ ಭದಂತೆ ನಿಂತಿದ್ದ ಈಗಲೂ, ಈ ಮಮ್ಮಿಗೆ ನಾನೇ ತಪ್ಪಾಗಿ ಕಾಣ್ತೀನಿ..." ತಂದುಕೊಂಡಾಗ, ಮನದ ಕಹಿ ಇನ್ನು ಹೆಚ್ಚಾಗಿತ್ತು. ನಾನು ಬದಲಾಗಬೇಕು ಅಂತ ಪ್ರಯತ್ನ

ಪಡ್ತಿದೀನಿ, ಮಮ್ಮಿ ಅದಕ್ಕೆ ಆಸ್ಪದವನ್ನೇ ಕೊಡುವುದಿಲ್ಲ. ತಥ್ ಏನು ಬೇಕಾದ್ರು ಮಾಡಿಕೊಳ್ಳಲಿ'' ಎಂದು ಸಿಟ್ಟಿನಿಂದ ಆಚೆ ಹೊರಟು ಹೋದ.

ಸುಮತಿಗೆ, ಸ್ವಲ್ಪ ಸ್ವಲ್ಪ ಮಾತುಗಳು ಕೇಳಿಸಿದ್ದವು. ಆಂಟಿಗೆ ಇನ್ನು ಅಸಮಾಧಾನ. ಮಗುವನು ನೋಡಿಲ್ಲ, ಮುದ್ದಾಡಿಲ್ಲ... ನನ್ನ ಮಗು ಅಷ್ಟು ಅಸಡ್ಡೆ ಅಂತ ಅಂದುಕೊಂಡಾಗ ದುಃಖ ಉಕ್ಕಿತ್ತು. ಮದುವೆಗೆ ಮೊದಲು ನಡೆದ, ತಪ್ಪಿಗೆ ಈಗ ನಾನು ಅನುಭವಿಸುತ್ತಿದೇನೆ ಇದರಲ್ಲಿ ಈ ಮಗುವಿದೇನು ತಪ್ಪು ? ಮೊಮ್ಮಗು ಎಂದು ಪ್ರೀತಿ ಬೇಡವೆ ? ಆಂಟಿ ಇಷ್ಟು ನಿಷ್ಕರುಣಿ ಅಂತ ನಾನು ಅಂದುಕೊಂಡಿರಲಿಲ್ಲ... ಈ ಮಗುವಿಗೆ ಜನ್ಮ ಕೊಡಬೇಕಾಗಿತ್ತು. ಅದಕ್ಕೆ ಒಂದು ಆಶ್ರಯ ಬೇಕಾಗಿತ್ತು... ಇನ್ನು ಏನಾದರೂ ಪರವಾಗಿಲ್ಲ, ಸಂಕೇತನಿಗೆ ಎಲ್ಲಾ ಹೇಳಿ, ಇಲ್ಲಿಂದ ಹೊರಟು ಹೋಗ್ತೀನಿ ಏನಾದ್ರೂ ಮಾಡಿಕೊಳ್ಳಲಿ ಈ ತಾಯಿ ಮಗ... ದಿನನಿತ್ಯ ಈ ವಾದವಿವಾದ ಸಾಕಾಗಿ ಹೋಗಿದೆ ಅಂತಂದುಕೊಂಡಳು. ಸಂಕೇತ ಅಲ್ಲಿ ಇಲ್ಲಿ ತಿರುಗಾಡಿ, ತನಗೆ ತಾನೇ ಸಮಾಧಾನ ಹೇಳಿಕೊಂಡು ಮನೆಗೆ ವಾಪಸ್ಸಾಗಿದ್ದ. ಸೀದಾ ಮಹಡಿ ಹತ್ತಿದ. ಮಗುವಿನ ಮುಖವನ್ನು ನೋಡಿದ ಕೂಡಲೇ. ಅವನು ಉತ್ಸಾಹಗೊಂಡ. ಆಡಿಸತೊಡಗಿದ.

''ಎಷ್ಟು ಚೆನ್ನಾಗಿ ನಗ್ತಿದಾನೆ ನೋಡು...'' ಸುಮತಿಯನ್ನು ಹತ್ತಿರಕ್ಕೆ ಕರೆದ.

''ಅದಕ್ಕೆ ಮರಳಿ ನಗೆ ಅಂತಾರೆ. ನಿದ್ದೆಯಲ್ಲೇ ಮಕ್ಕಳು ನಗುತ್ತವೆ.''

''ಎಷ್ಟು ಇನ್ನೋಸೆನ್ಸ್ ಇದೆ ಮುಖದಲ್ಲಿ...'' ಮಗುವಿನ ಕೆನ್ನೆ ಸವರಿದ.

''ಇನ್ನೇನು, ದೊಡ್ಡೋರ ತರಹ, ಮನಸ್ನಲ್ಲಿ ಒಂದು, ಬಾಯ್ನಲ್ಲಿ ಒಂದು... ಹಾಗೆ ಇರೋಕೆ ಆಗುತ್ತಾ ?''

''ಏಯ್ ಯಾರ ವಿಷಯ ಹೇಳ್ತಿದೀಯ ? ನಾನೂ ಈ ಮಗು ತರಹಾನೇ... ಮನಸ್ನಲ್ಲಿ ಏನಿದೆಯೋ ಅದೇ ಬಾಯ್ನಲ್ಲೂ ಬರುತ್ತೆ... '' ಮುಗುಳ್ನಕ್ಕು ನುಡಿದ.

''ಇಲ್ಲ, ನನಗೆ ಹಾಗೆ ಅನ್ನಿಸುಲ್ಲ...''

''ನಿನಗೆ ಈಗ ನಿನ್ನ ಮಗನ ಸಪೋರ್ಟ್ ಇದೆ, ಏನು ಬೇಕಾದ್ರೂ ಆಡು... ನಾನು ಅಮ್ಮನಿಗೆ ಬೇಡವಾದ ಮಗ, ನಿನಗೆ ಬೇಡವಾದ ಪತಿ, ನನ್ನನ್ನು ಕೇಳೋಕೆ ಯಾರೂ ಇಲ್ಲ... ಅಲ್ವೇನೋ ಪುಟ್ಟ... ನೀನು ಬೇಗ ಬೇಗ ದೊಡ್ಡೋನಾಗು, ನಾನು ನಿನ್ನ ಜೊತೆ ಆಡಬೇಕು, ಓಡಾಡಬೇಕು... ನಿಂಗೆ ಗೊತ್ತಾ ಸುಮತಿ, ನನ್ನ ಅಪ್ಪನೇ ನನ್ನನ್ನು ಬೆಳೆಸಿದ್ದು... ಈಗ ನಾನೂ ಅಪ್ಪನಾಗಿದೀನಿ... ನನ್ನ ಡ್ಯೂಟೀಸ್ ಏನೂಂತ ನನಗೆ ಚೆನ್ನಾಗಿ ಅರ್ಥವಾಗ್ತಿದೆ.''

''ನಾಮಕರಣಕ್ಕೆ ಎಲ್ಲರನ್ನೂ ಕರೆದಿದ್ದು ಆಯ್ತಾ ?'' ಮಾತನ್ನು ಬದಲಾಯಿಸಿದಳು.

''ನಾಮಕರಣ ಕ್ಯಾನ್ಸಲ್...'' ಮಗುವಿನ ಪಕ್ಕದಲ್ಲಿ ಕುಳಿತ

''ಯಾಕೆ ಏನಾಯ್ತು...?''

''ಇವನ ಅಜ್ಜಿಗೆ ಅದೆಲ್ಲ ಬೇಡವಂತೆ...''

''ಯಾಕಂತೆ ?''

''ಯಾವುದೋ ಒಂದು ತಪ್ಪಿಗೆ ಹುಟ್ಟಿರುವವನು ಅನ್ನೋ ಉದಾಸೀನ ಅವಳಿಗೆ'' ಸುಮತಿ ಮಂಕಾದಳು.

''ನೀವು ಹೇಳಬೇಕಾಗಿತ್ತು. ನಮ್ಮಿಬ್ಬರ ಮಧ್ಯೆ ಸಂಬಂಧವಿತ್ತು ಅಂತ.''

''ಹೇಳಿದೆ. ಅದನ್ನು ತಪ್ಪು ಅಂತ ವಾದಿಸಿದಳು. ನನಗೆ ಬೇಸರವಾಯ್ತು.''

''ಹೌದು ಸಂಕೇತ... ನಮ್ಮದೂ ತಪ್ಪೇ ಅಲ್ವಾ ?''

''ಹಾಗಾದ್ರೆ ತಪ್ಪು ಮಾಡಿದವರಿಗೆ ತಿದ್ದಿಕೊಳ್ಳೋಕೆ ಛಾನ್ಸೇ ಇಲ್ಲವಾ ? ಅದೇಕೆ ಗೊತ್ತಾಗಲಿಲ್ಲ ಮಮ್ಮೀಗೆ ?

. ''ಅವರಿಗೆ ನನ್ನ ಮೇಲೆ ಅಸಮಾಧಾನವಿರಬಹುದು''

''ಇಲ್ಲ ಎಲ್ಲಾ ಕೋಪವೂ ನನ್ನ ಮೇಲೆ, ಮೊದಲ್ನಿಂದಲೂ ಅಷ್ಟೇ... ನನ್ನನ್ನೇ ಏನೋ ತಪ್ಪು ಮಾಡಿದವನ ತರಹ ಟ್ರೀಟ್ ಮಾಡಿದ್ದು, ಈಗ ನಾನೂ ದೊಡ್ಡೋನಾಗಿದೀನಿ, ನನಗೂ ಒಂದು ಸಂಸಾರವಿದೆ, ಒಂದು ಮಗುವಿನ ತಂದೆ ಆಗಿದೀನಿ ಅನ್ನೋ ಗ್ರೇಡ್ ಆದರೂ ಬೇಡ್ವಾ ? ನಿನ್ನ ಅಜ್ಜಿ ತುಂಬಾ ಕೆಟ್ಟೋಳು ಕಣೋ ಪುನೀತ...'' ಮಗುವಿನ ಕೆನ್ನೆಗಳನ್ನು ಸವರಿದ.

''ಛಿ... ಮಗು ಮುಂದೆ ಹಾಗೆಲ್ಲ ಆಡಬೇಡಿ.... ಅವನಿಗೇನು ಗೊತ್ತಾಗುತ್ತೆ ? ಜಗ್ಗೂನ 'ಹೋಂ'ಗೆ ಸೇರಿಸಿರುವುದರಿಂದ ಅವರು ಅಪ್ಸೆಟ್ ಆಗಿದಾರೆ... ಅಷ್ಟೆ'' ಜಾನಕಿಯ ಪರವಹಿಸಿ ಮಾತನಾಡಿದ್ದು ಸರಿ ಎನಿಸಲಿಲ್ಲ ಅವನಿಗೆ.

''ಅದು ಅವಳದ್ದೇ ನಿರ್ಧಾರ... ಅವಳಿಗೆ ಇಷ್ಟವಿಲ್ಲದಿದ್ದರೆ ನಾವು ಬೇರೆ ಹೋಗೋಣ. ಅವಳು ಜಗ್ಗೂ ಇಬ್ಬರೇ ಇಲ್ಲಿ ಹಾಯಾಗಿರಲಿ.''

''ನಾವು ಬೇರೆ ಹೊರಟು ಹೋದರೆ, ನಾವು ಹಾಯಾಗಿರುಕ್ಕೆ ಆಗುತ್ತಾ ಸಂಕೇತ್...''

''ಯಾಕಾಗುಲ್ಲ ? ನಾನೂ ಅರ್ನ್ ಮಾಡ್ತೀನಿ... ನಾವೇನು ಮಮ್ಮಿ ಮೇಲೆ ಡಿಪೆಂಡಾಗಿರಬೇಕಾಗಿಲ್ಲ.''

''ಅದಲ್ಲ... ನನ್ನಿಂದ ನಿಮಗೆ ಯಾವ ಸುಖವೂ ಸಿಗುಲ್ಲ...''

''ಏನಂದೆ ? ನೀನು ನನ್ನೊಂದಿಗೆ ಇರುವುದೇ ನನಗೆ ಸುಖ... ಅದಕ್ಕಿಂತ ಬೇರೆ ಸುಖ ಬೇಕಿಲ್ಲ...''

''ನಿಜ ಹೇಳಿ ಸಂಕೇತ್... ನೀವು ನಮ್ಮಿಬ್ಬರ ಪ್ರೀತಿಯ ಪ್ರಾರಂಭದಲ್ಲೇ ನನ್ನಿಂದ ಸುಖವನ್ನುಬಯಸಿದಿರಿ... ಗಂಡಸಾಗಿ ನೀವು ಹೆಂಗಸಿನ ಸುಖ ಇಲ್ಲದೇ ಇರೋಕೆ ಆಗುತ್ತಾ ?''

''ಯಾಕೆ ಆಗುಲ್ಲ? ಸಂಯಮ ಅನ್ನೋದು ನನಗೂ ಇದೆ. ಏನು ಅಂದ್ಕೊಂಡಿದೀಯ ನನ್ನನ್ನು? ಎಷ್ಟುವರ್ಷಗಳಾದ್ರೂ ಸರಿ... ನಾನು ಕಾಯ್ತೀನಿ...''

''ನಾನು ಒಂದ್ಮಾತು ಹೇಳ್ತೀನಿ ಸಂಕೇತ್... ನೀವು ತಪ್ಪು ತಿಳ್ಕೋಬೇಡಿ''

''ಏನದು ?''

''ನೀವು ಇನ್ನೊಂದು ಮದುವೆಯಾಗಿ...''

''ಯಾಕೆ ? ಈಗ ನಾನು ಹ್ಯಾಪಿಯಾಗಿರೋದು ನಿನಗೆ ಸಹಿಸುತ್ತಿಲ್ವಾ ?''

''ನಿಮ್ಮ ಹ್ಯಾಪಿನೆಸ್‌ಗೇ ನಾನು ಹೇಳ್ತಾ ಇರೋದು... ನೀವು ವಿಮಲನ್ನ ಮದುವೆಯಾಗಿ...''

''ವಿಮಲ ಯಾರು ? ಓಹೋ ನೀನಾಗ್ಲೇ ಹೆಣ್ಣನ್ನು ನೋಡಿಟ್ಟಿದೀಯಾ ಅನ್ನು'' ನಕ್ಕ

''ನೀವೇ ನೋಡಿಕೊಂಡಿದೀರಲ್ಲ... ವಿಮಲ ಯಾರೂಂತ ನನ್ನನ್ನೇ ಕೇಳ್ತೀರಲ್ಲ... ಚಿಂತಾಮಣಿ ವಿಮಲ...'' ಸಂಕೇತನಿಗೆ ಸ್ವಲ್ಪ ಸ್ವಲ್ಪ ಅರ್ಥವಾಗಿತ್ತು.

''ನೀನು ಏನು ಹೇಳ್ತಿದೀಯಾಂತ ನನಗಂತೂ ಅರ್ಥವಾಗ್ತಿಲ್ಲ. ನಿನ್ನ ತಲೆ ಸರಿಯಾಗಿದೆ ತಾನೇ...?'' ಬೇಕೂಂತ ಗದರಿದ.

''ಹೂಂ. ನಾನು ಸರಿಯಾಗಿಯೇ ಇದೀನಿ. ನಾನು ನಿಮಗೆ ಡೈವೋರ್ಸ್ ಕೊಡ್ತೀನಿ... ನೀವು ವಿಮಲನ್ನ ಮದುವೆಯಾಗಿ ಸುಖವಾಗಿರಿ. ನನಗೆ ಬೇಸರವೇನಿಲ್ಲ'' ಹೇಳಿದಳು.

''ಸರಿ. ನಿನ್ನಿಷ್ಟ ನಿನಗೆ ಇದರಿಂದ ಸಂತೋಷ ಸಿಕ್ಕುತ್ತೆ ಅನ್ನೋದಾದ್ರೆ ಹಾಗೇ ಮಾಡ್ತೀನಿ. ಆದರೆ ನಾನು ನಿನಗೆ ಡೈವೋರ್ಸ್ ಮಾತ್ರ ಕೊಡುಲ್ಲ...'' ತಮಾಷೆಯಾಗಿ ನುಡಿದರೂ, ಸುಮತಿಯ ಮನಸ್ಸು ಕಂದಿತ್ತು.

''ನಾನು ನಾಳೇನೇ ಹೋಗಿ ವಿಮಲನ ಮನೆಯಲ್ಲಿ ಮಾತನಾಡಿ ಬರ್ತೀನಿ...'' ಎನ್ನುತ್ತಾ ಅವನು ಹೊರಗೆ ಹೊರಟು ಹೋದಾಗ, ಸುಮತಿ ಶಬ್ದವಿಲ್ಲದಂತೆ ಅತ್ತಳು. ಅದೇ ದಿನ ಹರೀಶನೊಡನೆ ಮಾತನಾಡಿದ.

''ನೀನು ವಿಮಲನ್ನ ಆದಷ್ಟು ಬೇಗ ಮದುವೆಯಾಗಬೇಕು. ಇಲ್ಲದಿದ್ದರೆ ನನ್ನ ಸುಮತಿಯ ನಡುವೆ ಇರುವ ಬಿರುಕು ಇನ್ನೂ ದೊಡ್ಡದಾಗುತ್ತದೆ.'' ವಿಷಯವನ್ನು ಸಂಕ್ಷಿಪ್ತವಾಗಿ ತಿಳಿಸಿದ.

"ನಾನು ಸುಮತಿಯ ಹತ್ತಿರ ಮಾತನಾಡ್ತೀನಿ... ಬೇಕಾದ್ರೆ" ಹರೀಶನೆಂದ.

"ಏನೂ ಬೇಡ ಈಗ ನೀನು ಏನೇ ಹೇಳಿದರೂ ಅವಳು ನಂಬ್ತಾಳೋ ಇಲ್ಲವೋ"

"ವಿಮಲನ್ನ ಸುಮತಿ ನೋಡಿಯೇ ಇಲ್ಲವಲ್ಲ... ಬಹುಶಃ ಅವಳ ಅಕ್ಕ ಹೇಳಿರಬಹುದು... ಈ ಹೆಂಗಸ್ರುಗಳು ಮಹಾತರಲೆಗಳು !"

"ಅಲ್ಲ, ನನಗೆ ವಿಮಲಂಗೆ ಹೇಗೆ ಲಿಂಕ್ ಮಾಡಿದ್ರು ಅಂತ ನನಗೆ ತಿಳೀತಿಲ್ಲ..." ನೀನು ವಿಮಲನ್ನ ಮದುವೆಯಾಗ್ತಿದೀಯ ಅಂತ ಗೊತ್ತಿಲ್ವಾ ?"

"ಬಹುಶಃ ಹೇಮಂಗೆ ಹೇಳಿಲ್ಲ ಅಂತ ಕಾಣುತ್ತೆ. ನನ್ನ ಮೇಲೆ ನನ್ನ ಮಾವನಿಗೆ ನಂಬಿಕೆ ಇಲ್ಲ ಅಂತ ಕಾಣುತ್ತೆ. ನಾನು ಮತ್ತೆ ಹೋಗಿ ಮಾತನಾಡಬೇಕು, ಅಂತ ಕಾಣುತ್ತೆ."

"ನೀನು ಹೀಗೇ ಪೋಸ್ಟ್ ಪೋನ್ ಮಾಡ್ತಿದ್ರೆ, ಇನ್ನೇನಾಗುತ್ತೆ... ಒಂದು ಸಾರಿ ಡಿಸೈಡ್ ಮಾಡಿದ ಮೇಲೆ ಹೀಗೆ ಡಿಲೇ ಮಾಡಬಾರದು. ಆದಷ್ಟು ಬೇಗ ಮದುವೆಯಾಗಿ ಬಿಡಬೇಕು. ಇಲ್ಲದಿದ್ದರೆ ಹೀಗೆ ಮಿಸ್ಟೇಕ್‌ಗಳು... ಹುಟ್ಟಿಕೊಳ್ಳುತ್ತವೆ."

"ನನ್ನ ಮೇಲೆ ನಿನಗೂ ನಂಬಿಕೆ ಇಲ್ವಾ ಸಂಕೇತ್...?"

"ಇದೆ. ಆದರೆ ಸುಮತಿಗೆ ನನ್ನ ಮೇಲೆ ನಂಬಿಕೆ ಇಲ್ಲ ಅಂತ ಕಾಣುತ್ತೆ. ಈಗ ಅವಳ ಸಂದೇಹ ದೂರವಾಗಬೇಕಾದರೆ, ನಿಮ್ಮಿಬ್ಬರ ಮದುವೆ ಬೇಗ, ಆದಷ್ಟು ಬೇಗ ನೆರವೇರಬೇಕು."

"ಓ... ಕೆ... ಆದರೆ ನನಗೆ ಒಂದು ಆಸೆ ಇತ್ತು... ಮೊದಲು ಅವಳ ಕಣ್ಣುಗಳ ಆಪರೇಷನ್ ಮಾಡಿಸಿ, ನಂತರ ಮದುವೆಯಾಗಬೇಕೂಂತ ಅಂದುಕೊಂಡಿದ್ದೆ... ಅವಳ ತಂದೆಯ ಮನೆಯಲ್ಲಿ ಅವಳು ಹೇಗಾದರೂ ಇರಲಿ, ನಮ್ಮ ಮನೆಗೆ ಬಂದಮೇಲೆ, ಅವಳು ಇಂಡಿಪೆಂಡೆಂಟ್ ಆಗಿ ಇರಲಿ... ಅಂತ ನನ್ನ ಆಸೆ... ಅವಳಿಗೂ ಮುಜುಗರವಾಗಬಾರದು. ಉಳಿದವರಿಗೂ ಬೇಸರವಾಗಬಾರದು."

"ಇಷ್ಟೇ ತಾನೇ... ಅದಕ್ಕೇ ತಡಯಾಕೆ ? ಆದಷ್ಟು ಬೇಗ ಆಪರೇಷನ್ ಮಾಡಿಸಿದರಾಯ್ತು... "

"ಅದು ಅಷ್ಟು ಸುಲಭವಲ್ಲ ಸಂಕೇತ, ಅವಳು ಇಲ್ಲಿ ಬಂದು ಇರಬೇಕು... ಅದಕ್ಕಿಂತ ಮುಖ್ಯವಾಗಿ ಹಣಬೇಕು... ಎಷ್ಟು ಸಾವಿರ ಖರ್ಚಾಗುತ್ತೋ ... ನನ್ನಿಂದ ಹಣ ಹೊಂದಿಸುಕ್ಕೇ ಆಗಿಲ್ಲ, ಏನೋ ತಾಪತ್ರಯ."

"ಈಡಿಯಟ್... ಈ ಸ್ನೇಹಿತ ಇರೋದು ಯಾತಕ್ಕೆ ? ನನ್ನನ್ನೊಂದು ಮಾತು ಕೇಳಿದ್ರೆ, ನಾನು ಕೊಡುಲ್ಲ ಅಂತಿದ್ನಾ ?" ಆಕ್ಷೇಪಣೆ ಮಾಡಿದ.

''ಹಣ, ಕೆಟ್ಟದು ಸಂಕೇತ... ನಮ್ಮ ಸ್ನೇಹಕ್ಕೆ ಭಂಗ ಬಂದು ಬಿಡುತ್ತೆ. ನನಗೆ ಅದೇ ಭಯ...''

''ಭಯಪಟ್ಟರೆ ಕೆಲಸ ಆಗುಲ್ಲ. ನನಗೆ ಎಷ್ಟು ಎನ್‌ಕರೇಜ್‌ಮೆಂಟ್ ಸಿಕ್ಕಿದೆ ನಿನ್ನಿಂದ... ಇದೇನಾ ನಿನ್ನ ಫ್ರೆಂಡ್‌ಷಿಪ್... ನಾಳೇನೇ ಹೋಗಿ ವಿಮಲನ್ನ ಕರೆದುಕೊಂಡು ಬಾ... ಇನ್ನು ತಡಮಾಡಬೇಡ.''

''ನೀನೂ ಬಾರಯ್ಯ. ನನಗೊಬ್ಬನಿಗೇ ಹೋಗಿ ಮಾತನಾಡುವುದಕ್ಕೆ ಮುಜುಗರ ವಾಗುತ್ತೆ.'' ಹರೀಶ ಸ್ನೇಹಿತನನ್ನು ಪುಸಲಾಯಿಸಿದ.

''ಶುಭಸ್ಯ ಶೀಘ್ರಂ'' ನಾನು ಸುಮತಿಯನ್ನು ಕರೆದುಕೊಂಡು ಬರ್ತೀನಿ.''

''ಈಗಲೇ ಬೇಡ. ಸ್ವಲ್ಪ ಸಸ್ಪೆನ್ಸ್ ಇರಲಿ...'' ಕುಚೋದ್ಯವಾಗಿ ಹೇಳಿದ, ಹರೀಶ ಹರೀಶ ಸಂಕೇತ ಒಟ್ಟಾಗಿ ಮನೆಗೆ ಬಂದರು.

''ಏನ್ರೀ... ಏನಂತಾನೆ ನಿಮ್ಮ ಮಗ ? ಸುಮತಿಯ ಕಡೆ ನೋಡಿದ. ಅವಳು ಅತ್ತಿರುವಂತೆ ಅನ್ನಿಸಿತ್ತು. ಸಂಕೇತನ ಕಡೆ ನೋಡಿ ನಸುನಕ್ಕ...

''ಸುಮತೀ... ನಾಳೆ ನಾನು ಹರೀಶ ಹೊರಗೆ ಟೂರ್ ಹೋಗ್ತಾ ಇದೀವಿ. ಬರೋದು ಸ್ವಲ್ಪ ಲೇಟಾಗಬಹುದು. ನನಗೋಸ್ಕರ ಕಾಯಬೇಡ'' ಎಂದು ಹೇಳಿದ್ದ.

ಇಬ್ಬರೂ ಚಿಂತಾಮಣಿಗೆ ಹೊರಟರು. ಮೊದಲೇ ಮನೆಗೆ ಹೋಗುವುದು ಬೇಡ. ಹೋಟೆಲ್ಲಿಗೆ ಹೋಗಿ ಮಾತನಾಡೋಣ ಎಂದುಕೊಂಡು ಹೋಟಲ್ಲಿಗೆ ಬಂದರು. ಅರವಿಂದ ಒಬ್ಬನೇ ಇದ್ದ.

''ಅಶೋಕ ಅತ್ತಿಗೆಯನ್ನು ಕರೆದುಕೊಂಡು ಭದ್ರಾವತಿಗೆ ಹೋಗಿದಾನೆ'' ಅಂತ ತಿಳಿದಾಗ ಒಳ್ಳೆಯದೇ ಆಯ್ತು ಎಂದುಕೊಂಡು ಮನೆಗೆ ಬಂದರು. ಊಟದ ನಂತರ, ಸದಾನಂದ, ಇದ್ದಕ್ಕಿದ್ದಂತೆ ಹರೀಶ ಬಂದ ಕಾರಣವನ್ನು ವಿಚಾರಿಸಿದ.

''ಮೊದಲು ಕಣ್ಣುಗಳ ಆಪರೇಷನ್ ಮಾಡಿಸಿ, ನಂತರ ಮದುವೆಯಾಗ್ತೀನಿ. ಆದುದರಿಂದ ವಿಮಲನ್ನು ನಮ್ಮ ಜೊತೆ ಕಳಿಸಿಕೊಡಬೇಕು'' ಎಂದು ಕೇಳಿಕೊಂಡ.

ಸದಾನಂದ ಅದಕ್ಕೆ ಒಪ್ಪಲಿಲ್ಲ ''ಅದು ನನ್ನ ತಂಗಿಯ ಮನೆಯೇ ಆದರೂ, ಮದುವೆ ಮಾಡದೇ ನಾನು ಕಳಿಸುವುದಿಲ್ಲ, ಮೊದಲು ಮದುವೆ ಮಾಡಿಕೋ. ಆಮೇಲೆ ಆಪರೇಷನ್ ಮಾಡಿಸು, ನನಗೆ ಯಾವ ಅಭ್ಯಂತರವೂ ಇಲ್ಲ'' ಎಂದಿದ್ದ.

''ಯಾಕೆ ? ನನ್ನ ಮೇಲೆ ನಿನಗೆ ನಂಬಿಕೆ ಇಲ್ವಾ ಮಾವ ? ಕೇಳಿದ.

"ನಂಬಿಕೆ ಪ್ರಶ್ನೆ ಅಲ್ಲ. ವಿಮಲ ಗಟ್ಟಿ ಸ್ವಭಾವದ ಹುಡುಗಿ ಅಲ್ಲ. ತುಂಬಾ ಸೂಕ್ಷ್ಮ. ಎಷ್ಟೋ ವರ್ಷಗಳಿಂದ, ಈ ಮನೆಯಿಂದ ಹೊರಕ್ಕೆ ಕಾಲಿಟ್ಟಿಲ್ಲ. ಏಕಾಏಕಿ ಬೆಂಗಳೂರಿಗೆ ಹೋಗು ಎಂದರೆ, ಅವಳು ಒಪ್ಪುವುದಿಲ್ಲ."

"ನೀವು ಒಪ್ಪಿಸಿ ಮಾವ... ಅಮ್ಮ ಇದಾಳೆ. ಅತ್ತೆಯೂ ಬರಲಿ..."

"ಅಷ್ಟು ಸುಲಭವಾಗಿ ಎಲ್ಲವನ್ನು ಬಿಟ್ಟು ಬರೋಕಾಗುಲ್ಲ. ನನ್ನ ಪೌರಹಿತ್ಯದ ಕೆಲಸಕ್ಕೆ ತೊಂದರೆ ಬರುತ್ತದೆ. ಮನೆಯಲ್ಲಿ ಇವಳಿಲ್ಲದಿದ್ದರೆ, ಮಡಿ ಹುಡಿ ಕೆಲಸವನ್ನು ಮಾಡೋರು ಯಾರು ?

"ಎಲ್ಲಾ ಹೇಗೋ ನಡೆಯುತ್ತದೆ. ಅಶೋಕನ ಹೆಂಡತಿ ಬಂದಿದಾಳಲ್ಲ."

"ಅವಳು ಈಗ ಗರ್ಭಿಣಿ. ಬಾಣಂತನಕ್ಕೆ ಹೋಗಿದಾಳೆ. ಇನ್ನು ಐದಾರು ತಿಂಗಳು ಅವಳು ಬರೋದಿಲ್ಲ." ಹರೀಶ ಸಂಕೇತನ ಕಡೆ ನೋಡಿದ. ಅವನಿಗೂ ಈ ವಿಷಯ ಹೊಸದು. ತನಗೆ ಗೊತ್ತಿರಲಿಲ್ಲವೆಂಬಂತೆ ಮುಖ ಮಾಡಿದ.

"ಹಾಗಾದರೆ, ಈಗ ಏನು ಹೇಳ್ತೀರಿ ?"

"ಹೇಳಿದ್ನಲ್ಲ. ಮದುವೆ ಮಾಡಿಕೋ ಕರೆದುಕೊಂಡು ಹೋಗು. ಆಮೇಲೆ ನಿನ್ನ ಜವಾಬ್ದಾರಿ. ಈ ಆಪರೇಷನ್ನು ಅಂತಂದ್ರೆ ಭಯವೇ ಜಾಸ್ತಿ... ಏನಾಗುತ್ತೋ ? ಯಾರಿಗೆ ಗೊತ್ತು?

"ಕಣ್ಣಿಗೆ ಆಪರೇಷನ್ನು ಮಾಡಿದರೆ ಪ್ರಾಣಕ್ಕೆ ಏನೂ ಅಪಾಯವಿಲ್ಲ ಮಾವ... ನೀನು ಯಾವ ಕಾಲದಲ್ಲಿ ಇದೀಯ ?"

"ಅದೆಲ್ಲ ನನಗೆ ಗೊತ್ತಿಲ್ಲ. ಅವಳ ಗ್ರಹಚಾರ ಮೊದಲೇ ಚೆನ್ನಾಗಿಲ್ಲ. ನಾಳೆ ಏನಾದ್ರೂ ಹೆಚ್ಚು ಕಡಿಮೆ ಆದರೆ, ಅವಳಿಗೆ ಸದ್ಗತಿ ಇಲ್ಲ..."

"ಅದನ್ನೆಲ್ಲ ಈಗಲೂ ನಂಬ್ತೀಯಾ ನೀನು ?"

"ಹೂಂ. ಬಿಟ್ಟು ಬಿಡುಕ್ಕೆ ಆಗುತ್ತೇನಯ್ಯಾ ಕನ್ಯೆಯಾಗಿರೋಳಿಗೆ ಎಲ್ಲಿಯೂ ಸ್ಥಳವಿಲ್ಲ. ಶಾಸ್ತ್ರ ಹಾಗೆ ಹೇಳುತ್ತದೆ. ಪತ್ನಿಯಾದವಳ ಮಾತೇ ಬೇರೆ... ಅಲ್ಲದೇ, ನೋಡೋಣ, ಮಾಂಗಲ್ಯ ಬಲದಿಂದ ಅವಳ ಆಯುಷ್ಯವೂ ವೃದ್ಧಿ ಆಗಬಹುದು. ಹರೀಶನಿಗೆ ಮಾವನ ತರ್ಕ ಹಿಡಿಸಲಿಲ್ಲ. ಬೇಸರವೂ ಆಗಿತ್ತು. ಕೋಪವೂ ಬಂದಿತ್ತು.

"ನಾನು ವಿಮಲನ ಹತ್ತಿರ ಮಾತಾಡ್ತೀನಿ... ಅವಳು ಹೇಗೆ ಹೇಳಿದರೆ ಹಾಗೇ..."

"ಅವಳಿಗೇನು ತಿಳುವಳಿಕೆ ಇದೆ... ಸುಮ್ಮನೇ ಅವಳ ತಲೆ ಕೆಡಿಸಬೇಡ ನೀನು"

''ಇಲ್ಲೇ ನಿಮ್ಮೆದುರಿಗೆ ಆಡ್ತೀನಿ... ನಾನು ಅವಳ ತಲೆಯನ್ನು ಕೆಡಿಸುವುದಿಲ್ಲ, ಬಾಲವನ್ನು ಕತ್ತರಿಸುಲ್ಲ.'' ಎಂದವನೇ ಏರುಧ್ವನಿಯಲ್ಲಿ ''ವಿಮಲಾ... ವಿಮಲಾ... ಎಂದು ಕೂಗು ಹಾಕಿದ. ಗೋಡೆಯನ್ನು ಆಧರಿಸಿ, ವಿಮಲ ಒಳಗಿನಿಂದ ಬಂದಳು.

''ನಿನಗೆ ಕಣ್ಣು ಆಪರೇಷನ್ನು ಮಾಡಿಸುಕ್ಕೆ ಕರೆದುಕೊಂಡು ಹೋಗ್ತೀನಿ. ಒಂದು ವಿಷಯವನ್ನು ಸ್ಪಷ್ಟವಾಗಿ ಹೇಳು, ಮದುವೆಗೆ ಮೊದಲು ಆಪರೇಷನ್ನು ಆಗಲಿ ಅಂತ ನನ್ನ ಆಸೆ... ನಿನ್ನ ಮನಸ್ನಲ್ಲಿ ಏನಿದೆ ಅಂತ ಹೇಳು... ಎಲ್ಲರೆದುರಿಗೇ ಹೇಳು''

''ನನಗೆ ಮದುವೆಯೇ ಇಷ್ಟವಿಲ್ಲ ಹರೀಶ. ನಾನು ಹೀಗೇ ಇದ್ದು ಬಿಡ್ತೀನಿ. ನನ್ನಿಂದ ಸುಮ್ಮನೇ ಎಲ್ಲರಿಗೂ ತೊಂದರೆ...'' ಅಳುವಿನ ಧ್ವನಿಯಲ್ಲಿ ನುಡಿದಳು. ಅವಳು ಮಾತುಗಳನ್ನು ಕೇಳಿಸಿಕೊಂಡಿದ್ದಳು.

''ತೊಂದರೆಯೆಲ್ಲಾ ಹೋಗಲಿ ಅಂತಲೇ ನಾನು ಈ ಆಪರೇಷನ್ನು ಮಾಡಿಸುತ್ತಿರುವುದು...''

''ಒಂದು ವೇಳೆ ದೃಷ್ಟಿ ಬರದೇ ಹೋದರೇ...'' ಸಂದೇಹದಿಂದ ಕೇಳಿದಳು.

''ಹಾಗೆಲ್ಲ ಹೇಳಬೇಡ. ಈ ಕಾಲದಲ್ಲಿ ತುಂಬಾ ಅನುಕೂಲಗಳಿವೆ. ಒಳ್ಳೊಳ್ಳೆಯ ಸರ್ಜನ್ಸ್ ಇದಾರೆ.''

''ಆದರೂ ಆ ದಿಕ್ಕಿನಲ್ಲೂ ಯೋಚಿಸಬೇಕು ಅಲ್ವಾ ? ಒಂದು ವೇಳೆ ಹೀಗೇ ಉಳಿದು ಬಿಟ್ಟರೇ, ಸುಮ್ಮನೇ ಹಣ ದಂಡವಾಗುತ್ತೆ ಅಷ್ಟೇ...''

''ಆ ಚಿಂತೆ ನಿನಗೆ ಬೇಡ...''

''ನಾನೇಕೆ ಚಿಂತಿಸಬಾರದು ? ಈ ಕುರುಡಿಯನ್ನು ಕಟ್ಟಿಕೊಂಡು ಏನು ಸುಖ ಪಡ್ತೀಯ? ನಾನು ಹೀಗೆ ಇರ್ತೀನಿ. ನನಗೆ ಆಪರೇಷನ್ನು ಬೇಡ...'' ವಿಮಲ ಹಾಗೇ ಅಳುತ್ತಾ ಹೊರಟುಹೋದಾಗ, ಹರೀಶನಿಗೆ ಪೇಚಾಟಕ್ಕಿಟ್ಟುಕೊಂಡಿತು. ಈಗೇನು ಮಾಡುವುದು ಎನ್ನುವಂತೆ ಸಂಕೇತನ ಕಡೆ ನೋಡಿದ.

''ಆಯ್ತು ಮಾವ... ವಿಮಲ ನನ್ನ ಹೆಂಡತಿ ಅಂತ ಎಂದೋ ತೀರ್ಮಾನಿಸಿಯಾಗಿದೆ. ಅವಳು ಹೇಗೆ ಇದ್ದರೂ ನನ್ನ ಪತ್ನಿಯೇ. ಮದುವೆಯ ತಯಾರಿ ನನಡೆಸಿ. ಆದರೆ, ಸುಮ್ಮನೇ ಆಡಂಬರ ಬೇಡ. ಸರಳವಾಗಿರಲಿ.''

''ಸರಿಯಾಗಿ ಯೋಚಿಸಿ ನಿರ್ಧಾರಕ್ಕೆ ಬಾ... ಆಮೇಲೆ ನನ್ನ ಮಗಳಿಗೆ ಏನಾದರೂ ತೊಂದರೆ ಆದರೆ ನಾನು ನಿನ್ನನ್ನು ಸುಮ್ಮನೇ ಬಿಡುಲ್ಲ.''

''ನಾನು ತೀರ್ಮಾನ ತಗೊಂಡ ಮೇಲೆ ಆಯ್ತು. ಅವಳು ನನ್ನ ಪತ್ನಿಯಾದ ಮೇಲೆ, ಅವಳ ಜವಾಬ್ದಾರಿ ನನ್ನದು. ನಿಮಗೆ, ಆಕ್ಷೇಪಣೆ ಮಾಡುವ ಹಕ್ಕೇ ಇಲ್ಲ... ಹರೀಶ ಎದ್ದು ನಿಂತ.''

ನಾವಿನ್ನು ಹೊರಡ್ತೀವಿ ಮಾವ, ಮುಹೂರ್ತ ಇಟ್ಟು ಮದುವೆಯ ತಾರೀಖನ್ನು ತಿಳಿಸಿ." ಒಳಗಿನಿಂದ ವಿಮಲ ಬಂದಿದ್ದಳು.

"ಬೇಡ ಹರೀಶ, ದುಡುಕಬೇಡ... ನಾನು ನಿನಗೆ ತಕ್ಕ ಪತ್ನಿಯಲ್ಲ, ನನ್ನಿಂದ ನಿನಗೆ ಕಷ್ಟವೇ ಹೊರತು ಸುಖವಿಲ್ಲ." ಎಂದಳು.

"ಅದನ್ನು ಚಿಂತಿಸಬೇಕಾದವನು ನಾನು, ನಿನ್ನ ಮದುವೆಯಾಗದೇ, ನೀನು ಈ ಮನೆಯಿಂದ ಹೊರಗೆ ಬರುವಂತಿಲ್ಲ, ಹೊರ ಬರದೇ ಕಣ್ಣುಗಳಿಗೆ ಆಪರೇಷನ್ನು ಮಾಡುವಂತಿಲ್ಲ... ನೀನೂ ನಾಲ್ಕು ಜನರಂತೆ, ಪ್ರಪಂಚವನ್ನು ನಿನ್ನ ಕಣ್ಣುಗಳಿಂದಲೇ ನೋಡಲಿ ಅಂತ ನನ್ನ ಆಸೆ... ಸುಮ್ಮನೇ ಈ ಮದುವೆಗೆ ಒಪ್ಪಿಕೋ, ಇಲ್ಲದಿದ್ದರೆ ಹೀಗೇ ಜೀವಮಾನವೆಲ್ಲಾ ಇರೋಕೆ ಆಗುಲ್ಲ" ಎಂದುಹೇಳಿ ಅವಳನ್ನು ಒಪ್ಪಿಸುವವನಂತೆ, ಮೊದಲಬಾರಿಗೆ ಅವಳ ಕೈಗಳನ್ನು ಹಿಡಿದ. ಅವನ ಕೈಯ ಸ್ಪರ್ಶದಿಂದ, ಅವಳ ಶರೀರದಲ್ಲಿ ಹೊಸ ಶಕ್ತಿಯ ಪ್ರವಾಹ ಹರಿಯಿತು...

"ನನ್ನನ್ನು ಆದಷ್ಟು ಬೇಗ ಇಲ್ಲಿಂದ ಕರೆದುಕೊಂಡು ಹೋಗು ಹರೀಶ..." ಎಲ್ಲರಿಗೂ ಕೇಳಿಸುವಂತೆ ಹೇಳಿ, ಅವನ ಎದೆಗೆ ಒರಗಿದಳು. ಹರೀಶ ಅವಳ ಬೆನ್ನ ಮೇಲೆ ಕೈಯಾಡಿಸಿ ಸಾಂತ್ವನ ಹೇಳಿದ.

"ಅದಕ್ಕೆಂದೇ ನಾನು ಬಂದಿರುವುದು... ಇನ್ನು ಕೆಲವೇ ದಿನಗಳು... ನಾನು ಮದುಮಗನಾಗಿ ಬಂದು ನಿನ್ನನ್ನು ಕರೆದುಕೊಂಡು ಹೋಗ್ತೀನಿ" ಅವಳ ಕಣ್ಣೀರನ್ನು ಒರೆಸಿದ. ಸದಾನಂದ ಸಿಡಿಮಿಡಿಗುಟ್ಟುತ್ತಿದ್ದ. ವಿಮಲ ಎಂದೂ ಹೀಗೆ ವರ್ತಿಸಿದವಳಲ್ಲ, ಈಗೇನಾಯ್ತು ಇವಳಿಗೆ ? ಯಾರಾದ್ರೂ ಏನಾದ್ರೂ ಅಂದಿರಬಹುದೇ ಅಂತಂದುಕೊಂಡಾಗ, ಸೊಸೆಯ ಮೇಲೆ ಅನುಮಾನ ಬಂದಿತ್ತು. ಹರೀಶ ಅತ್ತೆಗೆ, ಮಾವನಿಗೆ ನಮಸ್ಕರಿಸಿ, ಆಶೀರ್ವಾದ ಪಡೆದ. ಅಪ್ಪ ಇಲ್ಲದ ನನಗೆ, ನೀವೇ ಅಪ್ಪನ ಸಮಾನ, ನನ್ನಿಂದ ಏನಾದರೂ ಬೇಸರವಾಗಿದ್ದರೆ ಕ್ಷಮಿಸಿಬಿಡಿ..." ಎಂದ.

"ಪರವಾಗಿಲ್ಲ ಬಿಡಪ್ಪಾ, ಮಾತನ್ನಾಡುವಾಗ, ನಾಲ್ಕು ಮಾತು ಬರುತ್ತೆ. ನಾಲ್ಕು ಮಾತು ಹೋಗುತ್ತೆ. ನೀನೇನು ಹೊರಗಿನವನಲ್ಲ, ನಮ್ಮವನೇ ದೇವರು ನಿನಗೆ ಒಳ್ಳೇದನ್ನು ಮಾಡಲಿ. ನಿಮ್ಮಿಬ್ಬರನ್ನು ಚೆನ್ನಾಗಿಟ್ಟಿರಲಿ" ಆಶೀರ್ವಾದ ಮಾಡಿದ. ಅಲ್ಲಿಂದ ಇಬ್ಬರೂ ವಾಪಸ್ಸು ಹಿಂತಿರುಗಿದರು.

ಕೆಲವೇ ದಿನಗಳೊಳಗೆ ತಾರೀಖು ನಿಶ್ಚಯವಾಗಿತ್ತು. ಎಲ್ಲರಿಗೂ ತನ್ನ ಮದುವೆಯ ಆಹ್ವಾನ ಪತ್ರಿಕೆಯನ್ನು ಕೊಟ್ಟು ಕರೆದಿದ್ದ. ಸ್ನೇಹಿತರು ಕೇಳಿದ್ದರು.

"ಇದೇನೋ ಹೀಗೆ ದಿಢೀರನೆ ಮದುವೆ ಮಾಡಿಕೊಳ್ಳುತ್ತಿದೀಯಲ್ಲ, ನೀನು ನಿನ್ನ ಚಿತ್ರಾಂಗದೇನ ಇಷ್ಟು ಬೇಗ ಮರೆತು ಬಿಟ್ಯಾ ?" ಗೋಪಾಲ ನಕ್ಕಾಗ ಹರೀಶ ನಗಲಿಲ್ಲ." ಅದೆಲ್ಲ ಗತಕಾಲದ ಮಾತಾಯ್ತು. ಈಗ ಹರೀಶ ಬದಲಾಗಿದಾನೆ" ವಿಠ್ಠಲನೂ ಹಾಸ್ಯ ಮಾಡಿದ... ಆದರೆ

ಹರೀಶ ಗಂಭೀರವನ್ನು ನಟಿಸಿದ.

ಹರೀಶ ಖುದ್ದಾಗಿ ಸುಮತಿಗೆ ಆಹ್ವಾನ ಪತ್ರಿಕೆಯನ್ನು ಕೊಟ್ಟ. ನನ್ನ ಮದುವೆಗೆ ಖಂಡಿತಾ ಬರಬೇಕು ಎಂದು ಕೇಳಿಕೊಂಡಿದ್ದ. ಸುಮತಿ ಲಗ್ನಪತ್ರಿಕೆಯನ್ನು ಹಾಗೇ ಇಟ್ಟುಬಿಟ್ಟಳು.

''ಮದುವೆ ಯಾವ ಊರಿನಲ್ಲಿ?'' ಅಲ್ಲೇ ಇದ್ದ ಜಾನಕಿ ಕೇಳಿದಳು.

''ಚಿಂತಾಮಣಿಯಲ್ಲಿ... ನೀವೂ ಖಂಡಿತಾ ಬರಬೇಕು'' ಎಂದು ಆಹ್ವಾನಿಸಿದ. ಸುಮತಿ ಹುಬ್ಬೇರಿಸಿದಳು.

''ಇದೇ ಊರಿನಲ್ಲಿ ಮದುವೆ ನಡೆದಿದ್ದರೆ ಬರಬಹುದಾಗಿತ್ತು... ಚಿಂತಾಮಣಿ ಅಂದರೆ ಪ್ರಯಾಣ ಮಾಡಬೇಕಾಗುತ್ತದೆ. ನನ್ನ ಕೈಲಂತೂ ಆಗುಲ್ಲ. ಸುಮತಿ ಮಗುವಿನೊಂದಿಗೆ ಹೇಗೆ ಬರುತ್ತಾಳೆ...?''

''ಏನು ಮಹಾಕಷ್ಟ? ಬೆಳಿಗ್ಗೆ ಹೋಗಿ ರಾತ್ರಿಗೆ ವಾಪಸ್ಸು ಬರಬಹುದು...'' ಎಂದು ಸಂಕೇತ ನುಡಿದಾಗ, ಸುಮತಿ ಸಂಶಯದಿಂದ ಅವನನ್ನೇ ನೋಡಿದಳು. ಹರೀಶನೊಡನೆ ಸಂಕೇತ ಚಿಂತಾಮಣಿಗೆ ಹೋಗಿದ್ದನೆಂಬ ವಿಷಯ ಅವಳಿಗೆ ತಿಳಿದಿತ್ತು. ಯಾವುದೋ ಬಿಸಿನೆಸ್ ಮೇಲೆ ಅಲ್ಲಿಗೆ ಹೋಗಿದ್ದ ಎಂದು ಹೇಳಿದ್ದ... ವಿಮಲನ್ನ ನೋಡಲು ಹೋಗಿರಬಹುದೇ ಎಂಬ ಅನುಮಾನ ಅವಳನ್ನು ಕಾಡಿತ್ತು. ತಾನು ಚಿಂತಾಮಣಿಗೆ ಹೋಗಿ ವಿಮಲನ್ನು ಕಂಡು, ಮಾತನಾಡಿಸಬೇಕೆಂಬ ಆಸೆ ಅವಳಲ್ಲಿ ಹುಟ್ಟಿತು... ಹರೀಶ ಅತ್ತ ಹೋದ ಮೇಲೆ ಜಾನಕಿಗೆ ಹೇಳಿದಳು.

''ಒಂದು ದಿನದ ಪ್ರೋಗ್ರಾಂ ತಾನೇ... ಬೆಳಿಗ್ಗೆ ಹೋಗಿ, ಮದುವೆ ಮುಗಿಯುತ್ತಿದ್ದಂತೆಯೇ ವಾಪಸ್ಸು ಬಂದು ಬಿಡೋಣ...''

''ಮಗೂಗೆ, ಇನ್ನು ಎರಡು ತಿಂಗಳು ಸಹ ತುಂಬಿಲ್ಲ, ಹಾಗೆಲ್ಲಾ ಹೊರಗೆ ಸುತ್ತಾಡಿಸಬಾರದು. ನಿನಗೆ ಹೋಗಲೇಬೇಕು ಅಂತ ಆಸೆ ಇದ್ದರೆ ಹೋಗಿ ಬಾ... ನಾನು ಮಗೂನ ನೋಡಿಕೊಳ್ತೀನಿ... ಒಂದು ದಿನ, ಒಳಲೆಯಲ್ಲೋ ಚಮಚದಲ್ಲೋ ಹಾಲು ಕುಡಿಸಿದರಾಯ್ತು. ಅಂದ್ಹಾಗೇ ಫೀಡಿಂಗ್ ಬಾಟಲಿಯನ್ನು ಅಭ್ಯಾಸ ಮಾಡಿದ್ದರೆ ಚೆನ್ನಾಗಿತ್ತು...''

''ಅದರ ಅಗತ್ಯ ಕಂಡು ಬರಲಿಲ್ಲ.''

''ಒಳ್ಳೇದೇ ಆಯ್ತು ಬಿಡು. ಹೇಗೂ ನೀನೇನು ಕೆಲಸಕ್ಕೆ ಹೋಗುತ್ತಿಲ್ಲವಲ್ಲ. ಕೆಲಸಕ್ಕೆ ಹೋಗೋ ತಾಯಿಯರಿಗೆ ಅದೇ ಒಂದು ಭಾರಿ ಸಮಸ್ಯೆ'' ಈ ಮಾತಿನಲ್ಲಿ ಯಾವ ಅರ್ಥ ಅಡಗಿದೆ ಎಂದು ಸುಮತಿಗೆ ತಿಳಿಯಲಿಲ್ಲ.

ಮದುವೆಯ ಹಿಂದಿನ ದಿನ ಬೆಳಿಗ್ಗೆ ಹರೀಶನಿಂದ ಫೋನು ಬಂದ ಕೂಡಲೇ ಸಂಕೇತ

ಅವನ ಮನೆಗೆ ಹೊರಟ. ಸುಮತಿ ಕೇಳಿದಾಗ, ಸರಿಯಾಗಿ ಉತ್ತರವನ್ನು ಹೇಳಲಿಲ್ಲ. ಹರೀಶ ಸಂಕೇತನನ್ನು ಕಂಡೊಡನೆ ಅವನ ಕೈ ಹಿಡಿದ.

''ನನಗೆ ನೆನ್ನೆ ರಾತ್ರಿಯೆಲ್ಲಾ ನಿದ್ದೆಯೇ ಇಲ್ಲ... ಏನೋ ಟೆನ್ಷನ್'' ಎಂದ.

''ಹೌದು. ಹಾಗಾಗುತ್ತೆ ಇದು ಮೊದಲನೇ ಮದುವೆ ಅಲ್ವಾ ?''

''ನಿನಗೂ ಹೀಗೆ ಅನುಭವವಾಗಿತ್ತಾ ?''

''ಇಲ್ಲಪ್ಪಾ... ನನ್ನ ಮದುವೆ ಎಂತಹ ಸ್ಥಿತಿಯಲ್ಲಿ ನಡೆಯಿತು ಅಂತ ನಿನಗೇ ಗೊತ್ತಲ್ಲ. ನನ್ನ ಟೆನ್ಷನ್‌ಗಿಂತ, ನನಗೆ ಸುಮತಿಯ ಚಿಂತೆಯೇ ಹೆಚ್ಚಾಗಿತ್ತು.''

''ನೀನು ಇವತ್ತೇ ನಮ್ಮ ಜೊತೆ ಬಂದಿದ್ದರೆ ಚೆನ್ನಾಗಿತ್ತು...''

''ನಾಳೆ ದಿನ ಬಂದರೆ, ನನ್ನ ಜೊತೆ ಸುಮತಿಯೂ ಬರುತ್ತಾಳೆ...''

''ನಾನು ಈಗಲೇ ಸುಮತಿಗೆ ಹೇಳ್ತೀನಿ'' ಎನ್ನುತ್ತಾ ಹರೀಶ ಅವಳಿಗೆ ಫೋನು ಮಾಡಿದ.

''ನಾನು ಬರದೇ ಇದ್ದರೂ ನಿಮ್ಮ ಮದುವೆ ನೆರವೇರುತ್ತದೆ ಹರೀಶ... ಆದರೆ ನನಗೆ ಒಂದು ಸಾರಿ ಚಿಂತಾಮಣಿಗೆ ಬಂದು, ವಿಮಲನ್ನ ನೋಡಬೇಕೂಂತ ಆಸೆ...'' ಹರೀಶನ ಮುಖ ಕಪ್ಪಿಟ್ಟಿತು. ರಿಸೀವರನ್ನು ಸಂಕೇತ ಕೈಗೆತ್ತಿಕೊಂಡ. ಅದನ್ನರಿಯದ ಸುಮತಿ ಮಾತನ್ನು ಮುಂದುವರಿಸಿದಳು. ಸಂಕೇತನಿಗೆ ಇಷ್ಟವಾದ ವಿಮಲನ್ನ ನಾನು ನೋಡಲೇಬೇಕು. ಯಾಕೇ ಅಂದ್ರೆ ನಾನು ಒಂದು ತೀರ್ಮಾನಕ್ಕೆ ಬಂದಿದೀನಿ. ನಾನು ನಾಳೆ ಮದುವೆಗೆ ಬರುತ್ತೀನಿ. ಒಬ್ಬಳೇ ಬರೋದು ಕಷ್ಟ ಬೇರೆ ಯಾರೊಂದಿಗೂ ಬರಲು ನನಗಿಷ್ಟವಿಲ್ಲ'' ಎಂದು ಹೇಳಿ ರಿಸೀವರನ್ನು ಕೆಳಗಿಟ್ಟಳು.

''ಸಂಕೇತ ತಮಾಷೆಯಾಗಿ ನಕ್ಕು ಸುಮತಿ ಹೇಳಿದುದನ್ನು ಹೇಳಿದ'' ಅವಳಿಗೆ ವಿಮಲ ಯಾರೂಂತ ಇನ್ನೂ ಗೊತ್ತಾಗಿಲ್ಲ. ನನ್ನ ಮೇಲೆ ಏನೋ ಸಂಶಯ ಇನ್ನು ಇದೆ.''

''ನೀನು ಹೇಳಿಬಿಡಬೇಕಾಗಿತ್ತು.''

''ಸಸ್ಪೆನ್ಸ್ ಇರಲಿ ಅಂತ ನೀನೇ ಹೇಳಿದ್ದೆ. ಮರೆತು ಬಿಟ್ಯಾ ?''

''ನನ್ನ ಲೈಫೇ ಒಂದು ಸಸ್ಪೆನ್ಸ್ ಆಗಿದೆ... ನಾಳೆಯಿಂದ ನನ್ನ ಜವಾಬ್ದಾರಿ ಹೆಚ್ಚುತ್ತೆ... ವಿಮಲಾನೂ ಒಂದು ತರಹ ಸೆನ್ಸಿಟಿವ್...'' ಪೆಚ್ಚು ಮುಖ ಮಾಡಿದ.

''ಹೆಂಗಸ್ರೇ ಸೆನ್ಸಿಟಿವ್, ಒರಟುತನ ಎಲ್ಲಾ ಗಂಡಸರಿಗೇ... ಅಲ್ವಾ ?''

''ನಿನ್ನ ಒರಟುತನ ಕಡಿಮೆಯಾಗಿ ಹೋಗಿದೆ ಸಂಕೇತ... ಯಾಕೋ ಹೀಗಾದೆ ?''

''ಏನೋ ನಂಗೇ ಗೊತ್ತಿಲ್ಲ. ಹೋಗಲಿ ಈಗ ನಮ್ಮ ಮಾತೇಕೆ ?''

''ನಾನು ಒಂದು ಮಾತು ಕೇಳ್ತೀನಿ. ಅದು ತಪ್ಪೋ ಸರಿಯೋ ಅಂತ ನೀನು ನನಗೆ ಹೇಳಬೇಕು.'' ಪೆದ್ದನಂತೆ ಮುಖಮಾಡಿ ಮಾತನ್ನು ಮುಂದುವರೆಸಿದ.

''ನಾನು ನಾಳೆ ವಿಮಲನ್ನ ಪತ್ನೀ ಅಂತ ಸ್ವೀಕರಿಸಿದರೂ, ಅವಳಿಗೆ ದೃಷ್ಟಿ ಬರುವವರೆಗೂ ನನಗೆ ಅವಳೊಂದಿಗೆ ಸಂಬಂಧ ಇಟ್ಟುಕೊಳ್ಳುವುದು ಬೇಡಾಂತ ಅನ್ನಿಸುತ್ತೆ ಅದು ತಪ್ಪಾಗುತ್ತಾ ?''

''ಅದು ನಿನ್ನ ಪರ್ಸನಲ್ ವಿಷಯ.''

''ಪರ್ಸನಲ್ ಅಂತ ನನಗೂ ಗೊತ್ತು... ಈ ವಿಷಯದಲ್ಲಿ ಏನೋ ಗೊಂದಲ... ಅವಳಿಗೆ ದೃಷ್ಟಿ ಇಲ್ಲ ಅಂತ ತಿಳಿದೂ, ನನಗೆ ಅವಳೊಡನೆ ಮಲಗಲು ಒಂದು ತರಹ ಕಷ್ಟ ಆಗುತ್ತೆ... ಎಲ್ಲರೂ ಹಾಸ್ಯ ಮಾಡಿ ನಕ್ಕರೆ...''

''ಇದನ್ನು ಈ ಮುಂಚೇನೇ ನೀನು ಯೋಚಿಸಬೇಕಾಗಿತ್ತು. ನಾನೇನು ಹೇಳಲಿ ? ''

''ಅದಕ್ಕೇ ನಾನು, ಮದುವೆಗೆ ಮೊದಲು ಆಪರೇಷನ್ ಆಗಲಿ ಅಂತ ಹೇಳಿದ್ದುದು ಆದರೆ ಮಾವನಿಗೆ ಏನೋ ಆತಂಕ... ಅವನದ್ದೇ ಹಠ''

''ವಿಮಲನ ಹತ್ತಿರವೇ ಓಪನ್ ಆಗಿ ಮಾತನಾಡಿ ಬಿಡು... ಅರ್ಥವಾಗಬಹುದು''

''ಅವಳು ದೊಡ್ಡ ಊರಿನಲ್ಲ ಬೆಳೆದವಳಲ್ಲ. ಅವಳನ್ನು ಕನ್ವಿನ್ಸ್ ಮಾಡೋದು ಹೇಗೆ ? ಸುಮತಿ ಬರ್ತಾರಲ್ಲ, ಅವರ ಹತ್ತಿರ ಹೇಳಿಸ್ತೀಯ ?''

''ನೋಡ್ತೀನಿ. ಸುಮತಿ ಮದುವೆಗೆ ಬರದೇನೇ ಇದ್ದರೆ...''

''ಕರೆದುಕೊಂಡು ಬಾ... ಪ್ಲೀಸ್ ತಪ್ಪಿಸಬೇಡ...'' ಸಂಕೇತ ತಲೆಯಾಡಿಸಿದ ಅಲ್ಲೇ ಚಪ್ಪರದ ಪೂಜೆ, ದೇವರ ಸಮಾರಾಧನೆಯ ಊಟವನ್ನು ಮಾಡಿಕೊಂಡು ಮನೆಗೆಬಂದ. ಹರೀಶನ ಮನೆಯವರೆಲ್ಲಾ ಚಿಂತಾಮಣಿಗೆ ತೆರಳಿದ್ದರು.

''ಬೆಳಿಗ್ಗೆ ಬೇಗನೇ ಹೊರಟು ಬಿಡೋಣ. ಮುಹೂರ್ತದ ಹೊತ್ತಿಗೆ ಅಲ್ಲಿರ್ತೀವಿ'' ಸಂಕೇತ ಸುಮತಿಗೆ ಹೇಳಿದ. ಬಾಡಿಗೆಯ ಕಾರನ್ನು ಗೊತ್ತು ಮಾಡಿದ್ದ. ಅಂತೆಯೇ ಬೆಳಿಗ್ಗೆ ಮುಂಚಿತವಾಗಿ ಚಿಂತಾಮಣಿಗೆ ಹೊರಟರು. ಇವರಿಬ್ಬರೂ ಅಲ್ಲಿಗೆ ಹೋಗಿ ತಲುಪುವಷ್ಟರಲ್ಲಿ ಮದುವೆಯ ಕಲಾಪಗಳು ಪ್ರಾರಂಭವಾಗಿದ್ದವು. ಮದುವೆಗೆ ಹೇಮ ಬಂದಿರಲಿಲ್ಲ, ಸಂಕೇತನ ಹೊರತು ಉಳಿದ ಸ್ನೇಹಿತರಿಗೆ ವಿಮಲಳ ಬಗ್ಗೆ ಏನೂ ತಿಳಿದಿರಲಿಲ್ಲ... ಹರೀಶ ಹಸೆಮಣೆಯ ಮೇಲೆ, ಮದುಮಗನ ವೇಷದಲ್ಲಿ ಕುಳಿತಿದ್ದವನು, ಸಂಕೇತನನ್ನು ಕಂಡು ಕೈಯಾಡಿಸಿದ.

ವಿಮಲಳಿಗೆ ಸೋದರ ಮಾವನಿರಲಿಲ್ಲ... ಅವಳನ್ನು ಹಸೆಮಣೆಯ ಬಳಿಗೆ ಕರೆತರಲು, ಸೋದರ ಮಾವನ ಪಾತ್ರವನ್ನು ವಹಿಸಲು ಒಬ್ಬ ವ್ಯಕ್ತಿಯನ್ನು ಹುಡುಕುತ್ತಿದ್ದರು. ಅಷ್ಟರಲ್ಲಿ

ಸಂಕೇತ, ಸುಮತಿಯೊಡನೆ, ವಿಮಲಳನ್ನು ಮಾತನಾಡಿಸಲೆಂದು ಅಲ್ಲಿಗೆ ಬಂದ. ''ಸಿಕ್ಕಿದ್ರು... ಸಿಕ್ಕಿದ್ರು...'' ಯಾರೋ ನುಡಿದರು.

''ವಿಮಲನ್ನ ಹಸೆಮಣೆಗೆ ಕರೆದುಕೊಂಡು ಬನ್ನಿ...'' ಸಂಕೇತ ಸುಮತಿಯ ಕಡೆ ನೋಡಿದ. ಸುಮತಿ ಅಚ್ಚರಿಯಿಂದ ಕಣ್ಣು ಕಣ್ಣು ಬಿಟ್ಟಳು. ಮನಸ್ಸು ಗೊಂದಲಗೊಂಡಿತ್ತು.

''ಸುಮತೀ.. ಇವರೇ ವಿಮಲ... ವಿಮಲ, ನನ್ನ ಮಿಸೆಸ್ ಸುಮತಿ ಬಂದಿದಾರೆ...'' ಎಂದ ಮೃದುವಾಗಿ.

''ನೀವು ಸಂಕೇತ್ ಅಲ್ವಾ ?'' ಅವಳು ಎತ್ತಲೋ ನೋಡುತ್ತಾ ಕೇಳಿದಾಗ ಸುಮತಿ ಕಸಿವಿಸಿಗೊಂಡಳು.

''ಹೌದು ವಿಮಲ ನಾನು ಸಂಕೇತ್ ... ಇವಳು ನನ್ನ ಪತ್ನಿ ಸುಮತೀ''

''ಹುಡುಗೀನ ಹಸೆಮಣೆಗೆ ಕರೆದುಕೊಂಡು ಬನ್ನಿ... ಮುಹೂರ್ತಕ್ಕೆ ಹೊತ್ತು ಮೀರುತ್ತಿದೆ.'' ಸಂಕೇತನಿಗೇ ಆ ಕೆಲಸವನ್ನು ವಹಿಸಿದರು. ಸಂಕೇತ, ವಿಮಲಳ ಕೈ ಹಿಡಿದು ಅವಳನ್ನು ಹಸೆಮಣೆಯ ತನಕ ನಡೆಸಿಕೊಂಡು ಬಂದ. ಸುಮತಿ ದಿಙ್ಮೂಢಳಾಗಿದ್ದಳು. ಈ ವಿಮಲ, ಹೇಮಳ ನಾದಿನಿ, ಈಗ ಹರೀಶನ ಪತ್ನಿಯಾಗುತ್ತಿದಾಳೆ. ಇದು ಯಾವ ಹೊಸ ನಾಟಕ ? ಸಂಕೇತನ ಮೇಲೆ ಅಸಮಾಧಾನವಾಗಿತ್ತು.

ಹಸೆಮಣೆಯ ಮೇಲೆ ಹರೀಶನ ಮಗ್ಗುಲಲ್ಲಿ ಕುಳಿತ ಮದುಮಗಳು ವಿಮಲಳ ಮೇಲೇ ಎಲ್ಲರ ದೃಷ್ಟಿ. ಕೆಲವೇ ನಿಮಿಷಗಳಲ್ಲಿ, ಹರೀಶನ ಉಳಿದ ಸ್ನೇಹಿತರಿಗೆ, ಸುಮತಿಗೆ, ವಿಮಲ ಅಂಧಳೆಂದು ತಿಳಿಯಿತು. ಎಲ್ಲರ ಮನಸ್ಸೂ ತಳಮಳಗೊಂಡಿತ್ತು. ಎಲ್ಲರೂ ಇದ್ದಕ್ಕಿದ್ದಂತೆ ಮೌನವಾಗಿಬಿಟ್ಟರು. ತಾನೂ ನಗುನಗುತ್ತಾ ಇನ್ನೊಬ್ಬರನ್ನು ನಗಿಸುವ ಹರೀಶ, ಈ ಮದುವೆಗೆ ಹೇಗೆ ಒಪ್ಪಿಕೊಂಡ. ಎಲ್ಲೋ ಸಿಕ್ಕಾಪಟ್ಟೆ ವರದಕ್ಷಿಣೆ ಕೊಟ್ಟಿರಬೇಕು ಅದಕ್ಕೇ ಮದುವೆಯಾಗ್ತಿದಾನೆ ಅಂತ ಕೆಲವರ ಅಭಿಪ್ರಾಯವಾದರೆ, ಸುಮತಿಯ ಮನ ಬೇರೇನನ್ನೋ ಯೋಚಿಸುತ್ತಿತ್ತು.

ಸಂಕೇತ ಏನೋ ಸ್ಕೀಂ ಮಾಡಿದಾನೆ. ಇಲ್ಲದಿದ್ದರೆ ಹರೀಶ ತಿಳಿದೂ ತಿಳಿದು ಕುರುಡಿಯನ್ನು ಮದುವೆಯಾಗುವುದೆಂದರೇ, ಅದು ಇಂತಹ ಸೊಗಸುಗಾರ ! ಇಲ್ಲೇನೋ ರಹಸ್ಯವಿದೆ. ಸಂಕೇತ ತನ್ನಿಂದ ಮುಚ್ಚಿಟ್ಟಿದಾನೆ... ಏಕೋ ಅಲ್ಲಿಂದ ಹೊರಟರೆ ಸಾಕು ಎನಿಸಿತ್ತು. ಊಟವಾಗುವುದನ್ನೇ ಕಾದಿದ್ದಳು.

''ಸಂಕೇತ್, ನಾವು ಹೊರಡೋಣ್ವಾ ? ಮಗೂನ ಬಿಟ್ಟು ಬಂದು ತುಂಬಾ ಹೊತ್ತಾಗಿದೆ. ಆಂಟಿಗೂ ಕಷ್ಟವಾಗುತ್ತೆ'' ಸುಮತಿಯನ್ನು ಒಂದು ಪಕ್ಕಕ್ಕೆ ಕರೆದ.

''ನಿನ್ನಿಂದ ಒಂದು ಫೇವರ್ ಆಗಬೇಕು...''

''ಏನದು ?'' ಧ್ವನಿ ಗಡುಸಾಗಿತ್ತು...

"ಯಾಕೆ ಏನಾಯ್ತು ? ಯಾರಾದ್ರೂ ಏನಾದ್ರೂ ಅಂದ್ರಾ ? ಅಪ್ಸೆಟ್ ಆಗಿದೀಯ !

"ಯಾರೇಕೆ ಅಂತಾರೆ ? ನೀವೇ ನೀವೇ ನೀವ್ಯಾಕೆ ನನಗೆ ಹೇಳಲಿಲ್ಲ? ಹರೀಶ ವಿಮಲನ್ನ ಮದುವೆಯಾಗ್ತಾ ಇರೋ ವಿಷಯಾನ ಯಾಕೆ ಹೇಳಲಿಲ್ಲ?

"ಈಗ ಯಾಕೆ ಆ ಮಾತು ? ಮನೇಲಿ ಆಡಿದರಾಯ್ತು... ಈಗ ನಿನ್ನಿಂದ ಒಂದು ಕೆಲಸವಾಗಬೇಕಾಗಿದೆ. ಎಂದು ಹರೀಶ ಹೇಳಿದ್ದನ್ನುಹೇಳಿದ.' ನೀನು ಈಗ ವಿಮಲಳ ಸ್ನೇಹಿತೆಯಂತೆ... ಹರೀಶನ ಮನಸ್ಸಿನಲ್ಲಿ ಏನಿದೆ ಅಂತ ನೀನು ಈಗ ಅವಳಿಗೆ ತಿಳಿಸಬೇಕು."

"ಈ ಕೆಲಸ ನನ್ನಿಂದ ಆಗುಲ್ಲ... ಸಾರೀ..."

"ಯಾಕೆ ಆಗುಲ್ಲ? ನೀನೀಗ ಹೇಳದಿದ್ದರೆ ಅನಾಹುತವಾಗಿ ಬಿಡುತ್ತದೆ"

"ಅದು ಅವರವರಿಗೆ ಸಂಬಂಧಿಸಿದ ವಿಷಯ... ಅವರ ಪರ್ಸನಲ್ ವಿಷಯದಲ್ಲಿ ಬಾಯಿ ಹಾಕಲು ನನಗೆ ಯಾವ ಹಕ್ಕೂ ಇಲ್ಲ"

"ಸರಿ ಬಿಡು.. ಹರೀಶ ನಮಗೆ ಎಷ್ಟು ಸಹಾಯ ಮಾಡಿದಾನೆ. ಇಷ್ಟು ಸಣ್ಣ ಫೇವರ್ ನನ್ನಿಂದ ಆಗುಲ್ಲ ಅಂತಂದ್ರೆ... ನಾನೇ ಹೇಳಿ ಬಿಡ್ತೀನಿ."

"ನೀವು ? ನೀವು ವಿಮಲನ ಹತ್ತಿರ ಇಂಥ ವಿಷಯ ಮಾತಾಡ್ತೀರಾ !"

"ಯಾಕಾಡಬಾರದು ? ಅವಳು ನನಗೆ ತಂಗಿ ಇದ್ದ ಹಾಗೆ..." ಸುಮತಿ ನಕ್ಕಳು. ಅವನನ್ನು ಓರಗಣ್ಣಿನಿಂದ ನೋಡಿದಳು.

"ಈಗ ಸ್ವಲ್ಪ ಸಮಯಕ್ಕೆ ಮುಂಚೆ ಸೋದರ ಮಾವನ ರೋಲ್ ಮಾಡಿದ್ರಿ ! ಈಗ ಅಣ್ಣನ ರೋಲ್ ಮಾಡ್ತಿದೀರಿ !! ಇನ್ನು ಯಾವ ಯಾವ ರೋಲ್‌ಗಳಿವೆ ?"

"ವಾಟ್ ಡು ಯು ಮೀನ್ ?" ಅವನು ಹುಬ್ಬು ಗಂಟಿಕ್ಕಿದ...

"ಏನೂ ಇಲ್ಲ... ಮನೇಲಿ ಉಳಿದಿದ್ದನ್ನ ಮಾತನಾಡೋಣ. ಈಗ ಊರಿಗೆ ಹೊರಡೋಣ ಹೊತ್ತಾಗುತ್ತೆ... ಮಗು ಎಷ್ಟು ಅಳುತ್ತಿರುತ್ತೋ ಏನೋ ...?"

"ಸರಿ ನಡಿ ಹರೀಶನಿಗೆ ಹೇಳಿ ಬಿಟ್ಟು ಬರೋಣ." ಇಬ್ಬರೂ ನವದಂಪತಿಗಳು ಕುಳಿತು ರೆಸ್ಟ್ ತೆಗೆದುಕೊಳ್ಳುತ್ತಿದ್ದ ರೂಮಿಗೆ ಬಂದರು. ಸಂಕೇತನ ಕಣ್ಣು ಸನ್ನೆಯನ್ನರಿತು ಹರೀಶ ಸಂಕೇತನೊಂದಿಗೆ ಹೊರಬಂದ. ಸುಮತಿ ವಿಮಲಳ ಕೈ ಹಿಡಿದು ಕುಲಕಿದಳು. "ಹ್ಯಾಪಿ ಮ್ಯಾರಿಡ್ ಲೈಫ್..." ಎಂದು ಹಾರೈಸಿದಳು.

"ಹಾಗಂದ್ರೇನು ?" ಅವಳು ಮುಗ್ಧಳಂತೆ ಕೇಳಿದಾಗ ಸುಮತಿ ತಬ್ಬಿಬ್ಬುಗೊ..ಡಳು. ಈ ಹುಡುಗಿಗೆ ಇಂಗ್ಲಿಷ್ ಬರುಲ್ಲವೋ ಅಥವಾ ಅಷ್ಟು ಮುಗ್ಧೆಯೊ ?"

"ನಿಮ್ಮಿಬ್ಬರ ಹೊಸ ಜೀವನ ಚೆನ್ನಾಗಿರಲಿ" ಮತ್ತೆ ಹಾರೈಸಿದಳು.

"ನನ್ನಂತಹ ಕುರುಡಿಯನ್ನು ಮದುವೆಯಾಗಿದಾನೆ. ಅವನು ಖುಷಿಯಾಗಿರುಕ್ಕೆ ಸಾಧ್ಯಾನಾ ? ನಾನು ಎಷ್ಟೋ ಹೇಳಿದೆ... ನನಗೆ ತುಂಬಾ ಆತಂಕವಾಗುತ್ತಿದೆ." ಕೈ ಕೈ ಉಜ್ಜಿದಳು.

"ಆತಂಕ ಯಾಕೆ ? ಹರೀಶ ತುಂಬಾ ಒಳ್ಳೆಯವರು. ನಿಮ್ಮನ್ನು ಚೆನ್ನಾಗಿ ನೋಡಿಕೊಳ್ತಾರೆ." ತುದಿ ನಾಲಗೆಯ ಮಾತುಗಳನ್ನಾಡಿದಳು.

"ನನಗೂ ಗೊತ್ತು... ಆದರೆ ನನಗೆ ಒಂದು ಆಸೆ ಇದೆ... ನನ್ನ ಕಣ್ಣುಗಳ ಆಪರೇಷನ್ ಆದ ನಂತರವೇ, ನಾನು ಹರೀಶನೊಂದಿಗೆ ಸಂಸಾರ ಮಾಡ್ತೀನಿ. ಅಲ್ಲಿಯವರೆಗೂ ನನಗೆ ಅವನಿಂದ ದೂರವೇ ಇರಬೇಕು ಅಂತ ಆಸೆ... ಆದರೆ ಈ ಮಾತನ್ನು ನಾನು ಹೇಗೆ ಹೇಳಲಿ ? ನನಗೆ ನಾಚಿಕೆ ಆಗುತ್ತೆ.... ನೀವು ಹೇಳ್ತೀರಾ ? ನೀವು ಹರೀಶನ ಸ್ನೇಹಿತೆಯಂತೆ... ಹರೀಶ ನಿಮ್ಮನ್ನು ತುಂಬಾ ಹೊಗಳುತ್ತಿರುತ್ತಾರೆ...

"ಈ ಹುಡುಗಿ ಮುಗ್ಧೆಯಲ್ಲ, ತಿಳುವಳಿಕಸ್ಥೆ" ಎಂದು ಅರಿತಳು. ಅವಳ ಬಾಯಿ ಕಟ್ಟಿದಂತಾಗಿತ್ತು. ವಿಮಲಳ ಕೈ ಹಿಡಿದು ನುಡಿದಳು.

"ನಾನು ಹರೀಶನ ಹತ್ತಿರ ಮಾತಾಡ್ತೀನಿ ನಿಮಗೆ ಯಾವ ಆತಂಕವೂ ಬೇಡ" ಎಂದು ಹೇಳಿ ಹೊರಬಂದಳು. ಸಂಕೇತ, ಹರೀಶ, ಇಬ್ಬರೂ ಅವಳ ಕಡೆ ನೋಡಿದಾಗ ಅವಳು ನಸು ನಕ್ಕಳು. ಹರೀಶ ಕಣ್ಣಲ್ಲೇ ಥ್ಯಾಂಕ್ಸ್ ಹೇಳಿದ.

ದಾರಿಯಲ್ಲಿ ಎಷ್ಟೋ ಹೊತ್ತಿನ ನಂತರ ಸಂಕೇತ ಕೇಳಿದ... ವಿಮಲನ ಹತ್ತಿರ ಏನು ಮಾತಾಡಿದೆ ?

"ನಾನು ಏನೂ ಆಡಲಿಲ್ಲ, ಅವರವರೇ ಸರಿ ಮಾಡ್ಕೋತಾರೆ... ಇಂತಹ ವಿಷಯಗಳಲ್ಲಿ ನಾವು ಏನೂ ಹೇಳಬಾರದು. ನಾವು ಹೇಳಿದಂತೆ ಅವರು ಕೇಳುವುದೂ ಇಲ್ಲ."

"ವಿಮಲ ಏನಂದಳು ?" ಒತ್ತಿ ಕೇಳಿದ.

"ನಿಮಗ್ಯಾಕೆ ಅವಳ ಬಗ್ಗೆ ಅಷ್ಟು ಚಿಂತೆ ? ಅವರಿಬ್ಬರೂ ಪತಿ ಪತ್ನಿಯರು. ಅವರಿಬ್ಬರ ಮಧ್ಯೆ ಯಾವುದೇ ಸಂಬಂಧ ಇರಲಿ ಬಿಡಲಿ, ನಿಮಗ್ಯಾಕೆ ?"

"ನಾನು ಹರೀಶನ ಸ್ನೇಹಿತ. ಅವನು ನನಗೆ ತುಂಬಾ ಸಹಾಯ ಮಾಡಿದಾನೆ. ಒಂದು ಕಾಲವಿತ್ತು, ನಾನೂ ಅವನ ಮೇಲೆ ಸಂಶಯ ಪಟ್ಟಿದ್ದೆ... ನೀನು ಅವನ ಕಣ್ಣ ಎದುರಿಗೇ ಬರದಿರುವಂತೆ, ನೋಡಿಕೊಳ್ಳುತ್ತಿದ್ದೆ. ಆದರೆ, ಅವನು ವಿಮಲಳ ಪತಿ ಅಂತ, ಚಿಕ್ಕವಯಸ್ಸಿನಿಂದ ಮನೆಯವರು, ನಿರ್ಧರಿಸಿ ಬಿಟ್ಟಿದ್ದರಂತೆ. ಈ ವಿಷಯ ತಿಳಿದಾಗಲೇ ನಾನು ವಿಮಲಳನ್ನು ನೋಡಿದ್ದು... ಹರೀಶನಿಗೆ, ಮೊದಲು ಅವಳಿಗೆ ಕಣ್ಣುಗಳ ಆಪರೇಷನ್ ಮಾಡಿಸಬೇಕು, ನಂತರವೇ ಮದುವೆಯಾಗಬೇಕೂಂತ ಆಸೆ ಇತ್ತು. ಆದರೆ ಸೋದರಮಾವ ಒಪ್ಪಲೇ ಇಲ್ಲ..."

''ಹಾಗಾದರೆ ಬಲವಂತದ ಮದುವೆ ಅನ್ನಿ...''

''ಇಲ್ಲ, ಬಲವಂತವೇನಲ್ಲ... ಆದರೆ ಆ ಮಾವನಿಗೆ ಏನೋ ಆತಂಕ... ಅಷ್ಟೇ ಹರೀಶನೊಂದಿಗೆ, ಮದುವೆಗೆ ಮುಂಚೆ, ಅವರ ಮನೆಗೆ ಕಳಿಸುವುದಕ್ಕೆ ಇಷ್ಟವಿರಲಿಲ್ಲ''

''ಈ ಕಾಲದಲ್ಲೂ ಇಂತಹ ಜನರು ಇರ್ತಾರಾ ?''

''ಚಿಂತಾಮಣಿ ಸಣ್ಣ ಊರು. ಎಲ್ಲರ ಮನೆಯ ವಿಚಾರವೂ ಎಲ್ಲರಿಗೂ ತಿಳಿದಿರುತ್ತೆ. ಅಪವಾದ ಬರದೇ ಇರಲಿ ಅಂತ...''

''ಹಾಗಾದ್ರೆ ನಮ್ಮಿಬ್ಬರ ವಿಷಯ ತಿಳಿದ್ರೆ ಏನಂದುಕೊಳ್ತಾರೋ ...?''

''ಏನಂದುಕೊಳ್ತಾರೆ ? ನಮ್ಮನ್ನು ಹತ್ತಿರಕ್ಕೇ ಸೇರಿಸುಲ್ಲ, ನಿಮ್ಮಕ್ಕನೂ ಏನೂ ಹೇಳಿಲ್ಲ ಅಂತ ಕಾಣುತ್ತೆ.''

''ಅವಳ್ಯಾಕೆ ಹೇಳ್ತಾಳೆ ? ಅವಳಿಗೇನು ಬೇರೆ ಕೆಲಸ ಇಲ್ವಾ ? ಅಂದ ಹಾಗೆ ಅವಳು ಮದುವೆಗೆ ಬರಲೇ ಇಲ್ಲ...''

''ಯಾಕೆ ನಿನಗೆ ಗೊತ್ತಿಲ್ವಾ ? ಅವರು ಬಾಣಂತನಕ್ಕೆ ಹೋಗಿದಾರಂತೆ...''

''ಹೌದಾ ? ನನಗೆ ಯಾರೂ ಹೇಳಲೇ ಇಲ್ಲ... ನಾನು ವಿಚಾರಿಸಿಕೊಳ್ತೀನಿ'' ಎಂದವಳು ಇದ್ದಕ್ಕಿದ್ದಂತೆ... ಹ್ಹಾಂ... ಎನ್ನುತ್ತಾ ಎದೆಯ ಮೇಲೆ ಕೈಯನ್ನಿಟ್ಟುಕೊಂಡಳು.

''ಏನಾಯ್ತು ? ಏನಾಯ್ತು ? '' ಗಾಬರಿಯಿಂದ ಕೇಳಿದ.

''ಎದೆ ನೋಯ್ತಿದೆ... ಮಗೂಗೆ ಹಾಲು ಕುಡಿಸಿ ಎಷ್ಟೋ ಗಂಟೆಗಳು ಆದವಲ್ಲ... ಹಾಲು ಕಟ್ಟಿದೆ'' ಎದೆಯನ್ನು ನೀವಿಕೊಂಡಳು. ಕೆನ್ನೆಗಳು ಕೆಂಪಾಗಿದ್ದವು.

ಅವಳ ಮೇಲೆ ಬಾಗಿ ಪಿಸುದನಿಯಲ್ಲಿ ಏನನ್ನೋ ಹೇಳಿದ ತುಂಟತನದಿಂದ.

'ತಥ್' ಎಂದು ಅವನ ತಲೆಯ ಮೇಲೆ ಮೊಟಕಿದಳು'' ನಿಮ್ಮ ಮಾತುಗಳನ್ನು ಡ್ರೈವರ್ ಕೇಳಿಸಿಕೊಂಡರೇ...?''

''ಅವನ ಧ್ಯಾನವೆಲ್ಲಾ ರಸ್ತೆಯ ಮೇಲಿದೆ... ಯಾಕಪ್ಪಾ ಇಷ್ಟು ನಿಧಾನವಾಗಿ ಓಡಿಸ್ತಿದೀಯ... ಸ್ವಲ್ಪ ಸ್ಪೀಡ್ ತಗೋ...'' ಗಾಡಿ ವೇಗವಾಗಿ ಚಲಿಸಿತು.

ಗೇಟಿನ ಬಳಿಗೆ ಬರುತ್ತಿದ್ದಂತೆಯೇ, ಒಳಗಿನಿಂದ ಮಗುವಿನ ಅಳು ಕೇಳಿಸಿತು. ಸುಮತಿ ಗಡಬಡಿಸಿ ಒಳಬಂದಳು. ಜಾನಕಿ ಎತ್ತಿಕೊಂಡು, ಅಳುತ್ತಿದ್ದ ಮಗುವನ್ನು ಸಮಾಧಾನ ಗೊಳಿಸುತ್ತಿದ್ದಳು... ಸುಮತಿ ಓಡಿ ಬಂದು ಮಗುವನ್ನು ಎತ್ತಿಗೊಂಡು ಎದೆಗೊತ್ತಿಕೊಂಡಳು ಕ್ಷಣಮಾತ್ರದಲ್ಲಿ ಸೀರೆ ತೊಯ್ದು ಹೋಗಿತ್ತು. ಮಗುವನ್ನು ತೊಡೆಯ ಮೇಲೆ ಮಲಗಿಸಿಕೊಂಡು

ಹಾಲುಣಿಸಿದಳು. ಕ್ಷಣಮಾತ್ರದಲ್ಲಿ ಮಗು ತನ್ನ ಅಳುವನ್ನು ನಿಲ್ಲಿಸಿತ್ತು. ತೃಪ್ತಿಯಿಂದ ಮಲಗಿ ನಿದ್ರಿಸಿತು. ಒಳಬಂದ ಸಂಕೇತ, ಆ ದೃಶ್ಯವನ್ನು ಕಂಡು ಹುಬ್ಬುಗಳನ್ನು ಸೇರಿಸಿದ.

''ರೂಮಿಗೆ ಹೋಗಬಾರದಾ ಸುಮತೀ...''

''ಮಗು ತುಂಬಾ ಅಳುತ್ತಿತ್ತು. ಬೆಳಿಗ್ಗೆಯಿಂದ ಹಾಲನ್ನೇ ಕುಡಿಸಿರಲಿಲ್ಲವಲ್ಲ.'' ಎನ್ನುತ್ತಾ ಎದ್ದಳು. ಒದ್ದೆಯಾಗಿದ್ದ ಸೀರೆಯನ್ನು ಬದಲಾಯಿಸಿದಳು....

''ಮಲಗಿದ್ನಾ ? ಮಮ್ಮೀನ ತುಂಬಾ ಸತಾಯಿಸಿರಬೇಕು, ತುಂಟ...'' ತೊಟ್ಟಿಲಲ್ಲಿ ಮಲಗಿದ್ದ ಮಗುವನ್ನು ಮುದ್ದಿಸಿದ.

''ನಿದ್ದೆ ಮಾಡುತ್ತಿರುವ ಮಗೂನ ಮುದ್ದಿಸಬಾರದು... ನಿಮಗೆ ಅಷ್ಟು ಗೊತ್ತಾಗುಲ್ವಾ ?'' ಲಘುವಾಗಿ ರೇಗಿದಳು.

''ನನಗೇನು ಗೊತ್ತು ? ನನಗೆ ಯಾರೂ ಹೇಳಿರಲೇ ಇಲ್ಲ... ಅಂದ್ಹಾಗೆ ಮಮ್ಮೀ ಅಳ್ತಾ ಇದ್ದ ಹಾಗಿತ್ತು. ಯಾಕೆ ?''

''ನನಗೆ ಗೊತ್ತಿಲ್ಲ, ನೀವು ಕೇಳಲಿಲ್ವಾ ?''

''ನಾನು ಕೇಳಲಿಲ್ಲ, ನಾನು ಏನೇ ಮಾತಾಡಿದರೂ, ಅವಳು ಅಪಾರ್ಥ ಮಾಡಿಕೊಳ್ತಾಳೆ. ನನಗೆ ಮಾತನಾಡುಕ್ಕೇ ಕಷ್ಟವಾಗುತ್ತೆ... ಅವಳ ಹತ್ತಿರ''

''ಈ ನಡುವೆ ಆಂಟಿ ತುಂಬಾ ಮಂಕಾಗಿ ಬಿಟ್ಟಿದಾರೆ... ನೀವು ಸ್ವಲ್ಪ ವಿಚಾರಿಸಿಕೊಳ್ಳಿ. ಅವರಿಗೆ ಈಗ ನಿಮ್ಮನ್ನು ಬಿಟ್ಟರೆ ಬೇರೆ ಯಾರೂ ಇಲ್ಲ...''

''ಯಾಕೆ ? ಅವನು ಇದಾನಲ್ಲ'' ಅಂತ ಹೇಳ ಹೊರಟವನು ಅಷ್ಟಕ್ಕೆ ಸುಮ್ಮನಾದ. ಸುಮತಿ ಅವನ ಸಮೀಪಕ್ಕೆ ಬಂದಳು.

''ಅವರು ಕೊರಗ್ತಾ ಇದಾರೆ... ಅವರ ಮನಸ್ಸೆಲ್ಲಾ ಜಗ್ಗು ಮೇಲಿದೆ. ಅಲ್ಲಿ ಹೇಗಿದಾನೋ ಅಂತ ಅದೇ ಚಿಂತೆ... ಅದೇ ಕೊರಗಿನಲ್ಲಿ ಸರಿಯಾಗಿ ಊಟ ಮಾಡ್ತಾರೋ ಇಲ್ಲವೋ, ನಿದ್ದೆ ತಾನೇ ಹೇಗೆ ಬರುತ್ತೆ ?'' ಅವರಂತೂ ಹ್ಯಾಪಿಯಾಗಿಲ್ಲ.

''ಅದಕ್ಕೆ ನಾನೇನು ಮಾಡಲಿ ?'' ಸಿಡುಕಿದ.

''ನೀವೇ ನೋಡಿದ್ರಲ್ಲ ಸಂಕೇತ್... ಈಗ ನೀವೇ ಹೇಳಿ, ಮಗುವಿನ ಅಳುವನ್ನು ಕೇಳಿಯೇ ನನ್ನ ಎದೆ ಕರಗಿ, ಸೀರೆಯೆಲ್ಲಾ ನೆನೆದು ಹೋಯಿತು... ಆಂಟಿಯೂ ನನ್ನ ಹಾಗೆ ತಾಯಿ, ಅವರೂ ಜಗ್ಗುವಿಗಾಗಿ ಎಷ್ಟು ಕಣ್ಣೀರು ಹರಿಸಿರಬಹುದು... ಅವರ ಸೀರೆ ಎಷ್ಟು ನೆಂದಿರಬಹುದು ಅಂತ ನೀವೆಂದಾದ್ರೂ ಯೋಚಿಸಿದೀರಾ ? ನೀವು ಹೆಂಗಸಾಗಿದ್ದಿದ್ರೆ, ಅವರ ನೋವು ಏನು ಅಂತ ನಿಮಗೆ ಅರ್ಥವಾಗುತ್ತಿತ್ತು...''

"ಈಗ ಈ ಮಾತೆಲ್ಲಾ ಯಾಕೆ ? ಊಟ ಮಾಡೋಣ ಬಾ" ಇಬ್ಬರೂ ಕೆಳಗೆ ಇಳಿದು ಬಂದರು. ಜಾನಕಿ ಎಲ್ಲಿಯೂ ಕಾಣಲಿಲ್ಲ. ಸಂಕೇತ ರೂಮಿನ ಬಾಗಿಲ ಬಳಿ ಬಂದು ನಿಂತ. ಒಳಗಿನಿಂದ ಜಾನಕಿ ಅಳುತ್ತಿರುವ ಶಬ್ದ ಕೇಳಿಸಿತು.

"ಮಮ್ಮೀ ಮಮ್ಮೀ..." ಸಂಕೇತ ಮತ್ತೆ ಮತ್ತೆ ಕರೆದಾಗ, ಕಣ್ಣುಗಳನ್ನು ಒರೆಸಿಕೊಳ್ಳುತ್ತಾ ಹೊರಬಂದಳು. "ಮಗು ಮಲಗ್ತಾ ?" ಕೇಳಿದಳು.

"ಹುಂ ಮಲಗಿದಾನೆ. ತುಂಬಾ ಅತ್ತನಾ ? ಸುಧಾರಿಸಿ ಸುಧಾರಿಸಿ ಸಾಕಾಗಿರಬಹುದು ಅಲ್ವಾ ಆಂಟಿ..." ಸುಮತಿ ಕೇಳಿದಳು.

"ಹಾಗೇನಿಲ್ಲ, ಆದರೆ ... ನನಗೂ ವಯಸ್ಸಾಯ್ತಲ್ಲ... ಅಲ್ಲದೇ ಮಕ್ಕಳನ್ನು ಹೇಗೆ ರಮಿಸಬೇಕು ಅನ್ನೋದೇ ಮರೆತು ಹೋಗಿದೆ." ಮದುವೆ ಹೇಗೆ ನಡೀತು ? ಹರೀಶನ ಹೆಂಡತಿ ಹೇಗಿದಾಳೆ... ಅದೂ ಇದೂ ವಿಷಯಗಳನ್ನಾಡುತ್ತಾ ಊಟ ಮಾಡಿದರು. ಸುಮತಿ ಹೇಳಿದಂತೆ ಮಮ್ಮಿ ಮಂಕಾಗಿದಾಳೆ... ಅವಳ ಮನಸ್ನಲ್ಲಿ ಕೊರಗು ಇದೆ ಎಂದು ಅರಿತ. ಆದರೆ, ಅದಕ್ಕೆ ತಾನು ಏನು ಪರಿಹಾರ ಹೇಳಬಲ್ಲ ?



ಹರೀಶ ವಿಮಲಳನ್ನು, ಹೆಸರಾಂತ ಕಣ್ಣಿನ ಆಸ್ಪತ್ರೆಗೆ ಕರೆದುಕೊಂಡು ಹೋಗಿ, ಕೇಸ್ ಹಿಸ್ಟರಿಯನ್ನೆಲ್ಲ ಅರುಹಿದ. ಅವರು ಮತ್ತೊಮ್ಮೆ ಕೂಲಂಕಷವಾಗಿ ಎಲ್ಲಾ ಪರೀಕ್ಷಿಸಿ, ಆಪರೇಷನ್ ಮಾಡಬಹುದು ಎಂದರು. ಕಡೇಪಕ್ಷ ಎಲ್ಲಾ ಸೇರಿ ಒಂದು ಲಕ್ಷದವರೆಗೂ ಹಣ ಖರ್ಚಾಗುತ್ತದೆಂದು ಡಾಕ್ಟರು ಹೇಳಿದಾಗ, ಹರೀಶ ಹೌಹಾರಿದ. ಅಷ್ಟೊಂದು ಹಣ ತನ್ನ ಬಳಿ ಎಲ್ಲಿದೆ ?

"ಇದೇ ವಿಷಯವನ್ನು ಸಂಕೇತನ ಬಳಿ ಮಾತನಾಡಿದಾಗ, ಸಂಕೇತ ತಕ್ಷಣವೇ, ನೀನೇನೂ ಯೋಚಿಸಬೇಡ, ನಾನು ಕೊಡ್ತೀನಿ" ಎಂದಿದ್ದ.

"ಬೇಡಪ್ಪ... ಸಾವಿರ ಅಲ್ಲ; ಲಕ್ಷ... ಲಕ್ಷ ಹಣವನ್ನು ನಾನು ಈ ಜನ್ಮದಲ್ಲಿ ತೀರಿಸಲಾರೆ."

"ತೀರಿಸಲೇ ಬೇಕೂಂತ ಏನಿಲ್ಲ... ಅಷ್ಟಕ್ಕೂ ಆ ಆಸೆ ಇದ್ದರೆ, ಇನ್ನು ನಾಲ್ಕು ಜನ್ಮವನ್ನು ಎತ್ತೋಣ... ಪ್ಲೀಸ್ ಹಿಂದೆ ಮುಂದೆ ನೋಡಬೇಡ, ನಿನ್ನ ಪತ್ನಿ ನನಗೆ ತಂಗಿ ಸಮಾನ. ಅವಳು ಅಂಧಕಾರದಲ್ಲಿ ಬಾಳುವುದನ್ನು ನೋಡಿದರೆ ನನಗೆ ಹಿಂಸೆಯಾಗುತ್ತದೆ." ಹರೀಶ ಯಾವುದೋ ಅನುಮಾನದಿಂದ ನೋಡಿದ.

"ಯಾಕೆ ಹೀಗೆ ಮಾತನಾಡ್ತಿದಾನೆ ಅಂತ ಅನ್ಕೋಬೇಡ. ಜೀವನದಲ್ಲಿ ನನ್ನ ಮನಸ್ಸಿನ ಏರುಪೇರುಗಳ ಮಧ್ಯೆ ನೆಮ್ಮದಿಯನ್ನೇ ಕಳೆದುಕೊಂಡವನಿಗೆ ನೀನು ಎಷ್ಟು ಮಾರಲ್

ಸಪೋರ್ಟ್ ಕೊಟ್ಟಿದೀಯ... ನಾನು ಅದನ್ನು ಮರೆಯುವಂತೆಯೇ ಇಲ್ಲ. ನೀನಿಲ್ಲದೇ ಹೋಗಿದ್ದರೆ, ನಾನು ಏನಾಗಿರುತ್ತಿದ್ದೆನೋ ?" ಹರೀಶ ಪೆಚ್ಚುನಗೆ ನಕ್ಕು ನುಡಿದ.

"ಏನೂ ಇಲ್ಲ. ಅಮೆರಿಕಾಕ್ಕೆ ವಾಪಸ್ಸು ಹೊರಟು ಹೋಗಿರುತ್ತಿದ್ದೆ. ನೀನು"

"ಈಗ ಇಲ್ಲೇ ಇದೀನಲ್ಲಪ್ಪಾ..."

"ಈಗ ನೀನು ಬಂದಿರೋದು ಸುಮತಿಗೋಸ್ಕರ... ನನಗೋಸ್ಕರ ಏನಲ್ಲ."

"ಏನೇ ಇರಲಿ. ನಾನು ಇಲ್ಲಿ ಇರೋದು ನಿಜತಾನೇ... ನನ್ನ ಕೈಯಲ್ಲಿಂದ ಆಗೋ ಸಹಾಯವನ್ನು ನಿರಾಕರಿಸಬೇಡ..." ಹರೀಶನನ್ನು ಒಪ್ಪಿಸಿದ.

"ಈಗಾಗಲೇ ಸಾಕಷ್ಟು ವರ್ಷ, ಮದುವೆಯನ್ನು ಮುಂದೂಡಿದೀಯೆ... ಈಗ ಮದುವೆಯಾಗಿಯೂ ನೀನು ಬ್ರಹ್ಮಚಾರಿಯಾಗಿಯೇ ಇದೀಯ. ನಿನ್ನನ್ನು ನೋಡಿದರೆ ನನಗೆ ಅಯ್ಯೋ ಅಂತ ಎನಿಸುತ್ತೆ."

"ನಾನು ವಿಮಲಳಿಗೋಸ್ಕರ ಜೀವಮಾನವೆಲ್ಲಾ ಬ್ರಹ್ಮಚಾರಿಯಾಗಿರಬಲ್ಲೆ. ಆದರೆ ನನ್ನ ಪರಿಸ್ಥಿತಿ ನಿನಗೇ ಗೊತ್ತು... ನನಗೆ ನಾನೇ ಕಂಡೀಷನ್ ಹಾಕಿಕೊಂಡು ಬಿಟ್ಟೆ..."

"ಈಗ ಅದು ತಪ್ಪು ಅಂತ ಅನ್ನಿಸ್ತಿದೆಯಾ ?"

"ಇಲ್ಲ, ಇಲ್ಲ, ವಿಮಲಳ ಮನಸ್ನಲ್ಲೂ ಅದೇ ಇದೆ. ಆದರೆ ಅವಳನ್ನು ಎಲ್ಲರೂ ಕನಿಕರದಿಂದ ನೋಡುವುದು, ಅದೇ ವಿಷಯವನ್ನು ಮತ್ತೆ ಮತ್ತೆ ಮಾತಾಡುವುದು ನನಗೆ ಇಷ್ಟವಾಗುವುದಿಲ್ಲ. ಇವನ್ನಲ್ಲೇ ಏನೋ ಐಬು ಇದೆ. ಅದಕ್ಕೇ ಕುರುಡಿಯನ್ನು ಮದುವೆಯಾಗಿದ್ದಾನೆ. ಇಲ್ಲದಿದ್ದರೆ ಈ ಹರೀಶ ಯಾಕೆ ಒಪ್ಕೋತಿದ್ದ ಅಂತ ಯಾರೋ ಅಂದ್ರಂತೆ. ..."

"ನಿನಗೆ ಯಾರು ಹೇಳಿದ್ರು ? ಅವರಿವರ ಮಾತಿಗೆ ಕೇರ್ ಮಾಡಬೇಡ. ನಿನಗೆ ಯಾವುದು ಸರಿ ಅನ್ನಿಸುತ್ತೋ ಹಾಗೇ ಮಾಡು. ನನ್ನ ಸುಮತಿಯ ಮದುವೆಯ ಸಮಯದಲ್ಲೂ ಹೀಗೇ ಎಷ್ಟು ಮಾತು ಬಂತು ? ಆದರೆ ನಾನು ಅಲ್ಲಾಡಲಿಲ್ಲ." ತನ್ನನ್ನು ತಾನು ಸಮರ್ಥಿಸಿಕೊಳ್ಳುತ್ತಾ ನುಡಿದ.

"ಹೌದು. ನಾನು ಎಷ್ಟೋ ದಿನಗಳಿಂದ ಕೇಳಬೇಕೂಂತ ಇದ್ದೆ. ನಿನಗಂತೂ ಜಗ್ಗೂನ ಕಂಡರೇ ಆಗುಲ್ಲ. ಆದರೂ ನೀನು ಸುಮತಿಯನ್ನು ಆ ಮಗುವನ್ನು ಅದು ಹೇಗೆ ಆಕ್ಸೆಪ್ಟ್ ಮಾಡಿಕೊಂಡೆ" ಕಾತುರದಿಂದ ಪ್ರಶ್ನಿಸಿದ.

"ದಟ್ ಈಸ್ ದ ಗ್ರೇಟ್ನೆಸ್ ಆಫ್ ಸಂಕೇತ್..." ತನ್ನ ಷರಟಿನ ಕಾಲರನ್ನು ಸರಿ ಮಾಡಿಕೊಂಡ.

''ನಿಜ ಹೇಳು ಸಂಕೇತ್... ಬೇರೆ ಏನೂ ಚಕ್ಕರ್ ಇರಲಿಲ್ವಾ ?''

''ನಾನು ಅವಳನ್ನು ಪ್ರೀತಿಸುತ್ತಿದ್ದೆ ದಟ್ಸಾಲ್... ನಮ್ಮ ಮನೆಯಲ್ಲಿ ಸುಮತಿಗೆ ಅನ್ಯಾಯವಾಗುವುದನ್ನು ತಪ್ಪಿಸಿದೆ...''

''ನನಗ್ಯಾಕೋ ನಂಬಿಕೇನೇ ಬರ್ತಿಲ್ಲ. ಇಷ್ಟು ದೊಡ್ಡ ಹೃದಯ ನಿನಗೆ ಹೇಗೆ ಬಂತು ಅಂತ...''

''ಹೇಳಿದ್ನಲ್ಲ. ನಾನು ಸುಮತಿಯನ್ನು ತುಂಬಾ ಪ್ರೀತಿಸುತ್ತಿದ್ದೆ. ಅವಳೂ ಒಳ್ಳೆಯ ಹುಡುಗಿಯಾಗಿದ್ದಳು. ಅವಳು ಜಗ್ಗೂನ್ನೇ ಮದುವೆಯಾಗ್ತೀನಿ ಅಂತಂದಾಗ, ನಾನೇ ಯಾಕೆ ಮದುವೆಯಾಗಬಾರದು ಅಂತ ಅನ್ನಿಸ್ತು... ಇದು ತಪ್ಪಲ್ಲವಲ್ಲ.'' ಮದುವೆಗೆ ಮೊದಲು ಇದ್ದ ಸಂಬಂಧವನ್ನು ಹೇಳಿಕೊಳ್ಳಲು ಹೀನಾಯವೆನಿಸಿತ್ತು.

''ನೀನು ತುಂಬಾ ಒಳ್ಳೆಯ ಕೆಲಸವನ್ನೇ ಮಾಡಿದೆ... ಆದರೆ ನಿನಗೆ ಜಗ್ಗು ಮೇಲೆ ಈಗಲೂ ಅದೇ ಕೋಪ ಇದೆಯಾ ?''

''ಕೋಪ ಇದ್ದೇ ಇದೆ. ಆದರೆ ಮಮ್ಮೀನ ನೋಡಿದಾಗಲೆಲ್ಲಾ ಅವಳು ಕೊರಗ್ತಾ ಇದಾಳೆ ಅಂತ ಅನ್ನಿಸುತ್ತೆ... ಮನಸ್ಸಿಗೆ ತುಂಬಾ ಕಷ್ಟವಾಗುತ್ತದೆ.''

''ಈಗ ಜಗ್ಗೂನ ಯಾಕೆ ವಾಪಸ್ಸು ಕರೆದುಕೊಂಡು ಬರಬಾರದು ? ಎಲ್ಲಾ ಸರಿಯಾಯ್ತಲ್ಲ. ಆಂಟಿಗೂ ಖುಷಿಯಾಗುತ್ತೆ.'' ಸಂಕೇತ ಮುಖ ಸಿಂಡರಿಸಿದ.

''ಅದನ್ನೆಲ್ಲ ಆಮೇಲೆ ಯೋಚಿಸೋಣ. ನಿನ್ನ ವಿಷಯ ಹೇಳು.''

''ನೀನು ಹೇಗೆ ಹೇಳಿದ್ರೆ ಹಾಗೆ... ನನಗೆ ಯಾವ ಛಾಯ್ಸೂ ಇಲ್ಲ... ಆದರೆ ನಿನಗೆ ಇನ್ನು ಯಾವ ಕೆಲಸ ಸಿಕ್ಕಿಲ್ಲವಲ್ಲ...''

''ಸಿಗುವ ಹಾಗಿದೆ. ಇಂಟರ್‌ವ್ಯೂ ಆಗಬೇಕು ಅಷ್ಟೇ...''

☆ ☆ ☆

ಕೆಲವೇ ದಿನಗಳಲ್ಲೇ ಸಂಕೇತನಿಗೆ ಒಂದು ಒಳ್ಳೆಯ ಕಂಪೆನಿಯಲ್ಲಿ ಕೆಲಸ ಸಿಕ್ಕಿತ್ತು. ನಾಲ್ಕಾರು ಬಗೆಯ ಸ್ವೀಟ್ಸ್‌ಗಳನ್ನು ಪ್ಯಾಕ್ ಮಾಡಿಸಿಕೊಂಡು ಬಂದ.

''ನನಗೆ ಕೆಲಸ ಸಿಕ್ಕಿದೆ. ತಿಂಗಳಿಗೆ ಐವತ್ತು ಸಾವಿರ ರೂಪಾಯಿ ಸಂಬಳ ಎಲ್ಲಾ ಅಲೋಯನ್ಸ್‌ಕೊಡ್ತಾರೆ'' ಖುಷಿಯಿಂದ ಸುಮತಿಗೆ ಹೇಳಿದ.

''ಆಂಟಿಗೆ ಹೇಳಿದ್ರಾ ?''

''ಇಲ್ಲ ನಾನು ಹೇಳಿಲ್ಲ, ನೀನೇ ಹೇಳಿಬಿಡು''

''ನಾನು ಹೇಳೋದಕ್ಕಿಂತ ನೀವು ಹೇಳಿದರೇ ಮರ್ಯಾದೆ.''

''ಹಾಗೇ ಇನ್ನು ಒಂದು ವಿಷಯ. ನಮಗೆ ಕ್ವಾರ್ಟರ್ಸ್ ಕೊಡ್ತಾರೆ. ನಾವು ಅಲ್ಲಿಗೆ ಷಿಫ್ಟ್ ಮಾಡಿಬಿಡೋಣ...'' ಸುಮತಿ ಮಂಕಾದಳು.

''ಮಮ್ಮಿ ಇದಕ್ಕೆ ಒಪ್ತಾರಾ ?''

''ಅವಳು ಬೇಕಾದರೆ ಇಲ್ಲೇ ಇರಲಿ...''

''ಒಬ್ಬರೇ ಹೇಗೆ ಇರ್ತಾರೆ ?''

''ಜಗ್ಗು ಇದಾನಲ್ಲ ಅವಳ ಜೊತೆಗೆ'' ಕೆಟ್ಟದಾಗಿ ನಕ್ಕ

''ಈಗಲೂ ತಮಾಷೇನಾ ?''

''ತಮಾಷೆಯಲ್ಲ. ಅವಳಿಗೆ ಒಬ್ಬಳಿಗೇ ಇದ್ದು ಅಭ್ಯಾಸವಾಗಿದೆ. ಏನೂ ಪರವಾಗಿಲ್ಲ.''

''ಬೇಜಾರು ಅಂತ ಪೇಯಿಂಗ್ ಗೆಸ್ಟನ್ನು ಇಟ್ಟುಕೊಂಡಿದ್ದು. ಇಲ್ಲದಿದ್ದರೆ ನಾನೆಲ್ಲಿ ಸಿಕ್ತಿದ್ದೆ ನಿಮಗೆ... ವಿಮಲನಂಥೋಳನ್ನ ಮದುವೆಯಾಗಬೇಕಾಗಿತ್ತು...'' ಕೆಣಕಿದಳು.

''ಸುಮತೀ ವಾಟ್ ಡೂ ಯೂ ಮೀನ್ ?'' ಅವಳ ತೋಳನ್ನು ಹಿಡಿದ.

''ಏನಿಲ್ಲ, ಸುಮ್ಮನೇ ತಮಾಷೆ ಮಾಡಿದೆ...'' ಅವಳು ಕೊಸರಿಕೊಂಡಳು.

''ಇಂತಹ ಚೀಪ್ ತಮಾಷೆ ಮಾಡಬೇಡ. ವಿಮಲ ನನಗೆ ತಂಗಿ ಇದ್ದ ಹಾಗೆ... ಅವಳಿಗೂ ನನಗೂ ಬರೀ ಪರಿಚಯವಿದೆ ಅಷ್ಟೇ... ಅವಳ ಬಗ್ಗೆ ನಿನಗೆ ಅಯ್ಯೋ ಅಂತ ಅನ್ನಿಸುಲ್ವಾ ?'' ಇಂಥ ತಮಾಷೇನಾ ಮಾಡೋದು ?''

''ನನಗೇಕೆ ಅಯ್ಯೋ ಅಂತ ಅನ್ನಿಸಬೇಕು ? ಅವಳನ್ನು ನೋಡಿಕೊಳ್ಳೋಕೆ ಹರೀಶ ಇದಾನಲ್ಲ, ನೀವ್ಯಾಕೆ ಅವಳ ಕಣ್ಣಿನ ಆಪರೇಷನ್ನಿಗೆ ಓಡಾಡ್ತಾ ಇದೀರಿ ?''

''ಅದೆಲ್ಲ ನಿನಗ್ಯಾಕೆ ? ಹರೀಶ ನನ್ನ ಸ್ನೇಹಿತ. ಅವನಿಗೆ ನಾನು ನನ್ನ ಕೈಲಾದ ಸಹಾಯ ಮಾಡ್ತಿದೀನಿ. ಇದರಿಂದ ಅವರಿಬ್ಬರೂ ಸುಖವಾಗಿರುತ್ತಾರೆ...''

''ವಿಮಲನ ಮೇಲಿರುವ ಚಿಂತೆ, ನಿಮಗೆ ನಿಮ್ಮ ತಾಯಿಯ ಮೇಲೆ ಇಲ್ಲವಲ್ಲ, ನನಗೆ ಅದೇ ಆಶ್ಚರ್ಯವಾಗುತ್ತೆ.'' ಹಂಗಿಸಿದಾಗ ಅವನು ಸಿಡುಕಿದ.

''ಹೌದು ನನ್ನ ಬಿಹೇವಿಯರ್ ಎಲ್ಲಾ ನಿನಗೆ ಆಶ್ಚರ್ಯವಾಗಿ ಕಾಣುತ್ತೆ. ಮಮ್ಮೀಗೆ ನಾನೇನು ಕಡಿಮೆ ಮಾಡಿದೀನೋ... ಅದು ನಿನಗೆ ತಾನೇ ಗೊತ್ತು'' ಎಂದು ಒರಟಾಗಿ ನುಡಿದು

ಅಲ್ಲಿಂದ ಹೊರಟು ಹೋಗಿದ್ದ. ಸುಮತಿ ಯೋಚಿಸುತ್ತಾ ಹಾಗೇ ಕುಳಿತಳು.

☆ ☆ ☆

ಇದ್ದಕ್ಕಿದ್ದಂತೆ, ಸಂಕೇತ, ಮನೆಯ ಸುಣ್ಣಬಣ್ಣ ಪೇಂಟಿಂಗ್ ಕೆಲಸಗಳನ್ನು ಪ್ರಾರಂಭಿಸಿದಾಗ ಇಬ್ಬರೂ ಆಶ್ಚರ್ಯಗೊಂಡಿದ್ದರು. ''ಮನೆಯ ಗೋಡೆಗಳಿಗೆ ಸುಣ್ಣ ಬಣ್ಣವಿಲ್ಲದೆ ಕಂಗೆಟ್ಟಿತ್ತು. ಈಗ ಈ ಮನೆಗೆ ಇವನೇ ಯಜಮಾನ... ಏನಾದರೂ ಮಾಡಿಕೊಳ್ಳಲಿ, ಹೇಗೂ ನನಗೆ ಏನನ್ನು ಹೇಳುವುದಿಲ್ಲ, ನಾನು ಹೇಳಿದ್ದನ್ನು ಕೇಳುವವನೂ ಅಲ್ಲ... ಸುಮ್ಮನೇ ಯಾಕೆ ಚರ್ಚೆ'' ಎಂದುಕೊಂಡು ಸುಮ್ಮನಾಗಿದ್ದಳು. ಜಾನಕಿ. ''ಮನೆಯ ಗೋಡೆಗಳಿಗೆ ಕಲರ್ ಹೊಡೆಸಿ ಬಿಟ್ಟರೆ, ಮನೆಯಲ್ಲಿರುವವರ ರಂಗು ಬದಲಾಗುತ್ತದೆಯೆ ? ಈ ಮನೆಯಿಂದ ಷಿಫ್ಟ್ ಮಾಡುವ ಮೊದಲು, ಈ ಮನೆಗೆ ಬಣ್ಣ ಬಳಿಸಿ, ತಾಯಿಯನ್ನು ಮೆಚ್ಚಿಸಲು ನೋಡುತ್ತಿದಾನೆ... ಇದರಿಂದ ಆಂಟಿಗೆ ಖುಷಿಸಿಗುತ್ತದೆಯೆ ? ಆದರೆ ಸಂಕೇತನನ್ನು ಆ ಬಗ್ಗೆ ಪ್ರಶ್ನಿಸಲಿಲ್ಲ ಸುಮತಿ. ಎಂಟು ಹತ್ತು ದಿನಗಳಲ್ಲಿ ಮನೆಯ ರೂಪವೇ ಬದಲಾಗಿತ್ತು. ಎಷ್ಟೋ ವರ್ಷಗಳಿಂದ ಹಳತಾಗಿದ್ದ ಗೋಡೆಗಳು ಹೊಸರೂಪದಿಂದ ಹೊಳೆಯುತ್ತಿದ್ದವು. ಆದರೆ, ಇದ್ದ ಮೂರು ಜನರೂ, ಒಬ್ಬರನ್ನೊಬ್ಬರು ಮಾತನಾಡಿಸಲು ಹಿಂಜರಿಯುತ್ತಿದ್ದರು. ಎಷ್ಟೋ ಅಷ್ಟು ಮಾತು. ಇದೇ ಸಮಯದಲ್ಲಿ ಹೇಮಳಿಗೆ ಹೆಣ್ಣು ಮಗು ವಾಗಿದೆ ಎಂಬ ವಾರ್ತೆ ಭದ್ರಾವತಿಯಿಂದ ಬಂದಿತು. ಸುಮತಿ ಭದ್ರಾವತಿಗೆ ಹೋಗಿ ಬರುವ ಆಸೆಯನ್ನು ವ್ಯಕ್ತಪಡಿಸಿದಳು. ಆದರೆ ಸಂಕೇತ ಒಪ್ಪಲಿಲ್ಲ.

''ಈಗ ಬೇಡ. ಈ ಭಾನುವಾರ ಮನೆಯಲ್ಲಿ ಒಂದು ಪಾರ್ಟಿಯನ್ನು ಕೊಡುತ್ತಿದೇನೆ. ನನ್ನ ಸ್ನೇಹಿತರು, ಕಲೀಗ್ಸ್ ಎಲ್ಲಾ ಬರುತ್ತಾರೆ. ಆಮೇಲೆ ನಾವು ಹೋಗಿ ಬರೋಣ'' ಎಂದು ನುಡಿದ. ಸುಮತಿ ಸುಮ್ಮನಾಗಿಬಿಟ್ಟಳು.

''ಯಾವ ಪಾರ್ಟಿ ? ಯಾತಕ್ಕೆ ಅಂತ ಕೇಳುಲ್ವಾ'' ಅವಳ ಗಲ್ಲವನ್ನೆತ್ತಿದ.

''ಹೇಳಬಹುದು ಅಂತಿದ್ದರೆ ನೀವೇ ಹೇಳಿಬಿಡಿ''

''ಯಾಕೆ ಹೀಗೆ ಹಂಗಿಸಿ ಮಾತನಾಡ್ತೀಯ ? ಎನಿವೇ ನಾನೇ ಹೇಳಿ ಬಿಡ್ತೀನಿ. ಒಂದು, ನಾನು ಮದುವೆಯಾದಾಗ, ನಾನು ಸ್ನೇಹಿತರಿಗೆ ಪಾರ್ಟಿಕೊಡಿಸಬೇಕೂಂತ ಅಂದುಕೊಂಡಿದ್ದೆ, ಆದರೆ ಆಗಿನ ಗೊಂದಲದಲ್ಲಿ ಆಗಲಿಲ್ಲ. ಪುನೀತ ಹುಟ್ಟಿದಾಗಲೂ ಆಗಲಿಲ್ಲ. ಮಮ್ಮಿಗೆ ಮೊಮ್ಮಗ ಹುಟ್ಟಿದ ಅನ್ನೋ ಖುಷಿಯೇ ಇರಲಿಲ್ಲ. ನನಗೂ ಮೂಡ್ ಆಫ್ ಆಯಿತು. ಈಗ ನನಗೆ ಒಳ್ಳೆಯ ಕೆಲಸ ಸಿಕ್ಕಿದೆ. ಈಗ ನಾನು ಯಾರ ಮರ್ಜಿಯನ್ನು ಅನುಸರಿಸಬೇಕಾಗಿಲ್ಲ. ಆದರೆ ಇದೆಲ್ಲದರ ಜೊತೆಗೆ ಇನ್ನು ಒಂದು ಆಶ್ಚರ್ಯದ ಸುದ್ದಿ ಇದೆ. ಆದರೆ ಅದನ್ನು ನಾನು ಈಗಲೇ ಹೇಳುಲ್ಲ, ಅದು ಮಾತ್ರ ಸಸ್ಪೆನ್ಸ್...'' ಸುಮತಿ ಹಾಗೇ ಗೋಡೆಗೆ ಒರಗಿ ನಿಂತಳು. ಅವಳ ಮನಸ್ಸು

ನಾನಾ ದಿಕ್ಕಿನಲ್ಲಿ ಓಡಿತ್ತು...'' ಸಸ್ಪೆನ್ಸ್ ಏನಿರಬಹುದು ?'' ಚಿಂತಿಸಿ ಸೋತಳು.

☆ ☆ ☆

ಪಾರ್ಟಿಗೆ ಎಲ್ಲಾ ಸಿದ್ಧತೆಗಳೂ ಮುಗಿದಿದ್ದವು... ಮನೆಯ ಹೊರಗೆಲ್ಲಾ ದೀಪಾಲಂಕಾರ ಮಾಡಲಾಗಿತ್ತು. ಕೇಟರಿಂಗ್ ಸರ್ವಿಸ್‌ನವರಿಗೆ, ಡಿನ್ನರ್‌ಗೆ ಆರ್ಡರ್ ಕೊಟ್ಟು ಆಗಿತ್ತು. ಆಶ್ಚರ್ಯದ ಮಾತು ಎಂದರೆ, ಮೊದಲಿಗೆ ಬಂದವರು, ಸುಮತಿಯ ತಂದೆ ಹಾಗೂ ಕವಿತಾ. ಸುಮತಿ ಸಂತೋಷದಿಂದ ಅವರುಗಳನ್ನು ಎದುರು ಗೊಂಡು ಮನೆಯವರ ಯೋಗಕ್ಷೇಮಗಳನ್ನು ವಿಚಾರಿಸಿದಳು. ಅಷ್ಟರಲ್ಲಿ ಅಲ್ಲಿಗೆ ದಿನೇಶ ಬಂದ. ಅತ್ತ ಇತ್ತ, ಸುತ್ತ ಮುತ್ತ ನೋಡಿ, ಸುಮತಿಯನ್ನು ಕೇಳಿದ.

''ನಾನು, ನಿಮ್ಮ ತಂಗಿ ಕವಿತಳನ್ನು ಮೆಚ್ಚಿದ್ದೀನಿ. ಈಗ ಹೇಗೂ ನಿಮ್ಮ ತಂದೆ ಬಂದಿದಾರಲ್ಲ, ನಾನು ಅವರ ಹತ್ತಿರ ಮಾತನಾಡಬಹುದಾ ?'' ಅಂತ.

ಸುಮತಿ ತಂದೆಗೆ ದಿನೇಶನ ಪರಿಚಯ ಮಾಡಿಕೊಟ್ಟಳು. ಅಪ್ಪಾ... ಇವರು ನಿಮ್ಮ ಹತ್ತಿರ ಮಾತನಾಡಬೇಕಂತೆ ಅಂತ ಇತ್ತ ಹೇಳಿ, ಅತ್ತ ತಿರುಗಿದಳು. ಹರೀಶ ಒಳಗೆ ಬರುತ್ತಿದ್ದ. ಅವನ ಪಕ್ಕದಲ್ಲಿ ವಿಮಲ... ಸಂಕೇತ ಎಲ್ಲಿದ್ದನೋ ಅಲ್ಲಿಗೆ ವೇಗವಾಗಿ ಧಾವಿಸಿ, ಹರೀಶನ ಕೈ ಕುಲುಕಿದ. ಅವಳು ನೋಡುತ್ತಲೇ ಇದ್ದಳು. ಸಂಕೇತ ವಿಮಲಳ ಭುಜ ಹಿಡಿದು, ಲಘುವಾಗಿ ಅಲುಗಾಡಿಸಿ ಏನೋ ಹೇಳಿ ನಕ್ಕ. ಅವರಿಬ್ಬರೂ ನಕ್ಕಿದ್ದರು. ಸುಮತಿ ಗರಬಡಿದವಳಂತೆ ಹಾಗೇ ನಿಂತಿದ್ದಳು. ಸಂಕೇತ ಇತ್ತ ತಿರುಗಿ, ಸುಮತಿಯ ಕಡೆ ಕೈಮಾಡಿ ಏನೋ ಹೇಳಿದ ವಿಮಲಳ ಕೈ ಹಿಡಿದು ನಡೆಸಿಕೊಂಡು ಸುಮತಿಯ ಬಳಿಗೆ ಬಂದ. ಇವಳು ಮುಖ ತಿರುಗಿಸುವುದರಲ್ಲಿದ್ದಳು, ಅಷ್ಟರಲ್ಲಿ ವಿಮಲ ಮಾತನಾಡಿದಳು.

''ಹೇಗಿದೀರಿ ಅತ್ತಿಗೆ ? ನಾನು ಯಾರೂಂತ ಗೊತ್ತಾಗಲಿಲ್ವಾ ?'' ಅಷ್ಟರಲ್ಲಿ ಸುಮತಿ ಸ್ವಲ್ಪ ಸ್ಥಿಮಿತಕ್ಕೆ ಬಂದಿದ್ದಳು. ಅತ್ತಿಗೆ ಅಂತ ಕರೆದಿದ್ದು ಅರ್ಥವಾಗಿರಲಿಲ್ಲ.

''ನಾನು ಸುಮತಿ, ಹೇಮ ಅಲ್ಲ...'' ಎಂದಳು.

''ನನಗೆ ನೀವು ಅತ್ತಿಗೆಯ ತರಹವೇ...'' ಎಂದು ಹೇಳಿದಾಗ ಸುಮತಿಗೆ ತಬ್ಬಿಬ್ಬಾಗಿತ್ತು. ಹರೀಶ ಸಂಕೇತ ಅತ್ತ ನಡೆದರು.

''ನೀವು ತುಂಬಾ ಚೆನ್ನಾಗಿದೀರಿ... ಹರೀಶ ಯಾವಾಗಲೂ ನಿಮ್ಮನ್ನೇ ಹೊಗಳುತ್ತಿರುತ್ತಾರೆ. ಇದ್ದರೆ ಸುಮತಿಯ ಹಾಗಿರಬೇಕು ಅಂತ... ನಿಮ್ಮ ಸೌಂದರ್ಯದ ಗುಟ್ಟೇನು ? ನನಗೂ ಸ್ವಲ್ಪ ಹೇಳ್ತೀರಾ ?'' ಸುಮತಿ ನಕ್ಕಳು. ವಿಮಲ ಹೊಗಳಿದ್ದರಿಂದ ಸ್ವಲ್ಪ ಉಬ್ಬಿ ಹೋಗಿದ್ದಳು. ಆದರೂ ಸೌಜನ್ಯಕ್ಕೆ ಎಂಬಂತೆ ನುಡಿದಳು.

"ನೀವೂ ತುಂಬಾ ಲಕ್ಷಣವಾಗಿದೀರಿ ವಿಮಲ, ಹರೀಶ ನನ್ನನ್ನ ಹೊಗಳಿದರೆ ನಿಮಗೆ ಅಸೂಯೆಯಾಗುಲ್ವಾ ?"

"ಇಲ್ಲ, ನನಗೆ ಮೊದಲೂ ಹಾಗೆ ಎಂದೂ ಅನಿಸಿರಲಿಲ್ಲ, ಈಗ ನಾನು ನೋಡಬಲ್ಲೆ, ನನ್ನ ಮುಖವನ್ನು ಕನ್ನಡಿಯಲ್ಲಿ ಅನೇಕ ಬಾರಿ ನೋಡಿಕೊಂಡಿದೀನಿ. ಆದರೆ ಹರೀಶ ಹೇಳುವುದು ನಿಜ. ನಿಮ್ಮಷ್ಟು ಸುಂದರಿ ಯಾರೂ ಇಲ್ಲ, ನನ್ನ ಅತ್ತಿಗೆಯನ್ನು ನೋಡಿದೀನಿ. ಅವರಿಗಿಂತ ನೀವೇ ಚೆನ್ನಾಗಿದೀರಿ.

"ಹುಂ. ಅವಳೂ ಚೆನ್ನಾಗಿದಾಳೆ. ಆದರೆ ನಾವಿಬ್ಬರೂ ಒಂದೇ ತರಹ ಇಲ್ಲ, ಈಗ ಅವಳಿಗೆ ಹೆರಿಗೆ ಆಗಿದೆಯಲ್ಲ, ಅಂದ ಹಾಗೆ ಈಗ ಹೇಗಿದೆ ನಿಮ್ಮ ಮ್ಯಾರೀಡ್ ಲೈಫ್... ಅಥವಾ ಈಗಲೂ ಮೊದಲಿನಂತೆ ದೂರ ದೂರವೇ ಇದೀರೋ ?" ಸುಮತಿ ಓರೆಗಣ್ಣಿನಿಂದ ಅವಳನ್ನೇ ನೋಡಿದಳು.

"ಇಲ್ಲ, ನಾವಿಬ್ಬರೂ ಈಗ ಅನ್ಯೋನ್ಯೋವಾಗಿದೀವಿ.., ಹರೀಶ ನನ್ನನ್ನು ತುಂಬಾ ಪ್ರೀತಿಸುತ್ತಾರೆ."

"ಹೌದು ಅವನು ಒಳ್ಳೆಯವನು... ನಿಮ್ಮಂಥೋರನ್ನ ಪ್ರೀತಿಸದೇ ಇರ್ತಾನಾ ? ಅಂದ ಹಾಗೆ ಆಪರೇಷನ್ನು ಯಾವಾಗ ಆಯ್ತು ?"

"ಯಾಕೆ ನಿಮಗೆ ಗೊತ್ತಿಲ್ವಾ ? ಸಂಕೇತ ಹೇಳಲಿಲ್ವಾ ?"

"ಇಲ್ಲ, ಎಲ್ಲೋ ಮರೆತು ಬಿಟ್ಟಿದಾರೆ ಅಂತ ಕಾಣುತ್ತೆ."

"ಅವರು ಮರೆತರೂ, ನಾನು ಈ ಜನ್ಮದಲ್ಲಿ ಮರೆಯುವುದಂತೂ ಸಾಧ್ಯವಿಲ್ಲ, ಅವರು ನನ್ನ ಭಾಗದ ದೇವರು. ನನಗೆ ಸಹಾಯ ಮಾಡದೇ ಇದ್ದಿದ್ದರೆ, ನಾನು ಹರೀಶನ ಪ್ರೀತಿಯೂ ಇಲ್ಲದೇ ಒಂಟಿಯಾಗಿ ಅಂಧಕಾರದಲ್ಲಿ ಕಾಲ ಕಳೆಯಬೇಕಾಗಿತ್ತು. ನೀವು ತುಂಬಾ ಅದೃಷ್ಟವಂತರು... ನಿಮಗೆ ಸಂಕೇತ, ಪತಿಯ ರೂಪದಲ್ಲಿ ಸಿಕ್ಕಿದಾರೆ... ನಾನೂ ಭಾಗ್ಯಶಾಲಿ, ಸಂಕೇತ ನನಗೆ ಅಣ್ಣನ ರೂಪದಲ್ಲಿ ಸಿಕ್ಕಿದಾರೆ... ಹರೀಶನಂತೂ ಸದಾ ನಿಮ್ಮಿಬ್ಬರನ್ನು ಹೊಗಳ್ತಾನೇ ಇರ್ತಾನೆ..." ಸುಮತಿಗೆ ಅವಳ ಮುಂದಿನ ಮಾತುಗಳ ಮೇಲೆ ಗಮನವಿರಲಿಲ್ಲ, ಈ ವಿಷಯವನ್ನು ಸಂಕೇತ ನನಗೇಕೆ ಹೇಳಲಿಲ್ಲ ? ನನ್ನಿಂದ ಏಕೆ ಮುಚ್ಚಿಟ್ಟ ? ಅವಳ ಕಣ್ಣುಗಳು ಸಂಕೇತನನ್ನು ಅರಸಿದವು. ಅರಸುತ್ತ ಮುಂಬಾಗಿಲಿಗೆ ಬಂದಳು.

ಮನೆಯ ಮುಂದೆ ಒಂದು ಟ್ಯಾಕ್ಸಿ ನಿಂತಿತು. ಅದರಿಂದ ಇಳಿಸಲ್ಪಟ್ಟ ವ್ಯಕ್ತಿಯನ್ನೇ ಸುಮತಿ ನೋಡಿದಳು... ಸಂಕೇತನಿಗೆ ಹೇಳೋಣವೆಂದುಕೊಂಡು ಹಿಂದಕ್ಕೆ ಬಂದಳು. ಒಳಬಾಗಿಲಿಗೆ ಆ ವ್ಯಕ್ತಿ ಬರುತ್ತಿದ್ದಂತೆಯೇ, ಜಾನಕಿ ಎಲ್ಲಿದ್ದಳೋ 'ಜಗ್ಗೂ' ಎನ್ನುತ್ತಾ ಅವನಿದ್ದಲ್ಲಿಗೆ ಓಡಿದಳು. ಎಲ್ಲರೂ ಅತ್ತ ತಿರುಗಿದ್ದರು. ಜಾನಕಿ ತಾನು ಎಲ್ಲಿ ಇದೇನೆಂಬುದನ್ನು ಮರೆತು, "ಜಗ್ಗೂ... ಬಾ

ಸಧ್ಯ ಬಂದೆಯಾ ? ನೀನು ಹೇಗಿದೀಯೋ ಅಂತ ಚಿಂತಿಸಿ ಚಿಂತಿಸಿ ಸಾಕಾಯಿತು... ಬಾ... ಇಲ್ಲಿ ಬೇಡ ಒಳಗೆ ನಮ್ಮ ರೂಮಿಗೆ ಹೋಗೋಣ" ಎನ್ನುತ್ತಾ ಅವನನ್ನು ಆಹ್ವಾನಿತರ ಮಧ್ಯೆಯಿಂದ ಒಳಗಿನ ರೂಮಿಗೆ ಕರೆದುಕೊಂಡು ಹೋದಳು... ಸುಮತಿ ದಂಗಾಗಿ ನಿಂತಲ್ಲಿಯೇ ನಿಂತಿದ್ದಳು. ಉಳಿದವರು, ನಿಧಾನವಾಗಿ, ತಮ್ಮ ತಮ್ಮ ಮಾತುಕತೆಗಳಲ್ಲಿ ತೊಡಗಿದ್ದರು. ಅಷ್ಟರಲ್ಲಿ ಸಂಕೇತ ಬಂದು ಅವಳ ಪಕ್ಕಕ್ಕೆ ನಿಂತ ಬೆಚ್ಚಿದಳು. ನಡೆಯುತ್ತಿರುವ ವಿದ್ಯಾಮಾನಗಳಿಂದ ಗೊಂದಲಕ್ಕೊಳಗಾಗಿದ್ದಳು.

"ಏನಾಯ್ತು ? ಯಾಕೆ ಚಳೀನಾ ?... " ಅವಳ ಭುಜವನ್ನು ಬಳಸಿದ.

"ಇಲ್ಲ, ಏನೂ ಇಲ್ಲ... ಜಗ್ಗು ಬಂದಿದಾನೆ ನೋಡಿದ್ರಾ ? ಅವಳನ್ನು ಸರಿಸಿದ.

"ಇಲ್ಲ ನಾನು ನೋಡಲಿಲ್ಲ" ಎಂದ ಎತ್ತಲೋ ತಿರುಗಿ "ಬಾ... ನನ್ನ ಕಲೀಗ್ಸ್‌ಗೆ ನಿನ್ನ ಪರಿಚಯ ಮಾಡಿಸಿಕೊಡ್ತೀನಿ" ಎಂದು ಹೇಳಿ ಅವಳನ್ನು ಅವರುಗಳ ಮಧ್ಯೆಗೆ ಕರೆದುಕೊಂಡು ಬಂದ. ಕವಿತಳ ಕೈಯಲ್ಲಿದ್ದ ಪುನೀತನನ್ನು ಎತ್ತಿಕೊಂಡ. ಇವಳು ನನ್ನ ಪತ್ನಿ ಸುಮತಿ, ಇವನು ನನ್ನ ಮಗ ಪುನೀತ್" ಎಂದು ಪ್ರತಿಯೊಬ್ಬರಿಗೂ ಉತ್ಸಾಹದಿಂದ ಪರಿಚಯ ಮಾಡಿಕೊಟ್ಟ. ಸುಮತಿಗೆ ಅವನ ಉತ್ಸಾಹದಲ್ಲಿ ಭಾಗಿಯಾಗುವ ಹುಮ್ಮಸ್ಸೇ ಇರಲಿಲ್ಲ. ಹಲವು ದಿಕ್ಕುಗಳಲ್ಲಿ ಓಡಾಡುತ್ತಿದ್ದ ಮನಸ್ಸನ್ನು ಬಲವಂತವಾಗಿ ಎಳೆದು, ಎಲ್ಲರನ್ನು ಮಾತನಾಡಿಸುತ್ತಿದ್ದಳು.

"ಡಿನ್ನರ್ ಜೊತೆಗೆ ಡ್ರಿಂಕ್ಸ್ ಕೂಡಾ ಇದೆ ಯಾರೋ ಕೇಳಿದಾಗ, ಸುಮತಿ ಅತ್ತ ತಿರುಗಿದಳು. ಸಂಕೇತನ ಸ್ನೇಹಿತ ಯಾರೋ ನುಡಿದಿದ್ದ. ಸುಮತಿ ಸಂಕೇತನನ್ನು ಪಿಸುದನಿಯಲ್ಲಿ ಕೇಳಿದಳು. "ಡ್ರಿಂಕ್ಸ್‌ಗೂ ಅರೇಂಜ್ ಮಾಡಿದೀರಾ ?"

"ಹೂಂ... ನನ್ನ ಕಲೀಗ್ಸ್ ಎಷ್ಟೋ ಜನ ತಗೋತಾರೆ..."

"ಇದು ಮನೆ, ನಿಮ್ಮ ಮಮ್ಮಿ ಏನಂದುಕೊಳ್ತಾರೆ ? ನನ್ನ ತಂದೆ ಬಂದಿದಾರೆ ಏನಂದುಕೊಳ್ತಾರೆ ? ಯಾಕೆ ಹೀಗೆ ಮಾಡಿದ್ರಿ ?"

"ಅದರಲ್ಲೇನು ತಪ್ಪು ? ಪಾರ್ಟಿ ಅಂದ ಮೇಲೆ, ಡ್ರಿಂಕ್ಸ್ ಕಾಮನ್... ಅಲ್ಲದೇ ಅದಿಲ್ಲದಿದ್ದರೆ ಏನು ಮಜಾ ?"

"ಅದೆಲ್ಲಾ ನನಗೆ ಗೊತ್ತಿಲ್ಲ. ಡ್ರಿಂಕ್ಸ್ ಪಾರ್ಟಿ ಇದೆ ಅಂತ ಗೊತ್ತಿದ್ದರೆ, ನಾನು ಕೆಳಗಿಳಿದು ಬರುತ್ತಲೇ ಇರಲಿಲ್ಲ... ನಾನು ಮಗುವನ್ನು ಕರೆದುಕೊಂಡು ಊರಿಗೆ ಹೊರಟು ಹೋಗ್ತೀನಿ ಅಷ್ಟೆ..." ಅವರಿಬ್ಬರೂ ಏನೋ ಚರ್ಚೆ ನಡೆಸುತ್ತಿರುವರೆಂದು ತಿಳಿದ ಹರೀಶ ಅಲ್ಲಿಗೆ ಬಂದ. ಅವರಿಬ್ಬರ ವಾದದ ಕಾರಣವೂ ತಿಳಿಯಿತು.

"ಇಲ್ಲ ಸುಮತೀ... ಇವನು ತಮಾಷೆ ಮಾಡ್ತಿದಾನೆ. ಪ್ಯೂರ್ ವೆಜಿಟೇರಿಯನ್ ಡಿನ್ನರ್ ಪಾರ್ಟಿ ಇದು... ನಿಮ್ಮನ್ನು ಕೀಟಲೆ ಮಾಡಿದರೆ, ಇವನಿಗೆ ಏನೋ ಖುಷಿ"

''ನಾನು ನಿಮ್ಮಿಬ್ಬರನ್ನು ನಂಬುಲ್ಲ. ಇಂತಹ ಅವಕಾಶ ಸಿಕ್ಕಾಗ ಡ್ರಿಂಕ್ಸ್ ತಗಳ್ಳೋದನ್ನ ಬಿಡ್ತೀರಾ ? ವೆಜಿಟೇರಿಯನ್ ಪಾರ್ಟೀಲಿ ಡ್ರಿಂಕ್ಸ್ ಇರಬಹುದಲ್ಲ.''

''ಡ್ರಿಂಕ್ಸ್ ತಗೋಬಾರದು, ಸ್ಮೋಕ್ ಮಾಡಬಾರದು... ಅಂತ ನೀವುಗಳು ಹೆಂಗಸರು ಗಂಡಸರಿಗೆ ಆರ್ಡರ್ ಮಾಡ್ತೀರಿ... ಯಾಕೆ ಅಂತ ? ಅದರ ಮಜ ನಿಮಗೇನು ಗೊತ್ತು ?'' ಹರೀಶ ನಗೆಯಾಡಿದ.

''ಹಾಗಾದರೆ ಇದರ ಮಜ ಏನೂಂತ, ಇವತ್ತು ನಾವೂ ನೋಡಿಯೇ ಬಿಡ್ತೀನಿ... ವಿಮಲ ಎಲ್ಲಿ? ಕರೆಯಿರಿ.'' ಹರೀಶ ಬೆದರಿದ.

''ವಿಮಲ ಹಳ್ಳಿ ಹುಡುಗಿ... ಅವಳಿಗೆ ಈ ವಿಷಯವೆಲ್ಲ ತಿಳಿಯದು.''

''ಕದ್ದು ಮುಚ್ಚಿ ಏಕೆ ಮಾಡಬೇಕೂ ಅಂತ. ಇವತ್ತು ನಾವು, ಹೆಂಗಸರೂ ಕಂಪೆನಿ ಕೊಡ್ತೀವಿ... ನೋಡೋಣ ಅದೇನೇನು ಆಗುತ್ತೋ...?'' ಇವಳೇಕೆ ಹೀಗೆ ಮಾತನಾಡು ತ್ತಿದಾಳೆಂದು ಹರೀಶನಿಗೆ ತಿಳಿಯಲಿಲ್ಲ. ಸಂಕೇತನಿಗೆ ಏನೋ ಅನುಮಾನ ಬಂದಿತ್ತು.

''ಪ್ಲೀಸ್ ಯಾಕೆ ಹೀಗೆಲ್ಲಾ ಮಾತನಾಡ್ತಿದೀರಿ ? ನಿಮ್ಮ ಬಗ್ಗೆ ನನಗೆ ಒಳ್ಳೆಯ ಅಭಿಪ್ರಾಯವಿದೆ. ಗೌರವವಿದೆ... ವಿಮಲಂಗೂ ಹೇಳಿ ಬಿಟ್ಟಿದೀನಿ... ನಿಮ್ಮಿಂದ ಅವಳು ಕಲಿಯುವುದು ಬೇಕಾದಷ್ಟಿದೆ.'' ಹರೀಶ ನುಡಿದ. ಸುಮತಿ ಗಂಭೀರವಾದಳು.

''ಇಲ್ಲ, ನಿಮಗೆ ಏನೂ ಗೊತ್ತಿಲ್ಲ. ವಿಮಲ ನನ್ನಿಂದ ಕಲಿಯ ಬೇಕಾದ್ದು ಏನೂ ಇಲ್ಲ'' ಎಂದು ಹೇಳಬೇಕೆಂದರೂ ಹೇಳಲಾಗಿರಲಿಲ್ಲ. ಕವಿತಾ ಬಂದು, ಮಗುವನ್ನು ಕೈಗೆ ಇತ್ತಾಗ, ಅಳುತ್ತಿದ್ದ ಮಗುವಿಗೆ ಹಾಲುಣಿಸಲೆಂದು, ತನ್ನ ರೂಮಿಗೆ ಹೊರಟು ಹೋದಳು.

ಎಷ್ಟು ಹೊತ್ತಾದರೂ ಅವಳು ಕೆಳಗಿಳಿದು ಬರದೇ ಇದ್ದಾಗ, ಸಂಕೇತನೇ ಅವಳನ್ನು ಕರೆಯಲೆಂದು ಬಂದ. ಬಾಲ್ಕನಿಯಲ್ಲಿ ನಿಂತು, ಆಕಾಶದ ನಕ್ಷತ್ರಗಳನ್ನು ಎಣಿಸುತ್ತಾ ನಿಂತಿದ್ದಳು. ಹಿಂದಿನಿಂದ ಕಳ್ಳ ಹೆಜ್ಜೆಯನ್ನಿಡುತ್ತಾ ಬಂದು, ಅವಳ ಹಿಂದೆ ನಿಂತು 'ಬೆ...' ಎಂದು ಹೆದರಿಸಿದ. ಅವಳು ಬೆಚ್ಚಿ ಬಿದ್ದು ಹತ್ತಿರ ನಿಂತಿದ್ದ ಅವನನ್ನು ತಬ್ಬಿಕೊಂಡು ಬಿಟ್ಟಳು... ಅವನೂ ತಬ್ಬಿಕೊಂಡ

''ಸಾರಿ... ಹೆದರಿ ಬಿಟ್ಯಾ ?'' ನಗುತ್ತಾ ಕೇಳಿದ.

''ಮತ್ತಿನ್ನೇನು ? ನನ್ನ ಎದೆ ಹೇಗೆ ಹೊಡೆದುಕೊಳ್ಳುತ್ತಿದೆ. ಗೊತ್ತಾ ?''

''ಹೇಗೆ ಹೊಡೆದುಕೊಳ್ಳುತ್ತಿದೆ'' ಎಂದು ಕೇಳುತ್ತಾ, ಅವಳ ಎದೆಯ ಮೇಲೆ ಕಿವಿಯನ್ನಿರಿಸಿದ...''

''ಸಾಕು... ದೂರ... ಸಲುಗೆ ಹೆಚ್ಚಾಯಿತು'' ಎಂದು ತಳ್ಳಿದಳು.

''ಪ್ಲೀಸ್ ತಳ್ಳಬೇಡ ಸುಮತಿ... ಇನ್ನು ನನ್ನಿಂದ ದೂರ ಇರುಕ್ಕೆ ಆಗುಲ್ಲ. ನೀನು ನನಗೆ

ಬೇಕು" ಎಂದ ಅವಳನ್ನು ಹಿಡಿದುಕೊಳ್ಳುತ್ತಾ...

"ಯಾಕೆ ? ವಿಮಲಳ ಸಹವಾಸ ಬೇಸರವಾಯಿತೆ ?" ಅವಳ ವ್ಯಂಗ್ಯ ಅವನಿಗೆ ತಕ್ಷಣಕ್ಕೆ ಅರ್ಥವಾಗಲಿಲ್ಲ" ಏನಂದೆ ?" ಒರಟಾಗಿ ಅವಳನ್ನು ತಳ್ಳಿದ. ಕೋಪದಿಂದ ನೋಡಿದ.

"ಹಾಗೇ ಇದ್ದುದನ್ನು ಇದ್ದ ಹಾಗೆ ಹೇಳಿದರೆ... ಕೋಪ ಬರುತ್ತೆ"

"ಏನು ಇರೋದು ? ನೀನು ವಿದ್ಯಾವಂತೆ, ತಿಳುವಳಿಕೆ ಉಳ್ಳವಳು... ಹೀಗೆ ಅನುಮಾನ ಪಡ್ತೀಯ ಅಂತ ನಾನು ಅಂದುಕೊಂಡಿರಲಿಲ್ಲ." ತಿರಸ್ಕಾರದಿಂದ ನುಡಿದ.

"ಯಾಕೆ ಪಡಬಾರದು ?" ಸವಾಲೆಸೆದಳು.

"ಓ... ಕೆ... ನಾವು ಆಮೇಲೆ ನಿಧಾನವಾಗಿ ಮಾತನಾಡೋಣ... ಈಗ ಗೆಸ್ಟ್ ಗಳಿದಾರೆ... ಅವರ ಎದುರಿಗೆ ಹೀಗೆ ಸೀನ್ ಮಾಡಬೇಡ... ನಡೀ.. ಬರದಿದ್ದರೆ ಪುನೀತನ ಮೇಲೆ ಆಣೆ..."

"ಮಗುವಿನ ಮೇಲೆ ಯಾಕೆ ಆಣೆ ಇಡಬೇಕು... ಅದು ನನ್ನ ಮಗು"

"ಅದು ನನ್ನ ಮಗು ಕೂಡಾ... ನನಗೆ ಅವನ ಮೇಲೆ ಎಲ್ಲಾ ಹಕ್ಕೂ ಇದೆ. ನಾನು ನನ್ನ ಮಗುವಿನ ತಲೆಯ ಮೇಲೆ ಕೈ ಇಟ್ಟು ಆಣೆ ಮಾಡಿ ಹೇಳ್ತೀನಿ. ನೀನು ತಿಳಿದಿರುವಂತೆ, ನನಗೆ ಬೇರೆ ಯಾವ ಹೆಂಗಸಿನ ಸ್ನೇಹವೂ ಇಲ್ಲ... ನೀನೇ ಮೊದಲನೆಯವಳು... ನೀನೇ ಕಡೆಯವಳು..." ಸಂಕೇತ ಉದ್ರೇಕಗೊಂಡು ನುಡಿಯುತ್ತಾ ತೊಟ್ಟಿಲಲ್ಲಿ ಮಲಗಿದ್ದ ಮಗುವಿನ ತಲೆಯ ಮೇಲೆ ಕೈಯನ್ನಿಟ್ಟ. ಸುಮತಿ ಹೆದರಿ, ಅವನ ಕೈ ಕಸಿಯಲೆಂದು ಬಂದವಳನ್ನು ಅವನು ತಡೆದ.

"ನಾನು ನಿನ್ನಿಂದ ದೂರ ಇದ್ದ ಮಾತ್ರಕ್ಕೆ ಹೀಗೆ ನೀನು ಏನೇನೋ ಆರೋಪವನ್ನು ಹೊರಿಸಬೇಡ... ನಾನು ನಿನ್ನನ್ನು ಮದುವೆಯಾದ ಮೇಲೆ, ನಿನ್ನನ್ನು ಬಲವಂತವಾಗಿ ನನ್ನ ವಶಮಾಡಿಕೊಳ್ಳಬಹುದಾಗಿತ್ತು. ಆದರೆ, ನಾನು ನಮ್ಮ ಪ್ರೀತಿಗೆ ಗೌರವಕೊಟ್ಟೆ. ನಿನಗೆ ನೋವಾಗಬಾರದೆಂದು, ನಿನ್ನ ಅನಿಸಿಕೆಗೆ ಬೆಲೆ ಕೊಟ್ಟೆ. ನನ್ನ ವಿಮಲಳ ಸ್ನೇಹದ ಮೇಲೆ ನಿನಗೆ ಯಾಕೆ ಅನುಮಾನ ಬಂತೋ ತಿಳಿಯದು. ವಿಮಲ ನನ್ನ ಸ್ವಂತ ತಂಗಿ ಅಲ್ಲದಿರಬಹುದು ಆದರೆ ಅವಳಿಗೆ ತಂಗಿಯ ಸ್ಥಾನವನ್ನು ಕೊಟ್ಟಿದೀನಿ. ಯಾರ ಮೇಲೆ ಯಾರು ಬೇಕಾದರೂ ಅನುಮಾನ ಪಡಬಹುದು... ಆದರೆ ಕೇಳು, ಒಂದು ದಿನವೂ ನಿನ್ನನ್ನು ಸಂಶಯದ ಕಣ್ಣುಗಳಿಂದ ನಾನು ನೋಡಲಿಲ್ಲ. ಮನೆಯಲ್ಲಿ ಜಗ್ಗು ಇದ್ದ. ನಾನೇ ಹರೀಶನಿಗೆ ಮನೆಗೆ ಬಂದು ನಿನ್ನ ಯೋಗಕ್ಷೇಮವನ್ನು ನೋಡಿಕೊಳ್ಳುವಂತೆ ಹೇಳಿದ್ದೆ... ಎಂದಾದರೂ, ನಾನು ಚೀಪಾಗಿ ಮಾತನಾಡಿದೀನಾ ?... ನನ್ನ ಪ್ರೀತಿಗೆ ನೀನು ಅವಮಾನ ಮಾಡಿಬಿಟ್ಟೆ..." ಅವಳಿಗೆ ಬೆನ್ನು ಮಾಡಿ ನಿಂತವನನ್ನು ಸುಮತಿ ತನ್ನ ಕಡೆಗೆ ತಿರುಗಿಸಿಕೊಂಡಳು. ಅವನಿಗೆ ನೋವಾಗಿದೆಯೆಂದು ಅರಿತಳು.

''ಸಾರಿ. ಸಂಕೇತ್...'' ಎಂದಷ್ಟೇ ಹೇಳಿದಳು. ಅವನು ಅವಳ ಕಡೆ ಮತ್ತೆ ನೋಡದೇ ಕೆಳಗಿಳಿದು ಬಂದ. ಎಷ್ಟೋ ಸಮಯದ ನಂತರ ಸುಮತಿಯೂ ಕೆಳಗೆ ಬಂದಳು. ಆಹ್ವಾನಿತರೆಲ್ಲಾ ಗುಂಪು ಗುಂಪಾಗಿ ಅಲ್ಲಲ್ಲೇ ನಿಂತು, ಕುಳಿತು, ತಮಗೆ ಬೇಕಾದುದನ್ನು ಹಾಕಿಸಿಕೊಂಡು ತಿನ್ನುತ್ತಿದ್ದರು. ಹರೀಶ ಪಕ್ಕದಲ್ಲಿ ಬಂದು ತಮಾಷೆ ಮಾಡಿದ.

''ಏನು ? ಹೋಸ್ಟ್ಸ್ ಇಬ್ಬರೂ, ಬ್ರೇಕ್ ತಗೊಂಡು ರೆಸ್ಟ್ ತಗೊಳ್ಳುತ್ತಿದ್ರಾ ?'' ಸಂಕೇತ ಉತ್ತರ ಕೊಡಲಿಲ್ಲ. 'ಷಟಪ್' ಎಂದು ಮನದಲ್ಲೇ ಹೇಳಿಕೊಂಡಿದ್ದ... ಸುಮತಿಗೂ ಮನಸ್ಸು ಚಿಕ್ಕದಾಗಿತ್ತು..... ತನ್ನಿಂದ ಸಂಕೇತನ ಮೂಡ್ ಹಾಳಾಯಿತೆಂದು ಅರಿವಾಗಿತ್ತು. ನಿಂತಲ್ಲಿಂದಲೇ ಸುತ್ತಲೂ ನೋಡಿದಳು. ದಿನೇಶ ಹಾಗೂ ಕವಿತಾ ಇಬ್ಬರೂ ಎಷ್ಟೋ ವರ್ಷಗಳ ಸ್ನೇಹಿತರಂತೆ ನಗುನಗುತ್ತಾ ಮಾತನಾಡುತ್ತಾ ನಿಂತಿದ್ದರು. ಹರೀಶ ವಿಮಲಳಿಗೆ ಆಗಾಗ್ಗೆ ಚಮಚದಲ್ಲಿ ತಿನ್ನಿಸುತ್ತಿದ್ದ. ಅವಳಿಗೂ ತಿನ್ನಿಸುವಂತೆ ಹೇಳುತ್ತಿದ್ದ. ಇದ್ದಕ್ಕಿದ್ದಂತೆ ಅವಳಿಗೆ ಆಂಟಿಯ ನೆನಪಾಗಿತ್ತು. ಜಾನಕಿಯ ರೂಮಿನೆಡೆಗೆ ಬಂದಳು. ಒಳಗೆ ಹೋಗುವುದು ಬೇಡವೆಂದೆನಿಸಿತ್ತು.

''ಅಯ್ಯೋ, ಹೇಗಾಗಿ ಬಿಟ್ಟಿದೀಯೋ ಮುಂಡೇದೆ, ನಿನಗೇ ಅಂತ ತಂದಿದೀನಿ. ತಿನ್ನು... ನೋಡು ಎಷ್ಟೊಂದು ತರಹದ ತಿಂಡಿಗಳಿವೆ... ಈ ಸಾರಿ, ನಾನೂ ನಿನ್ನ ಜೊತೆಗೆ ಬಂದು ಬಿಡ್ತೀನಿ... ನಿನ್ನ ಜೊತೇನೇ ಇರ್ತೀನಿ'' ಸುಮತಿಗೆ ಅಲ್ಲಿ ನಿಲ್ಲಲಾಗಲಿಲ್ಲ, ಇತ್ತ ಬಂದು ಬಿಟ್ಟಳು. ಅವಳು ಕುಳಿತಿದ್ದ ಕಡೆಗೆ, ಅವಳ ತಂದೆ ಬಂದರು.

''ದಿನೇಶ ಕವಿತನ್ನ ಮದುವೆಯಾಗ್ತೀನಿ ಅಂತ ಹೇಳಿದ... ನಿನಗೇನನ್ನಿಸುತ್ತೆ. ದಿನೇಶ ಸಂಕೇತನ ಸ್ನೇಹಿತ... ನಿನಗೂ ಪರಿಚಯವಿದೆ...''

''ನಾನು ಏನು ಹೇಳಲಿ ? ಕವಿತಾ ಏನಂತಾಳೆ ?''

''ಕವಿತ ಒಪ್ಪಿಕೊಂಡಿದಾಳೆ. ಆದರೆ ನಿನ್ನನ್ನು ಒಂದು ಮಾತು ಕೇಳೋಣ ಅಂತ ಅಂದ್ಕೊಂಡೆ. ಸಂಕೇತ ಎಲ್ಲಿ ?''

''ಅಲ್ಲೇ ಎಲ್ಲೋ ಇರಬೇಕು...''

''ನೀನ್ಯಾಕೆ ಒಬ್ಬಳೇ ಕೂತಿದೀಯ ? ನೀನು ತುಂಬಾ ಪುಣ್ಯವಂತೆ ಸುಮತಿ... ಸಂಕೇತ ಎಲ್ಲಾ ರೀತಿಯಿಂದಲೂ ಅನುರೂಪನಾದವನು, ವಿದೇಶದಲ್ಲಿರುವವನು, ಹೇಗೋ ಏನೋ ಎಂಬ ಅನುಮಾನವಿತ್ತು ನಮಗೆ... ಆದರೆ ದೇವರಂತೆ ನಮ್ಮ ಮಾನವನ್ನು ಕಾಪಾಡಿದ. ಇಲ್ಲದಿದ್ದರೆ, ಈ ದಿನ ನೀನು ಹೀಗೆ ಗೌರವವಾಗಿ ಬಾಳಲು ಸಾಧ್ಯವಾಗುತ್ತಿತ್ತಾ ? ನಿನ್ನ ಗಂಡನ ಮೇಲೆ ನೀನು ಹೆಮ್ಮೆಪಡಬೇಕು. ಹರೀಶ ಅಂತೂ ಸಂಕೇತನನ್ನು ಬಾಯ್ತುಂಬಾ ಹೊಗಳ್ತಾನೆ. ಅವನ ಹೆಂಡತಿಯ ಕಣ್ಣಿನ ಆಪರೇಷನ್ ಆದಮೇಲೆ, ಇಬ್ಬರೂ ಭದ್ರಾವತಿಗೆ ಬಂದಿದ್ದರು. ಸಂಕೇತನ ಸಹಾಯವಿಲ್ಲದೇ ಇದ್ದಿದ್ರೆ, ನಾನು ಕುರುಡಿಯೇ ಆಗಿ, ಬಾಳನ್ನು ಸವೆಸಬೇಕಾಗಿತ್ತು. ಅಂತ ಹೇಳಿಕೊಂಡು ಅತ್ತಳಂತೆ, ಹೇಮ ಹೇಳಿದಳು''ಸುಮತಿ ಸುಮ್ಮನೇ ಕುಳಿತಿದ್ದಳು. ಸಂಕೇತ

ತನ್ನೊಡನೆ ಈ ವಿಷಯಗಳನ್ನು ಮುಚ್ಚಿಟ್ಟಿದ್ದಾನೆ... ಯಾಕೆ ? ತನಗೆ ಹೇಳಲು ಇಷ್ಟವಿರಲಿಲ್ಲವೆ ? ಅಥವಾ ಇನ್ನೇನು ಕಾರಣವಿರಬಹುದು ? ತನಗೆ ತಿಳಿಸಿದ್ದರೇ...

''ಯಾಕಮ್ಮ ಸುಮತಿ ಮಂಕಾಗಿದೀಯ. ಹುಶಾರಾಗಿದೀಯ ತಾನೇ... ಅಂದ್ಹಾಗೇ ಇನ್ನೊಂದು ಮಾತು, ಜಗ್ಗೂನ ನೋಡಿದೆ... ಇಲ್ಲೇ ಇರುತ್ತಾನೋ... ಮತ್ತೆ ಕರೆದು ಕೊಂಡು ಹೋಗಿ ಅಲ್ಲಿಗೇ ಬಿಡ್ತಾರೋ ...?'' ಅನುಮಾನದಿಂದ ಪ್ರಶ್ನಿಸಿದರು.

''ಏನೋ ನಂಗೊತ್ತಿಲ್ಲ...'' ಅವಳಿಗೆ ಉತ್ತರಿಸಲು ಮನಸ್ಸಿರಲಿಲ್ಲ.

''ಜಗ್ಗೂನ ಕೆಟ್ಟೋನು ಅಂತ ನಾನು ಹೇಳುಲ್ಲ... ತಿಳುವಳಿಕೆಯೇ ಇಲ್ಲದವರಿಗೆ ಯಾವ ಭಯವೂ ಇರುವುದಿಲ್ಲ... ನೀನೂ ಹುಶಾರಾಗಿರಬೇಕು... ನಿನ್ನ ಮಗುವನ್ನು ಹುಶಾರಾಗಿ ನೋಡ್ಕೋ... ಕಾಲ ಒಂದೇ ತರಹ ಇರುಲ್ಲ...'' ಎಚ್ಚರಿಕೆ ನೀಡಿದರು.

''ಯಾಕಪ್ಪಾ ಏನೇನೋ ಹೇಳ್ತಿದೀರಿ''

''ನಿನ್ನ ಸಂಕೇತನ ಮಧ್ಯೆ ಅಂತರ ಇದೆ ಅಂತ ನನಗೆ ಅನ್ನಿಸ್ತಿದೆ. ಹೀಗೇ ಎಷ್ಟು ವರ್ಷ ಬಾಳುವುದಕ್ಕೆ ಸಾಧ್ಯ ? ನೀವಿಬ್ಬರೂ ಸುಖವಾಗಿರಬೇಕು'' ಸುಮತಿ ಮಾತನಾಡಲಿಲ್ಲ.

''ನಮ್ಮ ಸಂಸಾರ ದೊಡ್ಡದಾಗಿತ್ತು. ಎಲ್ಲಾ ಮಕ್ಕಳಲ್ಲಿ ನನಗೆ ನೀನೇ ಹೆಚ್ಚು ಪ್ರಿಯಳಾಗಿದ್ದವಳು. ಆದರೆ ಈಗ ನೀನು ಮಂಕಾಗಿರುವುದನ್ನು ನೋಡಿದರೆ, ತಲ್ಲಣವಾಗುತ್ತದೆ. ಸಂಕೇತ ನಿನಗೆ ಅನ್ಯಾಯವನ್ನು ಮಾಡಲಿಲ್ಲ, ಹಾಗೇ ನೀನೂ ಸಂಕೇತನನ್ನು ಖುಷಿಯಾಗಿಟ್ಟುಕೊಳ್ಳಬೇಕು. ಅದು ನಿನ್ನ ಧರ್ಮ.''

''ಅಪ್ಪಾ... ನಾನೂ ಭದ್ರಾವತಿಗೆ ಬರ್ತೀನಿ...''

''ಬರೂವಂತೆ. ನಾನು ಸಂಕೇತನಿಗೆ ಹೇಳ್ತೀನಿ. ನಿನ್ನ ಅಮ್ಮನೂ ನಿನ್ನನ್ನು ಕರೆದುಕೊಂಡು ಬರುವಂತೆ ಹೇಳಿದಾಳೆ... ಪುನೀತ ಮಲಗಿದಾನಾ ?''

''ಹೂಂ. ಆಗಲೇ ಮಲಗಿದ್ದ. ಎದ್ದು ಅಳ್ತಿದಾನೋ ಏನೋ ನಾನು ಹೋಗಿ ನೋಡ್ತೀನಿ'' ಎಂದು ಮತ್ತೆ ಮಹಡಿ ಹತ್ತಿದಳು. ಕೆಲ ವೇ ನಿಮಿಷಗಳಲ್ಲಿ ಮಗುವನ್ನು ಎತ್ತಿಕೊಂಡು ಬಂದಳು.

ಪಾರ್ಟಿ ಮುಗಿದಿತ್ತು. ಎಲ್ಲರೂ ಹೊರಡುವ ತರಾತುರಿಯಲ್ಲಿದ್ದರು. ಕಡೆಯಲ್ಲಿ ಹರೀಶ, ದಿನೇಶ ಹಾಗೂ ಇನ್ನೊಂದಿಬ್ಬರು ಸ್ನೇಹಿತರು ಮಾತ್ರ ಉಳಿದರು. ಸಂಕೇತ, ಸುಮತಿಯ ಕೈಗೆ ಎರಡು, ಸೀರೆಯ ಪ್ಯಾಕ್‌ಗಳನ್ನು ಕೊಟ್ಟ, ಇಲ್ಲಿ ಎರಡು ಸೀರೆಗಳಿವೆ, ಒಂದನ್ನು ನಿನ್ನ ತಂಗಿಗೆ ಕೊಡು, ಈ ದಿನ ಅವಳಿಗೆ ಶುಭದಿನ. ದಿನೇಶನೊಡನೆ ಅವಳ ಮದುವೆ ಗೊತ್ತಾಗಲಿದೆ. ಇನ್ನೊಂದನ್ನು ನನ್ನ ತಂಗಿಗೆ ಕೊಡು... ವಿಮಲ ಮದುವೆಯಾದ ಮೇಲೆ ಮೊದಲ ಬಾರಿಗೆ ನಮ್ಮ ಮನೆಗೆ ಬಂದಿದಾಳೆ. ಅವಳಿಗೆ ಉಡುಗೊರೆ ಕೊಡಬೇಕು.''

ಸುಮತಿ ಹೆಚ್ಚು ಮಾತನಾಡದೇ, ಸಂಕೇತ ಹೇಳಿದಂತೆಯೇ ಮಾಡಿದಳು. ಕವಿತಾ, ಹಾಗೂ ವಿಮಲ ಇಬ್ಬರೂ ಸಂಕೇತನ ಕಾಲಿಗೆ ನಮಸ್ಕರಿಸಿದರು.ಸಂಕೇತ ಸಂಕೋಚಗೊಂಡ. ನನಗೆ ಇದೆಲ್ಲ ಮುಜುಗರವಾಗುತ್ತೆ... ಸುಮತಿಗೆ ನಮಸ್ಕಾರ ಮಾಡಿ ಎಂದ. ಸುಮತಿಯೂ ನಿರಾಕರಿಸಿದಳು.

''ಅಕ್ಕ ತಂಗಿಯರು ಸ್ನೇಹಿತೆಯರಂತೆ ಇರಬೇಕು, ಅತ್ತಿಗೆ ನಾದಿನಿಯರು ಸ್ನೇಹಿತರಂತೆ ಇರಬೇಕು...'' ಎಂದು ಹೇಳಿ ಇಬ್ಬರನ್ನು ತಬ್ಬಿಕೊಂಡಳು.

''ಇಲ್ಲಿ ನಾವುಗಳು ಸಂತೋಷದಿಂದ ನಗುನಗುತ್ತಾ ಇದೀನಿ. ಆಂಟಿ ಒಬ್ಬರೇ ಒಳಗಿದಾರೆ... ಹೋಗಿ ಕರೆದುಕೊಂಡು ಬಾ...'' ಹರೀಶ ಸಂಕೇತನಿಗೆ ಆರ್ಡರ್ ಮಾಡಿದ.

''ಮಮ್ಮೀ... ಮಮ್ಮೀ...'' ಸಂಕೇತ ಹೊರಬಾಗಿಲಲ್ಲಿ ನಿಂತು ಕರೆದ.

ಜಾನಕಿ ಹೊರಬಂದಳು. ಬರುತ್ತಲೇ ರೂಮಿನ ಬಾಗಿಲನ್ನು ಹಾಕಿಕೊಂಡಳು. ಅವಳು ಅತ್ತು ಅತ್ತು ಕಣ್ಣುಗಳನ್ನು ಊದಿಸಿಕೊಂಡಿದ್ದಳು.

''ಅವನು ಏನು ಮಾಡ್ತಿದಾನೆ ?'' ಬಹಳ ಕಷ್ಟದಿಂದ ಕೇಳಿದ. ಅವನ ಬಗ್ಗೆ ಮಾತನಾಡದೇ ವರ್ಷಗಳು ಕಳೆದಿದ್ದವು. ತಾಯಿಯ ಕಡೆ ನೋಡುವುದು ಕಷ್ಟವೆನಿಸಿತ್ತು.

''ಇವತ್ತೊಂದುರಾತ್ರಿ ಅವನು ಇಲ್ಲೇ ಇರಲಿ. ನಾಳೆ ಬೆಳಗಾಗುತ್ತಿದ್ದಂತೆಯೇ ನಾನೇ ಅವನನ್ನು ಕರೆದುಕೊಂಡು ಹೋಗಿ ಬಿಟ್ಟು ಬರ್ತೀನಿ'' ಜಾನಕಿ ನುಡಿದಳು.

''ಅವರುಗಳೆಲ್ಲಾ ಹೊರಡ್ತಾರಂತೆ. ನಿನಗೆ ಹೇಳಬೇಕೂಂತ ಕಾಯ್ತಾ ಇದಾರೆ.'' ಜಾನಕಿ ಅವನ ಹಿಂದೆ ಬಂದಳು. ಅವಳಿಗೆ ಯಾರ ಮಾತೂ ಬೇಕಿರಲಿಲ್ಲ. ಆದರೂ ವಿಧಿ ಇಲ್ಲದೇ 'ಬರ್ತೀನಿ' ಎಂದು ಹೇಳಿದವರಿಗೆ, ಕೈ ಮುಗಿದು ನಮಸ್ಕಾರ ಹೇಳಿದವರಿಗೆ ತನ್ನ ಸಮ್ಮತಿಯನ್ನು ತಲೆಯಾಡಿಸುವ ಮೂಲಕ ತಿಳಿಸಿದಳು. ಕಡೆಯಲ್ಲಿ ಉಳಿದವರು, ಸುಮತಿಯ ತಂದೆ ಹಾಗೂ ತಂಗಿ, ಸುಮತಿ ಅವರಿಬ್ಬರಿಗೂ ಮಲಗಲು ಹಾಸಿಗೆ, ಹೊದ್ದಿಕೆಗಳನ್ನು ಕೊಟ್ಟು ಮಹಡಿಗೆ ಬಂದಳು. ಸಂಕೇತನ ರೂಮಿನ ದೀಪ ಉರಿಯುತ್ತಿತ್ತು. ಸುಮ್ಮನೇ ಎಂಬಂತೆ ಇಣುಕಿ ನೋಡಿದಳು. ಸಂಕೇತ್ ಕುಡಿಯಲು ಪ್ರಾರಂಭಿಸುತ್ತಿದ್ದ. ಸುಮತಿ ಒಳಗೆ ಬಂದಳು. ಅವಳನ್ನು ನೋಡಿ ಸಂಕೇತ ಮುಗುಳ್ನಕ್ಕ.

''ಓ... ನೀನಾ... ನಾನು ಯಾರೋ ಅಂತಿದ್ದೆ... ಬಾ ಕೂತ್ಕೋ ಕಂಪೆನಿ ಕೊಡ್ತೀಯಾ ... ?''

''ಇದೆಲ್ಲಾ ಏನು ಸಂಕೇತ್... ಮಲಗಬಾರದಾ ?'' ಮುಖ ಸಿಂಡರಿಸಿದಳು.

''ಮಲಗ್ತೀನಿ... ಒಂದೋ ಎರಡೋ ಪೆಗ್ ಅಷ್ಟೇ... ಹಾಳಾದ್ದು ಏನೋ ಚಪಲ...'' ಅವಳ ಕಡೆ ನೋಡದೇ ಉತ್ತರಿಸಿದ.

''ಒಂದು, ಎರಡು, ಅಂತ ಆಮೇಲೆ ಅದೆಷ್ಟು ಪೆಗ್ ತಗೋತೀರೋ... ಎಳಿ ತೆಗೆದಿಟ್ಟು ಮಲಕ್ಕೊಳ್ಳಿ...''

''ಪಾರ್ಟೀಲಿ ಡ್ರಿಂಕ್ಸ್ ಬೇಡಾಂತ ಅಂದೆ, ಈಗ ನಿನಗೇನು ಪ್ರಾಬ್ಲಂ...?''

''ನನಗೇನೂ ಪ್ರಾಬ್ಲಂ ಇಲ್ಲ... ಆದರೆ ಡ್ರಿಂಕ್ಸ್ ಒಳ್ಳೇದಲ್ಲ...''

''ನನ್ನ ಒಳ್ಳೇದನ್ನು ಯೋಚಿಸ್ತೀಯಾ ? ಯಾವಾಗ್ನಿಂದ ?'' ನಕ್ಕ.

''ಹೀಗ್ಯಾಕೆ ಕೇಳ್ತೀರಿ ?''

''ಮತ್ತಿನ್ನೇನು ? ನಾನೂ ನೋಡ್ತಾನೇ ಇದೀನಿ. ನಿನಗೆ ಮಗ ಹುಟ್ಟಿದ ಮೇಲೆ, ನನ್ನನ್ನು ಮರೆತೇ ಬಿಟ್ಟಿದ್ದೀಯ... ಒಂಟಿತನವನ್ನು ಕಳೆಯುಕ್ಕೆ ಆಗ ಈಗ ಈ ಡ್ರಿಂಕ್ಸ್ ತಗೋತೀನಿ... ತುಂಬಾ ಹೊತ್ತಾಗಿದೆ. ನೀನು ಹೋಗು ಮಲಕ್ಕೋ... ಗುಡ್‌ನೈಟ್.''

''ಇಲ್ಲ, ಸಂಕೇತ್... ಒಂದು ಇತ್ಯರ್ಥವಾಗಲೇಬೇಕು... ನೀವೇಕೆ ಒಂಟಿಯಾಗಿರ ಬೇಕು? ನಾನು ಅವತ್ತೇ ಹೇಳಿದ್ದೆ... ನಾನು ಡೈವೋರ್ಸ್ ಕೊಟ್ಟು ಬಿಡ್ತೀನಿ. ಮತ್ತೆ ಮದುವೆಯಾಗಿ... ಅಂತ... ನೆನಪಿದೆಯಾ ?''

''ಮದುವೆ ? ಹಾಳಾದ್ದು ಈ ಮನಸ್ಸು ಒಪ್ಪೋದೇ ಇಲ್ವೇ ? ಅಮೆರಿಕಾದಲ್ಲಿದ್ದರೂ ನಾನು ಯಾರನ್ನೂ ಕಣ್ಣೆತ್ತಿ ಸಹ ನೋಡಿರಲಿಲ್ಲ... ಅಷ್ಟು ಪ್ರೀತಿ ನಿಷ್ಠೆ ನನ್ನದು... ಯಾರನ್ನೇ ಮದುವೆಯಾದರೂ ಪ್ರೀತಿಸುವುದು ಮಾತ್ರ ನಿನ್ನನ್ನೇ... ಬೇರೆ ಇನ್ನೊಬ್ಬಳ ಲೈಫ್ ನಮ್ಮಿಂದಾಗಿ ಹಾಳಾಗಬೇಕಾ ?''

''ಹಾಗಲ್ಲ...''

''ಹಾಗೆ ಹೀಗೆ ಏನಿಲ್ಲ, ನನಗೆ ಉಪದೇಶ ಮಾಡಬೇಡ. ನನ್ನ ಪಾಡಿಗೆ ನನ್ನನ್ನು ಬಿಟ್ಟುಬಿಡು...'' ಮತ್ತೊಂದು ಗುಟುಕು ಕುಡಿದ...ಸುಮತಿ ಹತ್ತಿರ ಬಂದು ಅವನ ಕೈಯಲ್ಲಿದ್ದ ಗ್ಲಾಸನ್ನು ಕಿತ್ತು ಇಟ್ಟಳು.

''ಏನ್ಮಾಡ್ತಿದೀಯ ? ಈಗ ಈ ಹ್ಯಾಪಿನೆಸ್‌ನ್ನು ಕಿತ್ಕೋಬೇಡ ನನ್ನಿಂದ'

''ಇದರಿಂದ ಹ್ಯಾಪಿನೆಸ್ ಸಿಗುಲ್ಲ ಸಂಕೇತ್. ಹೆಲ್ತ್ ಹಾಳಾಗುತ್ತೆ ಅಷ್ಟೇ... ಇನ್ನು ಸಾಕು ಏಳಿ...'' ಎನ್ನುತ್ತಾ ಅವನ ತೋಳಿಗೆ ಕೈ ಹಾಕಿದಳು. ಅವನು ಹಾಗೇ ಅವಳಿಗೆ ಒರಗಿಕೊಂಡ. ''ಸುಮತಿ... ಐ ಲವ್‌ಯೂ, ಐ ಲವ್ ಯೂ ವೆರಿಮಚ್... ನನಗೆ ನೀನು ಬೇಕು... ನನಗೆ ನೀನು ಬೇಕು''ಗೊಣಗಿದ.

''ಸುಮತಿ ಅವನನ್ನು ತನ್ನ ಎದೆಗೆ ಒರಗಿಸಿಕೊಂಡಳು'' ನನಗೂ ನಿಮ್ಮ ಭಾವನೆಗಳು ಅರ್ಥವಾಗುತ್ತೆ... ಆದರೆ ನಾನೇನು ಮಾಡಲಿ ?'' ತನ್ನಲ್ಲೇ ಹೇಳಿಕೊಂಡು ಆ ಮಾತುಗಳನ್ನು ಮರೆಸುವವಳಂತೆ ಮಾತಿನ ದಿಕ್ಕನ್ನು ಬದಲಾಯಿಸಿದಳು.

''ನನ್ನ ತಂಗಿಗೆ, ನಿಮ್ಮ ತಂಗಿಗೆ ಉಡುಗೊರೆ ತಂದಿದ್ರಿ... ನನಗೆ ಏನನ್ನು ತರಲಿಲ್ವಾ ?'' ಆಕ್ಷೇಪಣೆ ಮಾಡಿದಳು.

''ನಿನಗೆ, ಮಮ್ಮಿಗೆ, ಅವನಿಗೆ ಎಲ್ಲರಿಗೂ ತಂದಿದ್ದೆ.. ಆದರೆ ಮರೆತೇ ಹೋಯ್ತು. ತಗೋ ಇಲ್ಲಿದೆ' ಎನ್ನುತ್ತಾ ಉಡುಗೊರೆಯ ಪ್ಯಾಕೆಟ್ಟುಗಳನ್ನು ತೋರಿದ...

''ಮರೆಯೋಕೆ ಸಾಧ್ಯಾನಾ ? ಬೇಕೂಂತ ಕೊಟ್ಟಿಲ್ಲ.. ಜಗ್ಗೂನ ಬೇಕೂಂತ ಮರೆತಿರಬಹುದು... ನನಗೆ ಕೊಟ್ಟರಾಯ್ತು ಅಂತ ಸುಮ್ಮನಿರಬಹುದು. ಆದರೆ, ಆಂಟೀ.. ಆಂಟಿ ಹೆತ್ತ ತಾಯಿ, ಅವರನ್ನು ಮರೆಯೋ ಮಾತೇ ಇಲ್ಲ, ನೀವು ಸುಳ್ಳು ಹೇಳ್ತಿದೀರಿ...'' ಅವನನ್ನು ಹಿಂದಕ್ಕೆ ನೂಕಿದಳು.

''ಹೌದು. ನಾನು ಸುಳ್ಳು ಹೇಳ್ತಿದೀನಿ...'' ಸುಮ್ಮನೇ ಹಂಗಿಸಿ ಅನ್ನಬೇಡ. ತಾಯಿಯ ಪ್ರೇಮದಿಂದ ವಂಚಿತನಾದವನು ನಾನು... ಹಗಲೂ ರಾತ್ರಿ ಆ ಅನಿಸಿಕೆ ನನ್ನನ್ನು ಸತಾಯಿಸುತ್ತಿರುತ್ತೆ... ನಿನಗೆ ಹೇಗೆ ಗೊತ್ತಾಗಬೇಕು ಅದೆಲ್ಲಾ...?''

''ಹೌದು ಅದರ ಅನುಭವ ನನಗಿಲ್ಲ, ತುಂಬಿದ ಮನೆಯಲ್ಲಿ ಬೆಳೆದವಳು ನಾನು... ಆದರೂ ನನ್ನ ತಾಯಿ, ಗಂಡು ಮಕ್ಕಳಲ್ಲೂ ಹೆಣ್ಣು ಮಕ್ಕಳಲ್ಲೂ ಮಾಡುತ್ತಿದ್ದ ಭೇದದ ಅರಿವಿದೆ ನನಗೆ.. ಆದರೆ ಮದುವೆಯಾದ ನಂತರ ನಮಗೆ ತವರಿನ ಮೇಲೆ ಪ್ರೀತಿ ಇನ್ನು ಹೆಚ್ಚಾಗುತ್ತೆ. ಆದರೆ ಗಂಡು ಮಕ್ಕಳಾದ ನಿಮಗೆ ನಿಮ್ಮದೇ ಮನೆ... ತಾಯಿ ನಿಮ್ಮವಳೇ... ಆದರೂ ಹೀಗೆ ನಿಮ್ಮ ನಿಮ್ಮಲ್ಲೇ ಏನೂ ಕಲ್ಪನೆಗಳನ್ನು ಬೆಳೆಸಿಕೊಂಡು, ನಿಮ್ಮನ್ನು ನೀವು ಹಾಳು ಮಾಡಿಕೊಳ್ತಿದೀರಿ... ಅಷ್ಟೇ...''

''ಇಲ್ಲಾ.. ಇಲ್ಲಾ..'' ಅವನು ಎತ್ತರದ ಧ್ವನಿಯಲ್ಲಿ ಮಾತನಾಡಿದಾಗ ಅವಳು ಎಚ್ಚರಿಸಿದಳು.

''ಷ್ ಮೆಲ್ಲಗೇ... ಯಾಕೆ ಹೀಗೆ ಎಕ್ಸೈಟ್ ಆಗ್ತೀರಿ ? ಮಧ್ಯ ರಾತ್ರಿ ಆಗಿದೆ. ಎಲ್ರಿಗೂ ಕೇಳುತ್ತೆ... ಏನಂದ್ಕೊಳ್ತಾರೆ ?''

''ಕೇಳ್ಸಿದ್ರೆ ಕೇಳಿಸ್ಲಿ, ಎಲ್ರಿಗೂ ಗೊತ್ತಾಗ್ಲೀ... ಈ ಸಂಕೇತ ಎಷ್ಟು ಕೆಟ್ಟವನು ಅಂತ...'' ಕೆಟ್ಟ ಮುಖ ಮಾಡಿದ.

''ಇಲ್ಲ, ಸಂಕೇತ್, ನೀವು ಕೆಟ್ಟವರಲ್ಲ, ನಿಮ್ಮನ್ನು ತಪ್ಪಾಗಿ ತಿಳಿದುಕೊಂಡಿದ್ದ ನಾನೇ ಕೆಟ್ಟವಳು.''

''ಇಲ್ಲ ನಾನೇ ಕೆಟ್ಟವನು. ಯಾರ್ಗೂ ಬೇಡವಾದವನು. ನಾನು ಬದಲಾಗಲು ಸಾಧ್ಯವೇ ಇಲ್ಲ'' ಮತ್ತೆ ಅವನು ಏರು ಧ್ವನಿಯಲ್ಲಿ ನುಡಿದಾಗ ಅವಳು ಅವನ ಬಾಯ ಮೇಲೆ ಕೈಯನ್ನಿಟ್ಟಳು.

''ಪ್ಲೀಸ್ ಹೀಗೆಲ್ಲಾ ಮಾತಾಡ್ಬೇಡಿ. ನಂಗೆ ಸಂಕಟವಾಗುತ್ತೆ ನನಗೆ ನೀವು ಬೇಕು. ನಿಮ್ಮ ತಾಯಿಗೂ ನೀವು ಬೇಕು.

ಸುಳ್ಳು. ನಿಂಗೆ ನಿನ್ನ ಮಗ ಒಬ್ಬನಿದ್ರೆ ಸಾಕು. ಮಮ್ಮೀಗೆ ಅವನೊಬ್ಬನಿದ್ರೆ ಸಾಕು. ನಾನು...? ಯಾರಿಗೂ ಬೇಡ. ತಲೆ ಅಡ್ಡಡ್ಡ ಆಡಿಸಿದ.

ಷಟಪ್ ಸಂಕೇತ್ ಈ ಮಗು ನಿಮ್ಮದು. ಮಮ್ಮಿ ನಿಮ್ಮವರು. ಏಳಿ... ಮಲಕ್ಕೊಳ್ಳಿ. ಚೆನ್ನಾಗಿ ನಿದ್ದೆ ಮಾಡಿದ್ರೆ ಬೆಳಗಿನ ಹೊತ್ಗೆ ನಿಮ್ಮ ಮೈಂಡ್ ಕ್ಲಿಯರ್ ಆಗಿರುತ್ತೆ.'' ಎಬ್ಬಿಸಲು ನೋಡಿದಳು.

''ಹಾಗಾದ್ರೆ, ನೀನೂ ಇಲ್ಲೇ ನನ್ನ ಜೊತೆ ಮಲಕ್ಕೋ ಬೇಕು ನಾನು ಹೆಚ್ಚೆ ಕುಡಿದಿಲ್ಲ. ಆಂ... ನೋಡು ವಾಸ್ನೆ ಇಲ್ಲ'' ಬಾಯನ್ನು ಅವಳ ಮುಖದ ಮುಂದೆ ಒಡ್ಡಿದ.

''ನಾನಾ ?... ಇಲ್ಲಿ'' ಅನುಮಾನಿಸಿದಳು.

''ಸರಿ ಹೋಗು ನಿನಗಿಷ್ಟವಿಲ್ಲದಿದ್ರೆ...'' ಅವಳನ್ನು ಅತ್ತ ತಳ್ಳಿ ಮತ್ತೆ ಗ್ಲಾಸಿಗೆ ಕೈ ಹಾಕಿದ. ಸುಮತಿ ಗ್ಲಾಸನ್ನು ಕೈಯಿಂದ ಕಿತ್ತು ದೂರ ಇಟ್ಟಳು.

''ಓ.ಕೆ. ನಾನು ಇಲ್ಲೇ ಮಲಗ್ತೀನಿ. ಮಗೂಗೆ ಸರಿಯಾಗಿ ಹೊದೆಸಿ. ನೋಡಿ ಬಂದು ಬಿಡ್ತೀನಿ.'' ಹೊರ ಹೊರಟವಳ ಹಿಂದೆಯೇ ಹೊರಟ. ಅವಳು ಬೆಚ್ಚಿ ಹಿಂತಿರುಗಿ ನೋಡಿದಳು. ಸೊಟ್ಟಗೆ ನಕ್ಕಳು.

''ನಿಮಗೆ ನಿನ್ನ ಮಾತಿನ ಮೇಲೆ ನಂಬ್ಕೆ ಇಲ್ವಾ ?''

''ಇಲ್ಲ, ನೀನು ಬಹಳ ಸತಾಯಿಸ್ತೀಯ. ನಾನೂ ಇಲ್ಲೇ ನಿನ್ನ ಜೊತೇಲಿ ಮಲಗ್ತೀನಿ.''

''ಸರಿ'' ಅವಳು ಒಳ ಬಂದು ಮಗುವಿನ ಕಡೆ ಗಮನ ಹರಿಸಿದಳು. ಅವನು ಅವಳ ಚಲನವಲನವನ್ನೇ ಗಮನಿಸುತ್ತಿದ್ದ. ಅವಳು ಇತ್ತ ತಿರುಗಿದ ಕೂಡಲೇ ತೋಳು ಚಾಚಿ ತನ್ನೆಡೆಗೆ ಎಳೆದುಕೊಂಡ. ಸುಮತಿಗೆ ಕಷ್ಟವೆನಿಸಿದರೂ ಬಿಡಿಸಿಕೊಳ್ಳಲಿಲ್ಲ. ತಂದೆ ಹೇಳಿದ್ದ ಮಾತುಗಳು ನೆನಪಾಗಿದ್ದವು. ಸಂಕೇತ ಆಶ್ಚರ್ಯದಿಂದ ಅವಳ ಕೈಬಿಟ್ಟು ತಳ್ಳಿದ. ಅವಳು ಕೆಳಗೆ ಬಿದ್ದಳು. ಸಾವರಿಸಿಕೊಂಡು ಎದ್ದು ರೇಗಿದಳು.

''ಇದೇನು ಮಾಡ್ತಿದೀರಿ ಸಂಕೇತ್ ? ತಮಾಷೇನಾ ? ಅಥವಾ ಡ್ರಿಂಕ್ಸ್ ಹೆಚ್ಚಾಯಿತೋ ? ಅಥವಾ ನನ್ನನ್ನ ಪರೀಕ್ಷೆ ಮಾಡ್ತಿದೀರೋ ?'' ಸಂಕೇತ ಪೆಚ್ಚಾದ.

''ಸಾರಿ ಡಿಯರ್... ಪೆಟ್ಟಾಯ್ತಾ ?... ನೋಡಿದ್ಯಾ ನಾನು ಎಷ್ಟು ಕೆಟ್ಟವನು ಅಂತ. ತಪ್ಪು ಮಾಡ್ತಾನೇ ಇರ್ತೀನಿ. ನನ್ನ ತಪ್ಪಿಗೆ ಶಿಕ್ಷೆಯಾಗಲೇಬೇಕು'' ಎನ್ನುತ್ತಾ ಅವಳ ಕೈಯನ್ನೆತ್ತಿ ತನ್ನ ಕೆನ್ನೆಗೆ ಪಟಪಟನೆ ಹೊಡೆದುಕೊಂಡ.

''ಹೀಗೆಲ್ಲಾ ಬಿಹೇವ್ ಮಾಡ್ಬೇಡಿ ಸಂಕೇತ್. ನಂಗೆ ಭಯ ಆಗುತ್ತೆ'' ಅವಳು ಅವನನ್ನು ಮಂಚದ ಮೇಲೆ ಕೂರಿಸಿ ತಾನೂ ಅವನ ಮಗ್ಗುಲಲ್ಲಿ ಕುಳಿತಳು. ತನ್ನ ತಲೆಯನ್ನು ಅವನ ಭುಜಕ್ಕೆ ಒರಗಿಸಿದಳು. ನಾವಿಬ್ಬರೂ ಇವತ್ತಿಂದ ಮತ್ತೆ ಹೊಸ ಬಾಳನ್ನು ಪ್ರಾರಂಭಿಸೋಣ. ನೀವು ಹಿಂದಿನಂತೆ ಖುಷಿ ಖುಷಿಯಾಗಿರಬೇಕು ಅದೇ ನನ್ನಾಸೆ'' ಎಂದಳು.

ಹಿಂದಿನ ಸಂಕೇತ್ ಆಗೋದು ಬೇಡ ನಾನು ಬದಲಾಗಬೇಕು. ಬದಲಾಗುಕ್ಕೆ ಪ್ರಯತ್ನ ಪಡ್ತಿದೀನಿ. ನಾನು ಈ ಮನೆಗೆ ಹಿರಿಯ ಮಗ. ಆ ಜವಾಬ್ದಾರಿ ನನಗೆ ಬರಲಿ ಇನ್ನು ಮುಂದಾದ್ರೂ ಮಮ್ಮೀನ ಖುಷಿಯಾಗಿಟ್ಟುಕೊಳ್ಬೇಕು. ಅದಕ್ಕೆ ನಾನು ಏನು ಮಾಡ್ಬೇಕು... ನಾನು ಏನು ಮಾಡಿದ್ರೆ

ಮಮ್ಮಿಗೆ ಖುಷಿಯಾಗುತ್ತೆ ಹೇಳ್ತೀಯಾ ? ನಂಗಿಂತ ನಿಂಗೇ ಚೆನ್ನಾಗಿ ಗೊತ್ತು ಮಮ್ಮಿಯ ವಿಷಯ ಸುಮತಿ ಅವನನ್ನೇ ಸಂಶಯದಿಂದ ನೋಡಿ ಗೊತ್ತಿಲ್ಲ ಎನ್ನುವಂತೆ ತಲೆ ಆಡಿಸಿದಳು.

''ನಾನೇ ಹೇಳ್ಲಾ ? ಜಗ್ಗು ಇಲ್ಲೇ ಈ ಮನೇಲೇ ಇದ್ರೇ, ಮಮ್ಮೀಗೆ ಖಂಡಿತಾ ಖುಷಿಯಾಗುತ್ತೆ ? ಅಲ್ವಾ ?'' ಸುಮತಿ ಉತ್ತರಿಸಲಿಲ್ಲ.

''ಯಾಕೆ ? ನಿಂಗೆ ನನ್ನ ಮಾತಿನ ಮೇಲೆ ನಂಬಿಕೆ ಬರ್ತಿಲ್ವಾ ? ಇವತ್ತು ಜಗ್ಗೂನ ವಾಪಸ್ಸು ಕರೆತಂದವನು ನಾನೇ...'' ಸುಮತಿ ತಲೆ ಎತ್ತಿದಳು.

''ಹೌದಾ ? ನಿಜವಾಗಿಯೂ ?'' ಅಷ್ಟಕ್ಕೇ ಮಾತನ್ನು ನಿಲ್ಲಿಸಿ ಅವನನ್ನೇ ಅನುಮಾನದಿಂದ ನೋಡಿದಳು. ಅವನು ಬಾಯ್ತುಂಬಾ ನಕ್ಕ.

ಎಸ್. ನಾನೇ ಆದರೆ ಈ ವಿಷಯ ಯಾರಿಗೂ ತಿಳಿಯದಂತೆ ಸಸ್ಪೆನ್ಸ್ ಆಗಿ ಇಟ್ಟವನೂ ನಾನೇ. ಈಗ ಹೇಳು ಸುಮತಿ. ನಾನು ಮಾಡಿದ್ದು ಸರಿ ತಾನೇ ?''

''ಇಲ್ಲ ನೀವು ತುಂಬಾ ಕೆಟ್ಟೋರು'' ಎಂದು ಹೇಳಿ ಅವನ ಎದೆಗೆ ಗುದ್ದಿ, ಮುದ್ದಿಸಿದಳು.

''ಈ ದಿನಕ್ಕಾಗಿ, ಈಗಳಿಗೆಗಾಗಿ ನಾನು ಕಾಯುತ್ತಿದ್ದೆ ಸುಮತೀ... ನನಗೆ ನೀನು ಬೇಕು. ನೀನಿಲ್ಲದೇ ಇರಲಾರ... ಈ ಈಡಿಯಟ್... ಈ ಒಂದು ವರುಷ ಹೇಗೆ ಕಾಲ ಕಳೆದೆ ಅಂತ ನಂಗೆ ಮಾತ್ರ ಗೊತ್ತು... ನಾನೆಷ್ಟು ಒಂಟಿಯಾಗಿ ಬಿಟ್ಟಿದ್ದೆ ಗೊತ್ತಾ ?''

''ಸಾರಿ ಸಂಕೇತ್. ಏನೇನೋ ನಡೆದು ಹೋಯ್ತು. ಇನ್ನೆಂದೂ ಹೀಗಾಗುವುದಿಲ್ಲ.''

''ಪ್ರಾಮಿಸ್''.... ಮಂದಹಾಸದಿಂದ ಕೇಳಿದ.

''ಪ್ರಾಮಿಸ್''.... ತನ್ನ ಕತ್ತಿಗೆ ಬೆರಳನ್ನು ತಾಗಿಸಿಕೊಂಡು ಕಿಲಕಿಲನೆ ನಕ್ಕಳು. ಈ ಚಿತ್ರಾಂಗದೆ ಎಂದೆಂದಿಗೂ ನಿಮ್ಮವಳೇ... ಆ ಕೆಟ್ಟಕಾಲ ಕಳೆದಿದೆ ; ಹೊಸ ಕಾಲ ಶುರುವಾಗಿದೆ.''

''ನೀನು ಚಿತ್ರಾಂಗದೆಯಾಗುವುದೂ ಬೇಡ ; ಈ ವಿರಹವೂ ಬೇಡ. ನೀನು ಸುಮತಿಯೇ ಆಗಿರು. ನನ್ನದೊಂದು ಚಿಕ್ಕ ಆಸೆ... ನನಗೆ ಒಬ್ಬ ಮಗಳು ಬೇಕು. 'ಪುನೀತ' ನನ್ನಂತೆ ಒಂಟಿಯಾಗಿ ಬೆಳೆಯಬಾರದು.''

''ಆಂ ಆಸೆ ನೋಡು... ಚಿಕ್ಕ ಆಸೆ ಅಲ್ವಾ ? ಅವನ ಮೂಗನ್ನು ಹಿಂಡಿದಳು. ನಮ್ಮ ಮಗಳಿಗೆ 'ಪಾವನ' ಅಂತ ಹೆಸರಿಡೋಣ...'' ಅವಳೂ ತನ್ನ ಆಸೆಯನ್ನು ಪ್ರಕಟಗೊಳಿಸಿದಳು. ಪ್ರೀತಿಯ ಅಲೆಗಳು ಕಡಲಿನ ನೋವನ್ನು ಮರೆತವು. ಆಸೆಯಿಂದ ಮುನ್ನುಗ್ಗಿದವು. ಪ್ರೀತಿಯಿಂದ ಅಪ್ಪಿಕೊಂಡವು.

— ಮುಗಿಯಿತು —

